# ಆಧುನೀಕರಣ ಪ್ರಕ್ರಿಯೆ : ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಜಾನಪದ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕ
ಶರಣಪ್ಪ

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು ಹಾಗೂ ಡೀನ್
ಸಮಾಜ ವಿಜ್ಞಾನಗಳ ನಿಕಾಯ
ಜಾನಪದ ಅಧ್ಯಯನ ವಿಭಾಗ






ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೬

# ಆಧುನೀಕರಣ ಪ್ರಕ್ರಿಯೆ : ಕುಷ್ಟಗಿ ಪರಿಸರದ ಪಾರಂಪರಿಕ ಕಸುಬುಗಳು

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)



ಸಂಶೋಧಕರು
**ಶರಣಪ್ಪ**

ಮಾರ್ಗದರ್ಶಕರು
**ಡಾ. ಮಂಜುನಾಥ ಬೇವಿನಕಟ್ಟಿ**
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ, ಕನ್ನಡ ವಿವಿ, ಹಂಪಿ.



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ- ೫೮೩ ೨೭೬
೨೦೧೬




# ಮಾರ್ಗದರ್ಶಕರ ದೃಢೀಕರಣ ಪತ್ರ

**'ಆಧುನೀಕರಣ ಪ್ರಕ್ರಿಯೆ : ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳು'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು **ಶರಣಪ್ಪ** ಇವರು ನನ್ನ ಮಾರ್ಗದರ್ಶನದಲ್ಲಿ ಪಿಹೆಚ್.ಡಿ. ಪದವಿಗಾಗಿ ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ. ಇದನ್ನು ಈ ಹಿಂದೆ ಯಾವುದೇ ಪದವಿಗಾಗಿ ಬೇರೆ ವಿಶ್ವವಿದ್ಯಾಲಯಕ್ಕೆ ಅಥವಾ ಇತರೆ ಸಂಘ ಸಂಸ್ಥೆಗಳಿಗೆ ಸಲ್ಲಿಸಿಲ್ಲವೆಂದು ಹಾಗೆಯೇ ಈ ವಿಷಯದ ಕುರಿತು ಇಡಿಯಾಗಿ ಅಥವಾ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದೂ ಈ ಮೂಲಕ ನಾನು ದೃಢೀಕರಿಸುತ್ತೇನೆ.


**(ಡಾ. ಮಂಜುನಾಥ ಬೇವಿನಕಟ್ಟಿ)**
ಪ್ರಾಧ್ಯಾಪಕರು ಹಾಗೂ ಡೀನ್
ಸಮಾಜ ವಿಜ್ಞಾನಗಳ ನಿಕಾಯ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬


ಸ್ಥಳ :– ವಿದ್ಯಾರಣ್ಯ
ದಿನಾಂಕ :– ೧೩.೧೦.[illegible]೧೬

## ಸಂಶೋಧಕರ ಪ್ರಮಾಣ ಪತ್ರ

**'ಆಧುನೀಕರಣ ಪ್ರಕ್ರಿಯೆ : ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳು'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನಾನು **ಡಾ. ಮಂಜುನಾಥ ಬೇವಿನಕಟ್ಟಿ,** ಪ್ರಾಧ್ಯಾಪಕರು, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಇವರ ಮಾರ್ಗದರ್ಶನದಲ್ಲಿ ಪಿಹೆಚ್.ಡಿ. ಪದವಿಗಾಗಿ ಸಿದ್ಧಪಡಿಸಿರುತ್ತೇನೆ. ಇದನ್ನು ಈ ಹಿಂದೆ ಯಾವುದೇ ಪದವಿಗಾಗಿ ಬೇರೆ ವಿಶ್ವವಿದ್ಯಾಲಯಕ್ಕೆ ಅಥವಾ ಇತರೆ ಸಂಘ ಸಂಸ್ಥೆಗಳಿಗೆ ಸಲ್ಲಿಸಿಲ್ಲವೆಂದು ಹಾಗೆಯೇ ಈ ವಿಷಯದ ಕುರಿತು ಇಡಿಯಾಗಿ ಅಥವಾ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದೂ ಈ ಮೂಲಕ ನಾನು ದೃಢೀಕರಿಸುತ್ತೇನೆ.

**(ಶರಣಪ್ಪ)**

ಸಂಶೋಧಕರು

ವಿದ್ಯಾರಣ್ಯ ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩೨೭೬

ಸ್ಥಳ :– ವಿದ್ಯಾರಣ್ಯ

ದಿನಾಂಕ :– ೧೩.೧೦.೨೦೧೬

## -: ಹರಹು :-


| | | |
|---|---|---|
| ೧ | **ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ** | ೧–೩೦ |
| ೧.೧ | ಪ್ರಸ್ತಾವನೆ | |
| ೧.೨ | ಸಂಶೋಧನೆಯ ಉದ್ದೇಶ | |
| ೧.೩ | ಸಂಶೋಧನೆಯ ವ್ಯಾಪ್ತಿ | |
| ೧.೪ | ಸಂಶೋಧನೆಯ ಮಹತ್ವ | |
| ೧.೫ | ಅಧ್ಯಯನದ ವಿನ್ಯಾಸ | |
| ೧.೬ | ಅಧ್ಯಯನದ ವಿಧಾನ | |
| ೧.೭ | ಇಲ್ಲಿಯವರೆಗೆ ನಡೆದ ಅಧ್ಯಯನಗಳು | |
| ೨ | **ಕುಷ್ಟಗಿಯ ಭೌಗೋಳಿಕ & ಐತಿಹಾಸಿಕ ಅವಲೋಕನ** | ೩೧–೪೩ |
| ೨.೧ | ಸಾಹಿತ್ಯ, ಶಾಸನ ಹಾಗೂ ಐತಿಹ್ಯಗಳಲ್ಲಿ ಕುಷ್ಟಗಿ | |
| ೨.೨ | ಪ್ರಸ್ತುತ ಅಂಕಿ–ಅಂಶಗಳು | |
| ೨.೩ | ಭೌಗೋಳಿಕ ಅವಲೋಕನ | |
| ೨.೪ | ಐತಿಹಾಸಿಕ ಅವಲೋಕನ | |
| ೩ | **ಪಾರಂಪರಿಕ ಕಸಬುಗಳು** | ೪೪–೨೦೯ |
| ೩.೧ | ಪರಂಪರೆಯ ಉಗಮ | |
| ೩.೨ | ಪಾರಂಪರಿಕ ಕಸಬುಗಳ ಉಗಮ | |
| ೩.೩ | ಪಾರಂಪರಿಕ ಕಸಬು – ಪದ | |
| ೩.೪ | ಪಾರಂಪರಿಕ ಕಸಬುಗಳು ನಡೆದು ಬಂದ ದಾರಿ | |
| **೩.೫** | **ಕುಷ್ಟಗಿ ಪರಿಸರದ ವಿಶಿಷ್ಟ ಪಾರಂಪರಿಕ ಕಸಬುಗಳು** | |
| ೩.೫.೧ | ಇಳಕಲ್ ಸೀರೆ ನೇಕಾರಿಕೆ | |
| ೩.೫.೨ | ಗುಳೇದಗುಡ್ಡದ ಖಣ ನೇಕಾರಿಕೆ | |
| ೩.೫.೩ | ಕಮತಗಿ ಪಟಗ ಮತ್ತು ರುಮಾಲು ನೇಕಾರಿಕೆ | |
| ೩.೫.೪ | ಅಮೀನಗಡದ ಕರದಂಟು ತಯಾರಿಕೆ | |
| ೩.೫.೫ | ರಾಜೂರ ಸುಣ್ಣ ತಯಾರಿಕೆ | |
| ೩.೫.೬ | ಭಾಗ್ಯನಗರದ ಕೇಶೋದ್ಯಮ | |
| ೩.೫.೭ | ಕಿನ್ನಾಳ ಕಿಟ್ಟದ ಗೊಂಬೆ ತಯಾರಿಕೆ | |
| ೩.೫.೮ | ಹನಮಸಾಗರ ಕೌದಿ ಹೊಲಿಗಾರಿಕೆ | |
| ೩.೫.೯ | ಕೊಪ್ಪಳ ಮಂಡಾಳು ತಯಾರಿಕೆ | |

೩.೬ **ಕುಷ್ಟಗಿ ಪರಿಸರದ ಸಾಮಾನ್ಯ ಪಾರಂಪರಿಕ ಕಸಬುಗಳು**
೩.೬.೧ ಕುಂಬಾರಿಕೆ
೩.೬.೨ ಕಮ್ಮಾರಿಕೆ
೩.೬.೩ ಪತ್ತಾರಿಕೆ
೩.೬.೪ ಬಡಗಿತನ
೩.೬.೫ ಕೊರವರ ಕಸಬು
೩.೬.೬ ಮೇದಾರಿಕೆ
೩.೬.೭ ಚಿತ್ರಗಾರಿಕೆ
೩.೬.೮ ಹೂಗಾರಿಕೆ
೩.೬.೯ ಮಡಿವಾಳಿಕೆ
೩.೬.೧೦ ಕ್ಷೌರಿಕ ಕಸಬು
೩.೬.೧೧ ಬಯಲು ಕಮ್ಮಾರಿಕೆ
೩.೬.೧೨ ಕಲ್ಲುಕುಟಿಗ ಕಸಬು
೩.೬.೧೩ ಚಮ್ಮಾರಿಕೆ
೩.೬.೧೪ ಶಿಲ್ಪಗಾರಿಕೆ
೩.೬.೧೫ ನಾಲಗಾರಿಕೆ

**೪ ಪಾರಂಪರಿಕ ಕಸಬುಗಳ ಸಮಸ್ಯೆಗಳು ಮತ್ತು ಪರಿಹಾರಗಳು ೨೧೦–೨೮೨**
೪.೧ ಪಾರಂಪರಿಕ ಕಸುಬುದಾರರ ಮಾರಾಟ ಪ್ರಕ್ರಿಯೆಯ ಸಮಸ್ಯೆಗಳು
೪.೨ ಮಾರಾಟ ಪ್ರಕ್ರಿಯೆಯ ಸಮಸ್ಯೆಗೆ ಪರಿಹಾರೋಪಾಯಗಳು
೪.೩ ನೇಪಥ್ಯಕ್ಕೆ ಸರಿಯುತ್ತಿರುವ ಪಾರಂಪರಿಕ ಕಸಬುಗಳು

**೫ ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳು ಮತ್ತು ಆಧುನೀಕರಣ ೨೮೩–೩೦೫**

**೬ ಸಮಾರೋಪ ೩೦೬–೩೧೭**

**ಅನುಬಂಧಗಳು ೩೧೮–೩೪೮**
೧ ಪರಾಮರ್ಶನ ಗ್ರಂಥಗಳು
೨ ಮಾಹಿತಿದಾರರ ವಿವರ
೩ ವೃತ್ತಿ ಪದಕೋಶ
೪ ಪ್ರಶ್ನಾವಳಿ
೫ ಕುಷ್ಟಗಿ ಪರಿಸರದ ನಕ್ಷೆ
೬ ಛಾಯಾ ಚಿತ್ರಗಳು




ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

೧.೧ ಪ್ರಸ್ತಾವನೆ

೧.೨ ಸಂಶೋಧನೆಯ ಉದ್ದೇಶ

೧.೩ ಸಂಶೋಧನೆಯ ವ್ಯಾಪ್ತಿ

೧.೪ ಸಂಶೋಧನೆಯ ಮಹತ್ವ

೧.೫ ಅಧ್ಯಯನದ ವಿನ್ಯಾಸ

೧.೬ ಅಧ್ಯಯನದ ವಿಧಾನ

೧.೭ ಇಲ್ಲಿಯವರೆಗೆ ನಡೆದ ಅಧ್ಯಯನಗಳು

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

## ೧.೧ ಪ್ರಸ್ತಾವನೆ :

ಭಾರತದ ನೆಲದಲ್ಲಿ ದಿವ್ಯ ಸಂಸ್ಕೃತಿ ಮತ್ತು ಭವ್ಯ ಪರಂಪರೆ ನೆಲೆಗೊಂಡಿದೆ. ಇದನ್ನು ವಿದೇಶಿಯರು ಬೆರಗುಗಣ್ಣುಗಳಿಂದ ಅವಲೋಕಿಸುತ್ತಿರುವುದು ಮಾತ್ರವಲ್ಲ; ನಮ್ಮ ಸಂಸ್ಕೃತಿ ಹಾಗೂ ಪರಂಪರೆಗೆ ಶರಣಾಗುವ ಜೊತೆಗೆ ತಾವೂ ಭಾರತೀಯರಾಗಿ ಬಾಳಲು ಇಚ್ಛಿಸುತ್ತಿದ್ದಾರೆ ಕೂಡಾ! ಇದಕ್ಕೆ ನಮ್ಮ ದೇಶದ ಸಂಸ್ಕೃತಿ–ಪರಂಪರೆಯ ಆಳ–ಹರವು–ಹರಿವು–ಅರಿವುಗಳ ಸಂವಹನದ ಪಾತ್ರ ಬಹು ಮುಖ್ಯವೆನಿಸುತ್ತದೆ.

ಪ್ರಕೃತಿಯು ಜಡತ್ವವಾದರೆ, ಸಂಸ್ಕೃತಿಯು ಶೂನ್ಯವಾದರೆ ಯಾವುದೇ ಜಾನಪದ ಪರಂಪರೆ ನಿರರ್ಥಕವಾಗುತ್ತದೆ! ಜನಪದರ ಸಂಸ್ಕೃತಿ ಎಂದರೆ ಪ್ರಕೃತಿಯ ಭಾಗವಾಗಿ ಬದುಕುವುದು ಎಂದರ್ಥ. ಏಕೆಂದರೆ ಪ್ರಕೃತಿಯಲ್ಲಿ ಜನಪದರ ಸಂಬಂಧಗಳು ಬೆರೆತುಕೊಂಡಿರುತ್ತವೆ. ಆದ್ದರಿಂದ ಜನಪದರ ಈ ಸಂಬಂಧಗಳು ಹಾಗೂ ಪ್ರಕೃತಿಗಳು ಸಂಸ್ಕೃತಿಗೆ ನಿರಂತರವಾಗಿ ಸ್ಪಂದಿಸುತ್ತಿರುತ್ತವೆ. ಜನಪದರು ಪ್ರಕೃತಿಯ ಜೊತೆ ಸ್ಪಂದಿಸುತ್ತಾ ಪರಂಪರೆಯನ್ನು ಬೆಳೆಸುವುದನ್ನು ಸಂಸ್ಕೃತಿಯು ನಿರೀಕ್ಷಿಸುತ್ತಿರುತ್ತದೆ. ಇದನ್ನೇ ಚಲನಶೀಲ ಸಮಾಜ ಎನ್ನುವುದು. ಈ ಚಲನಶೀಲ ಸಮಾಜದೊಂದಿಗೆ ಸಂಸ್ಕೃತಿ ಬೆರೆತುಕೊಂಡಿದೆ. ಸಂಸ್ಕೃತಿಯಲ್ಲಿ ಜಾನಪದ ಬೆರೆತುಕೊಂಡಿದೆ. ಜಾನಪದದಲ್ಲಿ ಜನಪದ ಸಾಹಿತ್ಯ, ಕಸಬುಗಳು, ಕಲೆ, ಕರಕುಶಲಕಲೆಗಳನ್ನೂ ಒಳಗೊಂಡಂತೆ ಲಲಿತಕಲೆಗಳೂ ಬೆರೆತುಕೊಂಡಿವೆ.

ಜಾನಪದ ಹಿಂದೆಂದೋ ಹುಟ್ಟಿ ನಂತರ ಕಣ್ಮರೆಯಾಗುವುದಿಲ್ಲ. ಕಾಲಕ್ಕನುಗುಣವಾಗಿ, ಸನ್ನಿವೇಶಕ್ಕನುಗುಣವಾಗಿ ಹೊಂದಿಕೊಳ್ಳುತ್ತಾ ಬದಲಾದ ರೂಪದಲ್ಲಿ ಗುಪ್ತಗಾಮಿನಿಯಂತೆ ಪ್ರವಹಿಸುತ್ತಲೇ ಇರುತ್ತದೆ! ಹಿಂದೆ ಹುಟ್ಟಿದ್ದು ಇಂದು ಜಾನಪದ ಎನಿಸುತ್ತದೆ. ಇಂದು ಹುಟ್ಟಿದ್ದು ಮುಂದೆ ಜಾನಪದ ಎನಿಸಬಹುದು! ಹೀಗಾಗಿ ಜಾನಪದಕ್ಕೆ ರೂಪಭೇದವಿದೆಯೇ ಹೊರತು ಅದಕ್ಕೆ ಸಾವಿಲ್ಲ! ಜಾನಪದ ಸಾಯಲು ನಿರಾಕರಿಸುವ ಜೀವಂತ ಪಳೆಯುಳಿಕೆ ಎಂಬುದು ಅಕ್ಷರಶಃ ಸತ್ಯವಾಗಿದೆ. ತನ್ನ ಮೂಲ ರೂಪಕ್ಕೆ ಧಕ್ಕೆಯಾಗದಂತೆ ವಿಭಿನ್ನ ಆಕೃತಿಯನ್ನು ಪಡೆದುಕೊಳ್ಳಲು ಅಸಾಧ್ಯವೇನಲ್ಲ. ಇಂದು ಗ್ರಾಮೀಣ ಜನತೆ ನಗರಗಳತ್ತ ವಲಸೆ ಹೋಗುತ್ತಿದ್ದಾರೆ. ಆ ನಗರಗಳೇ ಇಂದು

ಜಾನಪದವನ್ನು ಸಂರಕ್ಷಿಸುವ ಮತ್ತು ಸೃಜಿಸುವ ತಾಯಿಯಂತಾಗಿವೆ! ಇದಕ್ಕೆ ಜಾನಪದ, ಜಾನಪದದಲ್ಲಿ ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದಿರುವ ಉತ್ಪಾದನಾ ತಂತ್ರ, ಕುಶಲತೆಯ ಕಸಬುಗಳೂ ಕೂಡಾ ಚಲನಶೀಲವಾಗಿವೆ. ಇಲ್ಲಿನ ಜನಪದರಲ್ಲಿ ಹುದುಗಿಕೊಂಡಿರುವ ಪಾರಂಪರಿಕ ಕಸಬುಗಳು ಸದಾ ಬದಲಾದ ರೂಪದಲ್ಲಿ ಪ್ರವಹಿಸುತ್ತಲೇ ಇರುತ್ತವೆ! ಹಿಂದೆ ಕಟ್ಟಿಗೆಯಿಂದ ತಯಾರಾಗುತ್ತಿದ್ದ ಎತ್ತಿನ ಬಂಡಿಗಳ ರೂಪ ಬದಲಾಗಿದೆ. ಇಂದು ಹಗುರಾದ ಕಬ್ಬಿಣದ ಬಂಡಿಗಳನ್ನು ತಯಾರಿಸುತ್ತಿದ್ದಾರೆ. ಹಿಂದೆ ಕಟ್ಟಿಗೆಯ ಬಂಡಿಯ ಚಕ್ರಕ್ಕೆ ಕಬ್ಬಿಣದ ಹಳಿ ಜೋಡಿಸಲಾಗುತ್ತಿತ್ತುಯಿಂದು ಕಬ್ಬಣದ ಚಕ್ರಕ್ಕೆ ರಬ್ಬರ್ ಟೈರಿನ ಪಟ್ಟಿ ಜೋಡಿಸುತ್ತಾರೆ! ಇದು ವಿಶ್ವದೆಲ್ಲೆಡೆ ಪಾರಂಪರಿಕ ಕಸಬುಗಳ ಸಂವಹನ ಅಸ್ತಿತ್ವದಲ್ಲಿರುವುದನ್ನು ತೋರಿಸುತ್ತದೆ. ಅವು ವಿಭಿನ್ನ ರೂಪದಲ್ಲಿದ್ದರೂ ಸಹ ಆಯಾ ಪ್ರದೇಶದ ಜನಪದ ಸಂಸ್ಕೃತಿಗೆ ಅನುಗುಣವಾಗಿ ಅವುಗಳ ಹರವು ಇದೆ.

ಜಾನಪದವು ಇಂದು ಕೇವಲ ಮೌಖಿಕ ಸಾಹಿತ್ಯ ರೂಪದ ಶಾಖೆಯಾಗಿ ಉಳಿದಿಲ್ಲ, ಬದಲಾಗಿ ಅಂತರ್‌ಶಿಸ್ತೀಯ ಅಧ್ಯಯನಕ್ಕೊಳಪಟ್ಟು ಬಹು ಆಯಾಮವನ್ನು ಪಡೆದಿದೆ. ಜಾನಪದವು ಇಂದು ಶಾಸ್ತ್ರವಾಗಿರದೇ ಸಮಾಜ'ವಿಜ್ಞಾನ'ವಾಗಿ ಬೆಳೆದು ಅನ್ವಯಿಕ ಕ್ಷೇತ್ರಗಳಲ್ಲಿ ಧ್ರುವತಾರೆಯಾಗಿ ಪ್ರಕಾಶಿಸುತ್ತಿದೆ. ಆಧುನಿಕತೆಯ ಸ್ಪರ್ಶದಿಂದಾಗಿ ಜಾನಪದವು ವಿಕಾಸಶೀಲತೆ ಮೈಗೂಡಿಸಿಕೊಂಡು, ಹೊಸ ರೂಪದಲ್ಲಿ ಪ್ರವಹಿಸುತ್ತಿರುವ ಜ್ಞಾನಶಾಖೆಯಾಗಿದೆ. ಜಾನಪದದ ಒಂದು ಭಾಗವೇ ಆಗಿರುವ 'ಕುಲ'ವೃತ್ತಿ ಅಥವಾ 'ಸಮುದಾಯ'(ಜಾತಿ)ವೃತ್ತಿಯಂತಹ ಸಾಂಪ್ರದಾಯಿಕ ಕಸಬುಗಳ ಪರಂಪರೆಯೂ ಕೂಡಾ ವಿಕಾಸಶೀಲತೆ ಹೊಂದಿರುವ ಹೊಸ ಜ್ಞಾನಶಾಖೆಯಾಗಿ ಮಾರ್ಪಟ್ಟಿದೆ.

ಪ್ರಸ್ತುತ ಅಧ್ಯಯನದಲ್ಲಿ 'ಜಾತಿ'ಯನ್ನು 'ಸಮುದಾಯ' ಎಂದೂ, ಅನೇಕ 'ಸಮುದಾಯ'ಗಳನ್ನು 'ಸಮಾಜ' ಎಂದು ವಿವರಿಸಿಕೊಳ್ಳಲಾಗಿದೆ. ಅನಿವಾರ್ಯ ಸಂದರ್ಭದಲ್ಲಿ ಮಾತ್ರ 'ಜಾತಿ' ಎಂಬ ಪದವನ್ನು ಬಳಸಿರುವೆ. ಹಾಗಾಗಿ ಸಮುದಾಯದ ಕಸಬು ಎಂದರೆ, ಜಾತಿ ಸಮುದಾಯದ ಕಸಬು ಎಂದೂ; ಸಾಮಾಜಿಕ ಕಸಬು ಎಂದರೆ, ಅನೇಕ ಜಾತಿ ಸಮುದಾಯಗಳು ಪರಸ್ಪರ ಸಹಾಯಕ ಅಥವಾ ಸೇವಾ ಕಸಬುಗಳು ಎಂದೇ ಆಗುತ್ತದೆ.

ಗ್ರಾಮೀಣ ಪರಿಸರದಲ್ಲಿ ಅತ್ಯಾವಶ್ಯಕವೆನಿಸುವ ಹಾಗೂ ಸಮಾಜದ ಕ್ರಿಯಾಶೀಲ ಭಾಗವಾಗಿ ಕಾಣುವ ಜಾನಪದ ವೃತ್ತಿಗಳನ್ನು ಎರಡು ರೀತಿಯಲ್ಲಿ ವ್ಯಾಖ್ಯಾನಿಸಬಹುದು.

ಒಂದು : ಹಿಂದೂ ಧರ್ಮದ ಸಮುದಾಯ ಆಧಾರಿತ ಧೋರಣೆ. ಎರಡು : ಅನ್ಯ ಸಿದ್ಧಾಂತಗಳನ್ನು ಮೈಗೂಡಿಸಿಕೊಂಡ ಧೋರಣೆ. ಇವೆರಡೂ ಧೋರಣೆಗಳೂ ವೃತ್ತಿಗಳ ಭೌತಿಕ ಸ್ವರೂಪದ ಅಧ್ಯಯನದ ಫಲಿತಗಳಾಗಿವೆ. ಅವರಲ್ಲಿ ಬಹುತೇಕರು ಜನಪದರ ಮೌಖಿಕ ಸಾಹಿತ್ಯ ಸಂಗ್ರಹ ಹಾಗೂ ವಿಶ್ಲೇಷಣೆಗೆ ಒತ್ತು ನೀಡಿದರೆ, ಇನ್ನೂ ಹಲವರು ಜನಪದ ಕಲೆಗಳ ಬೆನ್ನು ಹತ್ತಿದ್ದಾರೆನ್ನಬಹುದು. ಇಲ್ಲಿ ಜನಪದರ ಉದರಂಭರಣದ ಜೊತೆಗೆ ರೈತರಿಗೆ, ವ್ಯಾಪಾರಿಗಳಿಗೆ ಸಹಾಯಕವಾಗಿರುವ ಕಸಬುಗಳನ್ನು ಪ್ರಮುಖವೆಂದು ಪರಿಗಣಿಸಿದಂತೆ ಕಾಣುತ್ತಿಲ್ಲ! ಕೇವಲ ಬೆರಳೆಣಿಕೆಯಷ್ಟು ಜಾನಪದ ತಜ್ಞರು ಸಾಮಾನ್ಯ ಕುಲಕಸಬುಗಳತ್ತ ದೃಷ್ಟಿ ಹರಿಸಿದ್ದಾರೆ.

ಗ್ರಾಮೀಣ ಭಾರತದಲ್ಲಿ ಮೌಖಿಕ ಜಾನಪದ ಸೊಗಡಿನಷ್ಟೇ ಪ್ರಾಮುಖ್ಯತೆ ಕಸಬುಗಳಿಗೆ ಇದೆ. ಇದಕ್ಕೆ ಶ್ರಮವೇ ಬಂಡವಾಳ. ಅನಿವಾರ್ಯವಾದಾಗ ಕೆಲವು ಸರಳ ಯಂತ್ರಗಳು ಬಳಕೆಯಾದವು. ಇವುಗಳೇ ಕೈಕಸಬುಗಳಾದವು. ಕೈಸಬುಗಳೇ ಮನೆತನದ ಉದ್ಯೋಗಗಳಾದವು. ಇವುಗಳೇ ಮುಂದೆ ಕುಲಕಸಬುಗಳಾದವು. ಕುಲಕಸಬುಗಳೂ ಕೇವಲ ಆ ಕುಲಕ್ಕೇ ಸೀಮಿತಗೊಳ್ಳದೇ ಬೇರೆ ಬೇರೆ 'ಸಮುದಾಯ'ದವರೂ ಆ ಕಸಬುಗಳನ್ನು ಅನುಸರಿಸುತ್ತ ಜೀವನ ಸಾಗಿಸುವ ಪರಂಪರೆಯನ್ನು ಮುಂದುವರಿಸಿಕೊಂಡಿವುದರಿಂದ ಅವು 'ಪಾರಂಪರಿಕ ಕಸಬು'ಗಳಾದವು.

ಹೀಗೆ ಹಳ್ಳಿಗಾಡಿನಲ್ಲಿ ಕೆಲವು ಕಸಬುದಾರರು ತಮ್ಮ ತುತ್ತಿನಚೀಲ ತುಂಬಿಸಿಕೊಳ್ಳಲು ತಲೆತಲಾಂತರದಿಂದ ಮುಂದುವರಿಸಿಕೊಂಡು ಬಂದ ಆನುವಂಶಿಕ ವೃತ್ತಿಗಳನ್ನೇ ಪಾರಂಪರಿಕ ಕಸಬುಗಳು ಎನ್ನಬಹುದು. ಈ ಕಸಬುಗಳಿಗೆ ಒಂದು ಪರಂಪರೆಯಿದೆಯೇ ಹೊರತು ಯಾವುದೇ ವಿಧವಾದ ತರಬೇತಿಯಿಲ್ಲ. ಆಧುನಿಕರಣ, ಕೈಗಾರಿಕೀಕರಣ, ಜಾಗತೀಕರಣ, ನಗರೀಕರಣಗಳ ಸ್ಪರ್ಶಪ್ರಭಾವ ಇಂದು ಜಾನಪದೀಯ ಸಂಸ್ಕೃತಿಯ ಬೇರುಗಳನ್ನು ಕತ್ತರಿಸಿ ಹಾಕುತ್ತಿರುವಂತೆ ಭಾಸವಾಗುತ್ತದೆ. ಚಲನಶೀಲ ಸಮಾಜದಲ್ಲಿ ಹಿಂದಿನ ನಂಬಿಕೆಗಳು, ಪದ್ಧತಿಗಳು, ಆಚರಣೆಗಳು, ಅಭಿರುಚಿಗಳು ಬದಲಾವಣೆಗೊಂಡು ಕುಲಕಸಬುಗಳು ಇಂದು ಪರ್ಯಾಯ ಕಸಬುಗಳನ್ನು ಹುಡುಕಿಕೊಂಡಿವೆ ಇಲ್ಲವೇ ಅವುಗಳನ್ನು ಕೈಬಿಟ್ಟಿವೆ! ಆರ್ಥಿಕ ಸ್ವಾವಲಂಬನೆಗಾಗಿ ಕಸಬುದಾರರಲ್ಲದವರೂ ಈ ಕಸಬುಗಳನ್ನು ಕೈಗೊಂಡು ಮೂಲ ಕಸಬುದಾರರಿಗೆ ಸಾಕಷ್ಟು ಪೈಪೋಟಿ ನೀಡುತ್ತಿರುವುದರಿಂದಲೂ ಕೆಲವು ಕಸಬುದಾರರ ಸ್ಥಿತಿ ಅಧೋಗತಿಗಿಳಿದಿದೆ!

ಖ್ಯಾತ ಜಾನಪದ ತಜ್ಞ ಜಿ.ಎಲ್.ಗೊಮ್ಮೆಯವರು "ಆಧುನಿಕ ಕಾಲದಲ್ಲಿನ ದಾಖಲೆಯ ನಂಬಿಕೆಗಳು, ರೂಢಿಗಳು ಮತ್ತು ಪರಂಪರೆಗಳು, ಅಳಿದುಳಿದ ಕುರುಹುಗಳು ಮತ್ತು ಹೋಲಿಕೆಯೇ ಜಾನಪದ."[7] ಎಂದು ಹೇಳಿರುವುದಕ್ಕೆ ಮೂಲವನ್ನು ಹುಡುಕುತ್ತಾ ಹೋದರೆ ಎದುರಾಗುವುದು ಆಧುನೀಕರಣ! ಆಧುನೀಕರಣದ ಪ್ರಭಾವದಿಂದಾಗಿ ಜಾನಪದದ ಒಂದು ಅವಿಭಾಜ್ಯ ಅಂಗವೇ ಆಗಿರುವ ಪಾರಂಪರಿಕ ಕಸಬುಗಳೂ ಇಂದು ಪರಂಪರೆಯ ಅಳಿದುಳಿದ ಕುರುಹುಗಳಾಗಿವೆ. ಇದಕ್ಕೆ ಸಂವಹನದ ಕೊರತೆಯೇ ಕಾರಣ. ಜನಪದ ಕಥೆಗಳು, ಕಾವ್ಯಗಳು, ಪುರಾಣಗಳು, ಸ್ಮೃತಿಗಳು ಕಸಬುಗಳ ಮೂಲವಾಗಿದ್ದು, ತಮ್ಮದೇ ಆದ ಆಡುನುಡಿಯ ಮೌಖಿಕ ಸಂವಹನದ ಜೊತೆಗೆ ನೋ(ಮಾ)ಡಿ ಕಲಿ ಎಂಬ ಸಂವಹನವೂ ಪಾರಂಪರಿಕ ಕಸಬುಗಳಿಗೆ ಇದೆ. ಇದೇ ತತ್ವದಡಿ ಪೀಳಿಗೆಯಿಂದ ಪೀಳಿಗೆಗೆ ಸಂವಹನಗೊಂಡು ಕಸಬುದಾರರ ಜೀವನದ ಪ್ರತಿಬಿಂಬದಂತಿರುವ ಪಾರಂಪರಿಕ ಕಸಬುಗಳು ಬಳಕೆದಾರರ ಅಭಿಲಾಷೆಗೆ ತಕ್ಕಂತೆ ರೂಪಾಂತರಗೊಳ್ಳತೊಡಗಿವೆ. ಆದಿವಾಸಿ ಸಮಾಜದಿಂದ ಹಿಡಿದು ಗ್ರಾಮೀಣ ಸಮಾಜ ಹಾಗೂ ಇಂದಿನ ಔದ್ಯೋಗಿಕ ಸಮಾಜಗಳ ಬೆನ್ನೆಲುಬು ಪಾರಂಪರಿಕ ಕಸಬುಗಳ ಸಂವಹನವೇ ಆಗಿದೆ!

ಬಹುಮುಖ ಸಂಸ್ಕೃತಿಯಾದ ಗ್ರಾಮೀಣ ಭಾರತದಲ್ಲಿ ಹಲವು ಬಗೆಯ ಜೀವನ ಕ್ರಮಗಳು ಸಮ್ಮಿಲನಗೊಂಡಿವೆ. ಗ್ರಾಮೀಣ ಜನಪದರ ಬದುಕಿನಲ್ಲಿ ಪರಂಪರಾಗತವಾಗಿ ಮುಂದುವರಿದುಕೊಂಡು ಬಂದಿರುವ ಆಯಗಾರಿಕೆ ಕಸಬುಗಳು ಇಂದು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿವೆ; ಕಳೆದುಕೊಳ್ಳುತ್ತಲೂ ಇವೆ. ಫ್ರೆಂಚ್ ಸಮಾಜಶಾಸ್ತ್ರಜ್ಞ ಡರ್ಕ್‌ಹೈಂ "ಹಳ್ಳಿ ಜೀವನ ಹೆಚ್ಚು ಹೆಚ್ಚು ಒಬ್ಬರನ್ನೊಬ್ಬರು ವಿವಿಧ ಕಸಬುದಾರರಾಗಿ ಅವಲಂಬಿಸುವ ಜೈವಿಕ ಐಕ್ಯತೆ(Organic Salidarity)ಯನ್ನು ಪ್ರತಿಬಿಂಬಿಸುತ್ತಿತ್ತು. ನಗರೀಕರಣ, ಔದ್ಯೋಗಿಕರಣ, ಯಾಂತ್ರೀಕರಣ, ಆಧುನೀಕರಣ, ಹಣದ ವಹಿವಾಟು, ಜನಸಂಖ್ಯೆ ಹೆಚ್ಚಳ, ವ್ಯಾಪಾರ ಉದ್ದಿಮೆಗಳ ಬೆಳವಣಿಗೆಯಿಂದಾಗಿ ಇಂದಿನ ಗ್ರಾಮೀಣ ಸಮಾಜದಲ್ಲಿ ಆಯಗಾರ ಪದ್ಧತಿ ನಶಿಸುತ್ತಿದೆ. ಯಾಂತ್ರಿಕ ಐಕ್ಯತೆ(Mechanical Salidarity) ಇಂದಿನ ಜನಜೀವನ ನಾಡಿಯಾಗಿದೆ"[8] ಎಂದು ಹೇಳುತ್ತಾನೆ. ಗ್ರಾಮೀಣ ವೃತ್ತಿಗಳು ಕುಲಕಸಬಿಗೆ ಸಂಬಂಧಿಸಿದಂತೆ ಪರಸ್ಪರ ಅವಲಂಬನೆ, ನಂಬಿಕೆ, ಸೇವೆ, ಕೊಡುಗೆಗಳ ಮೇಲೆ ನಿಂತಿದ್ದವು. ಇಂದು ಆಯಗಾರಿಕೆ ಮಾಯವಾಗಿ ಅದರ ಜಾಗದಲ್ಲಿ ವ್ಯವಹಾರ ವ್ಯವಸ್ಥೆ ನೆಲೆಯೂರುತ್ತಿದೆ.

ಉತ್ತಮ ಸಂಸ್ಕೃತಿಗೆ, ಸಾಂಸ್ಕೃತಿಕ ಬದುಕಿಗೆ ಜಗತ್ತಿಗೇ ಮಾದರಿಯಾಗಿರುವ ಭಾರತದ ಜನಪದರ ಬದುಕು ಆಧುನಿಕತೆಯ ಸೋಗಿನಲ್ಲಿ ಸದ್ದಡಗುತ್ತಿರುವುದು ನಮ್ಮ ದೇಶದ ಭವ್ಯ ಪರಂಪರೆಯು ಅಧಃಪತನಕ್ಕೆ ನಾಂದಿಯಾಗಲಿರುವುದು ವಿಪರ್ಯಾಸವೇ ಸರಿ! ಈ ಭವ್ಯ ಪರಂಪರೆಯನ್ನು ಉಳಿಸಿ-ಬೆಳೆಸಿಕೊಂಡು ಹೋಗಲು ನಮ್ಮ ಪರಂಪರೆ ಹಾಗೂ ಪಾರಂಪರಿಕ ಕಸಬುಗಳನ್ನು ಪುನಃಶ್ಚೇತನಗೊಳಿಸುವುದೂ ತೀರಾ ಮುಖ್ಯವಾಗಿದೆ.

## ೧.೨ ಸಂಶೋಧನೆಯ ಉದ್ದೇಶ :

ಕುಷ್ಟಗಿ ಪರಿಸರದಲ್ಲಿ ಈಗಾಗಲೇ ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿರುವ ಉತ್ಪಾದನಾ ಸಂಬಂಧಿ ಪಾರಂಪರಿಕ ಕಸಬುಗಳು, ವ್ಯಾಪಾರ ಸಂಬಂಧಿ ಪಾರಂಪರಿಕ ಕಸುಬುಗಳು, ಸೇವಾ ಸಂಬಂಧಿ ಪಾರಂಪರಿಕ ಕಸುಬುಗಳು, ಮನರಂಜನಾ ಸಂಬಂಧಿ ಪಾರಂಪರಿಕ ಕಸಬುಗಳೆಲ್ಲವನ್ನೂ ಸೂಕ್ಷ್ಮವಾಗಿ ಗಮನಿಸಿ, ವಿಶಿಷ್ಟ ಹಾಗೂ ತೀರಾ ಮುಖ್ಯವೆನಿಸುವ ಕಸಬುಗಳನ್ನು ಇಲ್ಲಿ ಸಂಶೋಧನೆಗೆ ಒಳಪಡಿಸಬೇಕೆಂಬುದು ನನ್ನ ಉದ್ದೇಶ. ಅಲ್ಲದೇ ಕಸಬುಗಳ ರೂಪಾಂತರದ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ಜೊತೆಗೆ ಸಂಘ-ಸಂಸ್ಥೆಗಳು ಹಾಗೂ ಸರಕಾರ ಜಾರಿಗೊಳಿಸಿದ ಸುಧಾರಣಾ ಕ್ರಮಗಳನ್ನು ವಿಶ್ಲೇಷಿಸುವುದು ಈ ಮಹಾಪ್ರಬಂಧದ ಪ್ರಮುಖ ಉದ್ದೇಶಗಳಲ್ಲೊಂದಾಗಿದೆ!

ರೈತರಿಗೆ, ಸಮಾಜಕ್ಕೆ, ದೇಶದ ಹಿತಕ್ಕೆ ಪೂರಕವಾಗಿರುವ ಕುಲಕಸಬುಗಳು ಕೆಲವೇ ಕುಲ(ಜನಾಂಗ)ಗಳಿಗೇ ಮೀಸಲಾಗಿದ್ದವು. ವೃತ್ತಿ ಆಧಾರಿತ ಕುಲಗಳು ಇಂದಿನ ಸಮಾಜಕ್ಕೆ ಕಳಂಕಪ್ರಾಯವಾಗಿವೆ. ಆದ್ದರಿಂದ ಪಾರಂಪರಿಕ ವೃತ್ತಿಗಳು ಉಳಿಯಬೇಕೇ ವಿನಃ ಪಾರಂಪರಿಕ ಜಾತಿ ಪದ್ಧತಿ ಅಲ್ಲ! ಈ ನಿಟ್ಟಿನಲ್ಲಿ ಇಂದು ಆ ಕುಲಕಸಬುಗಳನ್ನು ಇನ್ನಿತರೆ ಸಮುದಾಯದವರೂ ಅನುಸರಿಸುವಂತಾಗಲು, ಅದುವೇ ಅವರ ಪರಂಪರೆಯಾಗಿ ಮುಂದುವರೆಯಲು ಆಧುನೀಕರಣ ಮತ್ತು ಜಾಗತೀಕರಣಗಳೇ ಕಾರಣ. ತೃತೀಯ ಜಗತ್ತಿನ ಗ್ರಾಮ ಸಂಸ್ಕೃತಿಗೆ ಮಾತ್ರ ದೇಸಿ ಸಂಸ್ಕೃತಿಯನ್ನು ಎತ್ತಿ ಹಿಡಿಯುವ ತಾಕತ್ತಿದೆ. ಆಧುನೀಕರಣದ ಯುದ್ಧದಲ್ಲಿ ದೇಸಿ ಸಂಸ್ಕೃತಿಯನ್ನು ಗುರಾಣಿಯಾಗಿ ಬಳಸಬೇಕಿದೆ! ಶೈಕ್ಷಣಿಕ ಅರ್ಹತೆಯ ಹಂಗಿಲ್ಲದ ಜನಪದರ ಪಾರಂಪರಿಕ ವಿಜ್ಞಾನ-ತಂತ್ರಜ್ಞಾನಗಳು 'ಪುನಃ' ನಮ್ಮ ಪಾಲಿಗೆ ಲೋಕದರ್ಶನಗಳಾಗಬೇಕು. ಏಕೆಂದರೆ ಭಾರತದಂತಹ ಬೃಹತ್ ಜನಸಂಖ್ಯಾ ದೇಶಕ್ಕೆ ನಿರುದ್ಯೋಗವೇ ದೇಶದ ಪ್ರಗತಿಗೆ ಮುಳುವಾಗಿದೆ. ನಿರುದ್ಯೋಗ ಸಮಸ್ಯೆ ತಂತಾನೇ ಮಾಯವಾಗಲು ಪಾರಂಪರಿಕ ಕಸಬುಗಳು

ಪುನಃಶ್ಚೇತನಗೊಳ್ಳಲೇಬೇಕಿದೆ. ಹೀಗಾಗಿ ಪ್ರಸ್ತುತ ಕುಷ್ಟಗಿ ಪರಿಸರದಲ್ಲಿ ಅಳಿದೂ ಉಳಿದುಕೊಂಡಿರುವ ವಿಶಿಷ್ಟ ಹಾಗೂ ಸಾಮಾನ್ಯ ಪಾರಂಪರಿಕ ಕಸಬುಗಳನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಲು ಪ್ರೇರೇಪಿಸುವ ಉದ್ದೇಶವೂ ಪ್ರಸ್ತುತ ಮಹಾಪ್ರಬಂಧದಲ್ಲಿ ಅಡಕವಾಗಿದೆ.

ಕುಷ್ಟಗಿ ಪರಿಸರದಲ್ಲಿ ಅನೇಕ ಪಾರಂಪರಿಕ ಕಸಬುಗಳನ್ನು ಕಾಣಬಹುದು. ಭೌಗೋಳಿಕ ಹಿನ್ನೆಲೆಯಲ್ಲಿ ಇಲ್ಲಿನ ಪಾರಂಪರಿಕ ಕಸಬುಗಳನ್ನು ಹಿಂದೂ ಧರ್ಮದ ಸಮುದಾಯ ಆಧಾರಿತ ಧೋರಣೆ ಹೊಂದಿರುವ ಹಾಗೂ ಎಲ್ಲೆಡೆಯೂ ಇರುವಂತಹ ಪಾರಂಪರಿಕ ಕಸಬುಗಳನ್ನು **'ಸಾಮಾನ್ಯ ಪಾರಂಪರಿಕ ಕಸಬುಗಳು'** ಎಂದೂ, ಅನ್ಯ ಸಿದ್ಧಾಂತಗಳನ್ನು ಮೈಗೂಡಿಸಿಕೊಂಡ ಧೋರಣೆ ಹೊಂದಿರುವ ಪಾರಂಪರಿಕ ಕಸಬುಗಳನ್ನು **'ವಿಶಿಷ್ಟ ಪಾರಂಪರಿಕ ಕಸಬುಗಳು'** ಎಂದೂ ವಿಭಾಗಿಸುವುದು.

ವಿಶಿಷ್ಟ ಪಾರಂಪರಿಕ ಕಸಬುಗಳಾದ **ಇಳಕಲ್ಲ ಸೀರೆ ನೇಕಾರಿಕೆ, ಗುಳೇದಗುಡ್ಡದ ಖಣ ನೇಕಾರಿಕೆ, ಕಮತಗಿ ಪಟಗ ಮತ್ತು ರುಮಾಲು ನೇಕಾರಿಕೆ, ಅಮೀನಗಡದ ಕರದಂಟು ತಯಾರಿಕೆ, ರಾಜೂರ ಸುಣ್ಣ ತಯಾರಿಕೆ, ಭಾಗ್ಯನಗರದ ಕೇಶೋದ್ಯಮ, ಕಿನ್ನಾಳ ಕಿಟ್ಟದ ಗೊಂಬೆ ತಯಾರಿಕೆ, ಹನಮಸಾಗರ ಕೌದಿ ಹೊಲಿಗಾರಿಕೆ, ಕೊಪ್ಪಳ ಮಂಡಾಳು ತಯಾರಿಕೆ –** ಇವುಗಳನ್ನೇ ಕೇಂದ್ರವಾಗಿಟ್ಟುಕೊಂಡು ಅವುಗಳು ಹುಟ್ಟಿದ ಬಗೆ, ಐತಿಹಾಸಿಕ ಬೆಳವಣಿಗೆ, ವಿಕಾಸದ ಹಾದಿ, ರೂಪಾಂತರದ ಸ್ಥಿತಿ–ಗತಿ, ಉತ್ಪಾದನಾ ವಸ್ತುಗಳ ಮಾರಾಟ ವ್ಯವಸ್ಥೆಗಳನ್ನು 'ವಿಶ್ಲೇಷಣಾತ್ಮಕ'ವಾಗಿ ಅಧ್ಯಯನ ಮಾಡುವುದು. ಜೊತೆಗೆ ಪಾರಂಪರಿಕ ಕಸಬುದಾರರ ಸಮುದಾಯಗಳ ಹಿಂದಿನ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ ಹೇಗಿತ್ತು? ಇಂದಿನ ಅನಾಥ ಸ್ಥಿತಿಗೆ ಕಾರಣಗಳೇನು? ಪರಿಣಾಮಗಳೇನು? ಇಂದಿನ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ ಹೇಗಿದೆ? ಇತ್ಯಾದಿ ಕುರಿತು ಅಧ್ಯಯನ ಮಾಡುವುದು.

ಇವುಗಳಲ್ಲದೇ ನಮ್ಮ ದೇಶದ ಪ್ರತಿಯೊಂದು ಸಮಾಜದಲ್ಲಿಯೂ ಕಾಣುತ್ತಲೇ ಬಂದಿರುವ ಸಾಮಾನ್ಯ ಪಾರಂಪರಿಕ ಕಸಬುಗಳಾದ **ಕುಂಬಾರಿಕೆ, ಕಮ್ಮಾರಿಕೆ, ಪತ್ತಾರಿಕೆ, ಬಡಗಿತನ, ಕೊರವರ ಕಸಬು, ಮೇದಾರಿಕೆ, ಚಿತ್ರಗಾರಿಕೆ, ಹೂಗಾರಿಕೆ, ಮಡಿವಾಳಿಕೆ, ಕ್ಷೌರಿಕ ಕಸಬು, ಬಯಲು ಕಮ್ಮಾರಿಕೆ, ಕಲ್ಲುಕುಟಿಗ ಕಸಬು, ಚಮ್ಮಾರಿಕೆ, ಶಿಲ್ಪಗಾರಿಕೆ, ನಾಲಗಾರಿಕೆ** ಮುಂತಾದ ಕುಲಕಸಬುದಾರರ ಸಮುದಾಯಗಳ ಹಿಂದಿನ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ, ಇಂದಿನ ಅನಾಥ ಸ್ಥಿತಿಗೆ ಕಾರಣಗಳು, ಪರಿಣಾಮಗಳು ಇತ್ಯಾದಿ ಕುರಿತು

‘ಆನುಷಂಗಿಕ’ವಾಗಿ ಅಧ್ಯಯನಕ್ಕೊಳಪಡಿಸುವುದು ಪ್ರಸ್ತುತ ಮಹಾಪ್ರಬಂಧದ ಇನ್ನೊಂದು ಉದ್ದೇಶವಾಗಿದೆ.

ಆಧುನೀಕರಣ ಹಾಗೂ ಜಾಗತೀಕರಣದ ಬೊಬ್ಬಾಟದಲ್ಲಿ, ತಂತ್ರಜ್ಞಾನದ ಪ್ರಭಾವಳಿಯಲ್ಲಿ ಕುಲಕಸಬುಗಳು ಪಾರಂಪರಿಕ ಕಸಬುಗಳಾಗಿಯೂ; ಪಾರಂಪರಿಕ ಕಸಬುಗಳು ಕ್ರಮೇಣ ಉದ್ದಿಮೆಗಳಾಗಿ ಬೆಳೆದಿವೆ; ಬೆಳೆಯುತ್ತಲೂ ಇವೆ! ಇದಕ್ಕೆ ಕುಷ್ಟಗಿ ಪರಿಸರದಲ್ಲಿರುವ ಪಾರಂಪರಿಕ ಕಸಬುಗಳೂ ಹೊರತಾಗಿಲ್ಲ! ಬಹುತೇಕ ಕುಲವೃತ್ತಿಗಳು ಪಾರಂಪರಿಕ ಕಸಬುಗಳಾಗಿ ಪರಿವರ್ತನೆಗೊಳ್ಳುತ್ತಿರುವುದನ್ನು ನಮ್ಮ ಜಾನಪದ ತಜ್ಞರು ಗಮನಿಸುತ್ತಿಲ್ಲ!

ಹಾಗಾದರೆ... ‘ಕುಲಕಸಬು’ ಮತ್ತು ‘ಪಾರಂಪರಿಕ ಕಸಬು’ ಇವೆರಡೂ ಬೇರೆ ಬೇರೆಯೇ?

ಹೌದು! ಇದು ನನ್ನ ಸ್ಪಷ್ಟ ನಿಲುವು.

**“ಕುಲಕಸಬುಗಳೆಲ್ಲವೂ ಪಾರಂಪರಿಕ ಕಸಬುಗಳು. ಆದರೆ... ಎಲ್ಲಾ ಪಾರಂಪರಿಕ ಕಸಬುಗಳೂ ಕುಲಕಸಬುಗಳಲ್ಲ!”** ಉದಾಹರಣೆಗೆ ಇಳಕಲ್ಲ ಸೀರೆ ನೇಯುವುದು ಅಲ್ಲಿನ ನೇಕಾರ ಸಮುದಾಯದ ಕುಲಕಸಬು; ಹಾಗೆಯೇ ಅದು ಆ ನೇಕಾರರ ಪಾರಂಪರಿಕ ಕಸಬೂ ಹೌದು. ಇದೇ ಇಳಕಲ್ಲ ಸೀರೆಯನ್ನು ಮುಸ್ಲಿಂ ಕುಟುಂಬ ಅಥವಾ ಸಮುದಾಯವೊಂದು ನೇಯುತ್ತಾ ಬಂದಿದೆ. ಮುಂದೆಯೂ ಸೀರೆ ನೇಕಾರಿಕೆಯೇ ಆ ಕುಟುಂಬದ ಅಥವಾ ಸಮುದಾಯದ ಪರಂಪರೆಯಾಗಿ ಮುಂದುವರೆಯುತ್ತದೆ. ಆದರೂ ನೇಕಾರಿಕೆ ಮೂಲತಃ ಮುಸ್ಲಿಂ ಸಮುದಾಯದ ಕುಲಕಸಬು ಅಲ್ಲ; ಬದಲಾಗಿ ಅದು ಆ ಸಮುದಾಯದ ಪಾರಂಪರಿಕ ಕಸಬಾಗಿ ಮುಂದುವರೆಯುತ್ತದೆ.

ಜನಪದರ ಬದುಕಿನಲ್ಲಿ ಕಸಬು ಹಾಗೂ ಉತ್ಪಾದನೆ ಕೇವಲ ಯಾಂತ್ರಿಕವೂ ಅಲ್ಲ; ತಾತ್ಕಾಲಿಕವೂ ಅಲ್ಲ; ತಲೆತಲಾಂತರದಿಂದ ಬಂದಿವೆ. ಕಸಬು ಎಂಬುದು ಬರೀ ಕೆಲಸವಲ್ಲ; ಅದೊಂದು ಜೀವನ ವಿಧಾನ. ಸಂಸ್ಕೃತಿಯ ಜೀವಂತ ಹಾಗೂ ನಿರಂತರ ಚಲನೆ. ಪಾರಂಪರಿಕ ಕಸಬುಗಳು ಬದುಕಿನ ನಿರಂತರ ಶೋಧಕ ನೆಲೆಗಳಾಗಿವೆ. ಪರಿಸರದ ಮಿತಿಯೊಳಗೆ ಜನಪದರಿಂದ ಅರಳಿ, ಜಾನಪದದ ಸಹಜ ಗತಿಯಲ್ಲಿ ವಿಕಾಸವಾಗಬೇಕಿದ್ದ **ಜಾನಪದ ವೃತ್ತಿಗಳು** ಇಂದು ಪರಿಸರದ ಮಿತಿಯನ್ನು ಮೀರಿ ಅಸಹಜ ಗತಿಯಲ್ಲಿ ಬದಲಾವಣೆ ಹೊಂದುತ್ತಾ **ಆಧುನಿಕ ಜೀವನ ಪದ್ಧತಿಗಳ ನಿರ್ಮಾಣ**(Engineering of a

life style)ಗಳಾಗುತ್ತಿವೆ. ಹೀಗಾದಾಗ ಜನಸಾಮಾನ್ಯರ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಬದುಕಿನಲ್ಲಿ ಹಾಸುಹೊಕ್ಕಾಗಿರುವ, ಕಷ್ಟಕಾಲದಲ್ಲೂ ಸಮುದಾಯವನ್ನು ಪೋಷಿಸುತ್ತಾ ಬಂದಿರುವ ಈ ಪಾರಂಪರಿಕ ಕಸಬುಗಳ ಜ್ಞಾನವನ್ನೇ ಜಾಗತೀಕರಣ ಮತ್ತು ಆಧುನೀಕರಣಕ್ಕೆ ಪರ್ಯಾಯವಾಗಿ ಅಳವಡಿಸಿಕೊಳ್ಳಬೇಕಿದೆ. ಗ್ರಾಮ ಸ್ವಾಯತ್ತೆಗಾಗಿ ಜನಪರ ಚಳುವಳಿ ರೂಪಿಸಬೇಕಿದೆ. ಹಳ್ಳಿಗರ ಆರ್ಥಿಕ ಅಭಿವೃದ್ಧಿಗಾಗಿ ನಿರುದ್ಯೋಗಿ, ಅನಕ್ಷರಸ್ಥ ಪಾರಂಪರಿಕ ಕಸಬುದಾರರಿಗೆ ರೂಪಾಂತರಗೊಂಡ ಕಸಬನ್ನು ಅಳವಡಿಸಿಕೊಳ್ಳಲು ಸೂಕ್ತ ತರಬೇತಿ ನೀಡಿ ಕಸಬುದಾರರನ್ನು ಮತ್ತು ಕಸಬುಗಳನ್ನು ಉಳಿಸಿ, ಸಾಂಸ್ಕೃತಿಕ ಕಸಬುಗಳಿಗೆ ಆಧುನಿಕತೆಯ ಸ್ಪರ್ಶ ನೀಡಿ, ಮಾಧ್ಯಮಗಳ ಮೂಲಕ ಸಾಕಷ್ಟು ಪ್ರಚಾರ ಕೊಟ್ಟರೆ, ಅವರ ಉತ್ಪಾದನಾ ವಸ್ತುಗಳಿಗೆ ಸೂಕ್ತ ದರ ಸಿಗುವಂತೆ ಉತ್ತಮ ಮಾರುಕಟ್ಟೆ ವ್ಯವಸ್ಥೆ ಒದಗಿಸಿಕೊಡುವ ಮೂಲಕ ಜನಪದರಿಗೆ ತಮ್ಮದೇ ಸಾಂಸ್ಕೃತಿಕ ಬದುಕು ಕಟ್ಟಿಕೊಡುವ ಉದ್ದೇಶವೂ ಪ್ರಸ್ತುತ ಮಹಾಪ್ರಬಂಧದಲ್ಲಿ ಅಡಗಿದೆ.

ಜಾನಪದ ವೃತ್ತಿಯಲ್ಲಿ ತನ್ನದೇ ಆದ ವೈಶಿಷ್ಟ್ಯ ಹೊಂದಿರುವ ಕುಲವೃತ್ತಿ ಅಥವಾ ಕುಲಕಸಬುಗಳನ್ನು ವಿಶ್ಲೇಷಣೆಗೊಳಪಡಿಸುವ ಧಾವಂತದಲ್ಲಿ ನಮ್ಮ ಜಾನಪದ ತಜ್ಞರು **'ಕಸಬು'** ಅಥವಾ **'ಕಸುಬು'** ಪದಗಳ ಬಗ್ಗೆ ಗಂಭೀರವಾಗಿ ತಲೆಕೆಡಿಸಿಕೊಂಡಂತಿಲ್ಲ! ತಮ್ಮ ಲೇಖನ ಅಥವಾ ಕೃತಿಗಳಲ್ಲಿ ಯಾವುದೇ ಒಂದು ನಿಯಮಕ್ಕೆ ಬದ್ಧರಾಗದೇ ಎರಡೂ ಪದಗಳನ್ನು ಬಳಸಿದ್ದಾರೆ, ಬಳಸುತ್ತಲೂ ಇದ್ದಾರೆ! ಈ ಎರಡೂ ಪದಗಳ ಬಳಕೆಯಲ್ಲಿ ಯಾವುದು ಸರಿ? ಯಾವುದು ತಪ್ಪು? ಅಥವಾ ಎರಡೂ ಸರಿಯೇ? ಈ ಬಗ್ಗೆ ಎಲ್ಲೂ ಪ್ರತ್ಯೇಕವಾಗಿ ಪ್ರಸ್ತಾಪಿಸಿದಂತೆ ಕಾಣುತ್ತಿಲ್ಲ! ನನ್ನ ಅಧ್ಯಯನದಲ್ಲಿ ಈ ಬಗ್ಗೆ ಸಣ್ಣ ಪೀಠಿಕೆಯೊಂದನ್ನು ಹಾಕಿದ್ದೇನೆ. ನನ್ನ ಅಧ್ಯಯನವೇ ಸರಿ ಎಂಬ ಹುಂಬತನ ಖಂಡಿತಾ ಅಲ್ಲ. ಈ ಎರಡಲ್ಲಿ **'ಕಸಬು'** ಪದದ ಬಳಕೆಯೇ ಸರಿ ಎಂದು ನನಗೆ ತೋಚಿತು. ಇದನ್ನು ಸೀಮಿತ ದೃಷ್ಟಿಕೋನದಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿದ್ದೇನೆ!

ನಮ್ಮ ದೇಶದ ಜ್ಞಾನ ಕಣಜಗಳೆಂದು, ಸಂಸ್ಕೃತಿಯ ತೊಟ್ಟಿಲುಗಳೆಂದು ಭಾವಿಸಲ್ಪಡುವ ಪುರಾಣ–ಪುಣ್ಯಕಥೆಗಳು, ಐತಿಹ್ಯಗಳು ಮತ್ತು ಸಾಹಿತ್ಯಗಳಲ್ಲಿ ಈ ಪಾರಂಪರಿಕ ಕಸಬುಗಳ ಬಗ್ಗೆ ಗೌರವಯುತವಾದ ಉಲ್ಲೇಖಗಳಿದ್ದಾಗ್ಯೂ ಆಧುನೀಕರಣ ಪ್ರಕ್ರಿಯೆಯಿಂದಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿವೆ. ಆಧುನೀಕರಣದ ಪ್ರಭಾವದಿಂದಾಗಿ ಕುಷ್ಟಗಿ ಪರಿಸರದಲ್ಲಿರುವ ಪಾರಂಪರಿಕ ಕಸಬುಗಳ ಅಸ್ತಿತ್ವದ ಕೊಂಡಿ ಕಳಚುತ್ತಿದೆ! ಜಾನಪದ ವೃತ್ತಿಗಳ ಅಧ್ಯಯನವು ಒಂದು ಸಾರ್ವತ್ರಿಕ ಅಧ್ಯಯನವಾಗಿ

ರೂಪುಗೊಳ್ಳುವುದರಿಂದ ನೇಪಥ್ಯಕ್ಕೆ ಸರಿದಿರುವ ಹಾಗೂ ಇನ್ನೂ ಸರಿಯುತ್ತಿರುವ ಜಾನಪದ ವಸ್ತುಸಂಸ್ಕೃತಿಯನ್ನು ಬೇರೆ ಬೇರೆ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಕಂಡುಕೊಳ್ಳಲು ಪಾರಂಪರಿಕ ಕಸಬುಗಳ ಅಧ್ಯಯನ ಬಹುಮುಖ್ಯವೆನಿಸುತ್ತದೆ.

ಇದುವರೆಗಿನ ಬಹುತೇಕ ಎಲ್ಲ ಸಂಶೋಧನೆಗಳೂ ಜನಪದರ ಸಂಸ್ಕೃತಿ, ಮೌಖಿಕ ಪರಂಪರೆ, ಜೀವನ ಶೈಲಿ ಹಾಗೂ ಜಾನಪದಕಲೆಗಳನ್ನು ದೃಷ್ಟಿಯನ್ನಿಟ್ಟುಕೊಂಡು ನಡೆಸಿದಂತಿವೆ. ಜನಪದರ ಪಾರಂಪರಿಕ ಕಸಬುಗಳ ಬಗ್ಗೆ ಗಂಭೀರವಾಗಿ ಅಧ್ಯಯನ ಕೈಗೊಂಡಿರುವುದು ತೀರಾ ವಿರಳವೆಂದೇ ಹೇಳಬಹುದು. ಅದರಲ್ಲೂ ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳನ್ನು ನೇರವಾಗಿ ಅಧ್ಯಯನ ಮಾಡದೇ ಇರುವುದರಿಂದ ಈ ದಿಸೆಯಲ್ಲಿ ಈ ಅಧ್ಯಯನ ಪ್ರಥಮ ಪ್ರಯತ್ನವಾಗಿದೆ.

ಒಟ್ಟಿನಲ್ಲಿ ಆಧುನೀಕರಣ ಪ್ರಕ್ರಿಯೆಯ ಮೋಹಪಾಶಕ್ಕೆ ಸಿಲುಕಿ ಕುಷ್ಟಗಿ ಪರಿಸರದ ನಮ್ಮ ಪೂರ್ವಿಕರ ಜ್ಞಾನ ಸೆಲೆಗಳು ಬತ್ತಿ ಹೋಗುವ ಮುನ್ನ ಅವುಗಳನ್ನು ಪುನರುಜ್ಜೀವನಗೊಳಿಸಿ, ಆಧುನೀಕರಣಕ್ಕೆ ಪರ್ಯಾಯವಾಗಿ, ದೇಸಿ ಮಾದರಿಗಳನ್ನು ರ(ರು)ಚಿಸಬೇಕಿದೆ. ನಿರುದ್ಯೋಗಿ, ಅನಕ್ಷರಸ್ಥ ಪಾರಂಪರಿಕ ಕಸಬುದಾರರಿಗೆ ರೂಪಾಂತರಗೊಂಡ ಕಸಬನ್ನು ಅಳವಡಿಸಿಕೊಳ್ಳಲು ಸೂಕ್ತ ತರಬೇತಿ ನೀಡಿ ಕಸಬುದಾರರನ್ನು ಮತ್ತು ಕಸಬುಗಳನ್ನು ಉಳಿಸಿ, ಜಾನಪದೀಯ ಸಾಂಸ್ಕೃತಿಕ ಕಸಬುಗಳಿಗೆ ಆಧುನಿಕತೆಯ ಸ್ಪರ್ಶ ನೀಡಿ, ಅವರಿಗೆ ತಮ್ಮದೇ ಸಾಂಸ್ಕೃತಿಕ ಬದುಕು ಕಟ್ಟಿಕೊಡಬೇಕು. ಹೀಗಾಗಿ ಪಾರಂಪರಿಕ ವೃತ್ತಿಗಳು ಉಳಿಯಬೇಕೇ ವಿನಃ ಪಾರಂಪರಿಕ ಜಾತಿ ಪದ್ಧತಿ ಅಲ್ಲ ಎಂಬ ಸ್ಪಷ್ಟ ಉದ್ದೇಶದೊಂದಿಗೆ "ಕುಲಕಸಬುಗಳೆಲ್ಲವೂ ಪಾರಂಪರಿಕ ಕಸಬುಗಳು. ಆದರೆ... ಎಲ್ಲಾ ಪಾರಂಪರಿಕ ಕಸಬುಗಳೂ ಕುಲಕಸಬುಗಳಲ್ಲ!" ಎಂದು ಸ್ಪಷ್ಟಪಡಿಸುವ ಉದ್ದೇಶ ಪ್ರಸ್ತುತ ಮಹಾಪ್ರಬಂಧದ್ದಾಗಿದೆ.

### ೧.೩ ಸಂಶೋಧನೆಯ ವ್ಯಾಪ್ತಿ :

'ಆಧುನಿಕರಣ ಪ್ರಕ್ರಿಯೆ : ಕುಷ್ಟಗಿ ಪರಿಸರದಲ್ಲಿರುವ ಪಾರಂಪರಿಕ ಕಸಬುಗಳು' ಎಂಬ ಶೀರ್ಷಿಕೆಯ ಪ್ರಸ್ತುತ ಅಧ್ಯಯನವು ಕುಷ್ಟಗಿಯನ್ನು ಕೇಂದ್ರವಾಗಿರಿಸಿಕೊಂಡು ಸುಮಾರು ೬೫ ಕಿ.ಮೀ. ವ್ಯಾಪ್ತಿಯಲ್ಲಿರುವ ಪ್ರದೇಶವನ್ನು 'ಕುಷ್ಟಗಿ ಪರಿಸರ' ಎಂದು ಪರಿಗಣಿಸಲಾಗಿದೆ.

ಅಂದರೆ.... ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಹನಮಸಾಗರ, ದೋಟಿಹಾಳ ಗ್ರಾಮಗಳು; ಪಕ್ಕದ ಕೊಪ್ಪಳ ತಾಲ್ಲೂಕಿನ ಕೊಪ್ಪಳ, ಭಾಗ್ಯನಗರ ಹಾಗೂ ಕಿನ್ನಾಳ ಗ್ರಾಮಗಳು; ಬಾಗಲಕೋಟ ಜಿಲ್ಲೆಯ ಹುನಗುಂದ ತಾಲ್ಲೂಕಿನ ಇಳಕಲ್ಲ, ಅಮೀನಗಡ, ಕಮತಗಿ ಗ್ರಾಮಗಳು; ಬಾದಾಮಿ ತಾಲ್ಲೂಕಿನ ಗುಳೇದಗುಡ್ಡ ಗ್ರಾಮ ಹಾಗೂ ಗದಗ ಜಿಲ್ಲೆಯ ರೋಣ ತಾಲ್ಲೂಕಿನ ರಾಜೂರು ಗ್ರಾಮಗಳಲ್ಲಿರುವ ವಿಶೇಷ ಪಾರಂಪರಿಕ ಕಸಬುಗಳನ್ನು ವಿಶ್ಲೇಷಣಾತ್ಮಕ ಅಧ್ಯಯನಕ್ಕೂ ಮತ್ತು ಸಾಮಾನ್ಯ ಪಾರಂಪರಿಕ ಕಸಬುಗಳ ಆನುಷಂಗಿಕ ಅಧ್ಯಯನಕ್ಕೆ ಕುಷ್ಟಗಿ ಪಟ್ಟಣ ಹಾಗೂ ಅಕ್ಕ ಪಕ್ಕದ ಗ್ರಾಮಗಳನ್ನು ಭೌಗೋಳಿಕ ಹಾಗೂ ಸಾಂಸ್ಕೃತಿಕ ವ್ಯಾಪ್ತಿಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

### ೧.೪ ಸಂಶೋಧನೆಯ ಮಹತ್ವ :

ಗತಕಾಲದ ಆಲೋಚನೆಯನ್ನು, ಉತ್ಪಾದನೆಯನ್ನು ವರ್ತಮಾನದ ಬದುಕಿನ ಜೊತೆಗೆ ಅರ್ಥಪೂರ್ಣವಾಗಿ ಜೋಡಿಸುವ ಪರಂಪರೆಯ ಶೋಧ ನಡೆಯಬೇಕಿದೆ. ಹಾಗೆ ನೋಡಿದರೆ ಪರಂಪರೆಯನ್ನು ನಿರ್ಮಾಣ ಮಾಡುವವರೂ ನಾವೇ; ನಿರ್ನಾಮ ಮಾಡುವವರೂ ನಾವೇ. ಇಂದಿನ ಪರಿಸ್ಥಿತಿಯಲ್ಲಿ ನಮ್ಮ 'ದೇಸಿ ಜ್ಞಾನ ಪರಂಪರೆ'ಯನ್ನು ಪುನಃ ಬಲಪಡಿಸಬೇಕಾದ ಅನಿವಾರ್ಯತೆಯಲ್ಲಿ ನಾವಿದ್ದೇವೆ. ಏಕೆಂದರೆ ಗತದ ಎಷ್ಟೋ ಅಂಶಗಳು ವರ್ತಮಾನದಲ್ಲೂ ಸಕ್ರಿಯೆಯಾಗಿವೆ. ಇದಕ್ಕಾಗಿ ದಮನಿತ ಅಥವಾ ಅಲಕ್ಷಿತ ಸಮಾಜದ ಜೀವನ ಕ್ರಮ ಮತ್ತು ಜ್ಞಾನ ಕ್ರಮಗಳ (ದೇಸಿ ತಂತ್ರಜ್ಞಾನ) ಪೋಷಣೆ ಆಗಲೇಬೇಕಿದೆ; ಮರುಜೀವ ಪಡೆಯಲೇ ಬೇಕಿದೆ. ದೇಸಿ ತಂತ್ರಜ್ಞಾನವು ಗುಡಿಕೈಗಾರಿಕೆಗಳಲ್ಲಿ, ಪಾರಂಪರಿಕ ಕಸಬುಗಳಲ್ಲಿ ಅಡಗಿದೆ. ದೇಸಿ ಜ್ಞಾನ ಪರಂಪರೆಯು ಇಡೀ ಸಾಮಾಜಿಕ ವ್ಯವಸ್ಥೆಗೆ, ಸಂಸ್ಕೃತಿಗೆ ಸಂಬಂಧಿಸಿದ್ದಾಗಿದೆ. ಈ ನಿಟ್ಟಿನಲ್ಲಿ ವರ್ತಮಾನದ ಜೊತೆಗೆ ನೇರ ಸಂಬಂಧ ಇಟ್ಟುಕೊಂಡೇ ಸಂಶೋಧನೆಯು ಸಾಗಬೇಕಿದೆ. ಒಂದು ಸಂಶೋಧನೆಯಲ್ಲಿ ನಿರ್ದಿಷ್ಟವಾದ ಬಂಧ (ನಿಬಂಧ–Thesis), ಪ್ರತಿಪಾದನೆಯ ಬಂಧ (ಪ್ರಬಂಧ–Antithesis) ಹಾಗೂ ಸಂಶ್ಲೇಷಣೆ(Synthesis)ಗಳು ಇದ್ದರೆ ತುಂಬಾ ಯಶಸ್ವಿಯಾಗುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ. ಅಂತೆಯೇ "Folklore is an echo of the past, but at the same time it is also thevigorous vice of the present." ಎಂಬ ಮಾತು ಜಾನಪದದ ಮಹತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ.

ಜಾನಪದ ವೃತ್ತಿಗಳು ಕುಲಕಸಬುಗಳಾಗಿ ಗಟ್ಟಿಗೊಂಡನಂತರ ಸಮಾಜದಲ್ಲಿ ರೈತರಿಗೆ, ವ್ಯಾಪಾರಿಗಳಿಗೆ, ಕಲಾವಿದರಿಗೆ, ನೌಕರರಿಗೆ ಸಹಕಾರದ ವೃತ್ತಿಗಳನ್ನು ಮಾಡುತ್ತಿದ್ದರು. ಇದರಿಂದ ಸಮಾಜದ ಅನೇಕ ಜನರಿಗೆ ಅನುಕೂಲವಾಗುವುದರ ಜೊತೆಗೆ ಸ್ವತಃ ಕಸಬುದಾರರಿಗೆ ಕೈತುಂಬಾ ಕೆಲಸ ಹಾಗೂ ಕಾಸು ಸಿಗುವುದಷ್ಟೇ ಅಲ್ಲದೇ ನಿರುದ್ಯೋಗ ನಿವಾರಣೆಯಾಗುತ್ತಿತ್ತು. ಬಹುತೇಕ ಕುಲಕಸಬುಗಳು ಕೃಷಿಯ ಜೊತೆಗೆ ಪರ್ಯಾಯ ವೃತ್ತಿಗಳಾಗಿ ಅವಕಾಶ ಗಿಟ್ಟಿಸಿಕೊಂಡಿದ್ದವು. ತೀರಾ ಕಡಿಮೆ ಬಂಡವಾಳದ ಜೊತೆಗೆ ಉತ್ಪಾದನಾ ಕ್ಷೇತ್ರದಲ್ಲಿ ಪ್ರಗತಿಯಾಗುತ್ತಿತ್ತು. ಸ್ಥಳೀಯ ಸಂಪನ್ಮೂಲಗಳ ಬಳಕೆಯಾಗುವುದಷ್ಟೇ ಅಲ್ಲ ಕಸಬುದಾರರಲ್ಲಿ ಸುಪ್ತವಾಗಿದ್ದ ಕರಕುಶಲ ಕೌಶಲ್ಯಗಳನ್ನು ಬಳಸಿಕೊಳ್ಳಲು ಹದವಾದ ವೇದಿಕೆಯೂ ಆಗಿತ್ತೆಂಬುದನ್ನು ಎಲ್ಲರೂ ಒಪ್ಪಿಕೊಳ್ಳಬೇಕಾಗುತ್ತದೆ. ಇಲ್ಲಿ ದೊಡ್ಡ ದೊಡ್ಡ ಕೈಗಾರಿಕೆಗಳಲ್ಲಿ ಇರುವಂತೆ ಮುಷ್ಕರದಂತಹ ವ್ಯಾಜ್ಯಗಳಿರುವುದಿಲ್ಲ. ಏನಿದ್ದರೂ ಕೌಟುಂಬಿಕ ಸಹಕಾರ, ಸಲಹೆ ಹಾಗೂ ಮಾರ್ಗದರ್ಶನಗಳಿರುವಾಗ ಸಣ್ಣದೊಂದು ಹಠ, ಸಿಟ್ಟು, ದುಃಖ, ಮುನಿಸು ಕೂಡಾ ಬಹಳ್ಹೊತ್ತಿನ ತನಕ ಇರುತ್ತಿರಲಿಲ್ಲ. ಜೊತೆಗೆ ಸಮಾಜದಲ್ಲಿದ್ದ ಸಂಪತ್ತಿನ ಅಸಮಾನ ಹಂಚಿಕೆಯ ಪರಿಣಾಮ ಕಸಬುದಾರರ ಮನಸ್ಸಿಗೆ ಘಾಸಿಗೊಳಿಸದಂತೆ ಪಾತ್ರ ನಿರ್ವಹಿಸುತ್ತಿದ್ದವು. ಕುಲಕಸಬುಗಳಿಗೆ ಸಾಮಾನ್ಯವಾಗಿ ವಿದ್ಯುಚ್ಛಕ್ತಿ, ಪೆಟ್ರೋಲ್, ಡೀಸೆಲ್, ಸೀಮೆ ಎಣ್ಣೆ, ಕಲ್ಲಿದ್ದಲುಗಳಂತಹ ಇಂಧನಗಳ ಹಂಗಿಲ್ಲದೇ ನಡೆಯುತ್ತಿದ್ದವು.

ಭಾರತದ ಸಮಾಜ ವ್ಯವಸ್ಥೆ ಅತ್ಯಂತ ಜಟಿಲ ಹಾಗೂ ಸಂಕೀರ್ಣವಾದುದು. ಕುಲ(ಪರಂಪರೆ)+ಕಸಬು ತೀರಾ ಮಹತ್ವದ ಹಾಗೂ ತೀರಾ ಜವಾಬ್ದಾರಿಯುತ ಸ್ಥಾನದಲ್ಲಿದ್ದ ಸಮಾಜದ ಪ್ರಮುಖ ಅಂಗಗಳೆನ್ನಬಹುದು. ಆ ಸಮುದಾಯದವರು ಅನುಸರಿಸಿಕೊಂಡು ಬರುವ ಕಸಬುಗಳು, ರೂಢಿ, ಸಂಪ್ರದಾಯ, ಶಿಷ್ಟಾಚಾರಗಳನ್ನೇ ಮುಂದಿನ ಪೀಳಿಗೆ ಅನುಸರಿಸಿಕೊಂಡು ಬರಲೇ ಬೇಕಾಗಿತ್ತು. ಆದರೆ.. ಈಗ ಕುಲಕಸಬುಗಳು ನೇಪಥ್ಯಕ್ಕೆ ಸರಿಯುತ್ತಿದ್ದು, ತಮಗೆ ಇಷ್ಟ ಅಥವಾ ಲಾಭದಾಯಕವಾಗಿರುವ ಕಸಬುಗಳನ್ನು ಆಯ್ಕೆಮಾಡಿಕೊಂಡು ಬದುಕುವ ಜಾಯಮಾನ ಇದಾಗಿದೆ. ಇದಕ್ಕೆ ಕಾರಣಗಳೂ ಇಲ್ಲದಿಲ್ಲ; ಕಚ್ಚಾವಸ್ತುಗಳು ಸುಲಭವಾಗಿ ಲಭ್ಯವಾಗುತ್ತಿಲ್ಲ, ಸಿದ್ಧವಸ್ತುಗಳಿಗೆ ಸೂಕ್ತ ಮಾರುಕಟ್ಟೆ ಹಾಗೂ ಬೆಲೆ ಇಲ್ಲದಿರುವುದು, ಕೆಲವೊಮ್ಮೆ ಕಸಬುದಾರರ ಸಂಕೋಚ ಪ್ರವೃತ್ತಿಯೂ ಕಾರಣವಾಗುತ್ತವೆ. ಈ ಎಲ್ಲವುಗಳ ಜೊತೆಗೆ ಜಾಗತೀಕರಣ ಹಾಗೂ ಆಧುನೀಕರಣ ಪ್ರಭಾವದಿಂದ ಉತ್ಪಾದನೆಯಾದ ವಸ್ತುಗಳೊಂದಿಗೆ ತೀವ್ರ ಪೈಪೋಟಿ

ಎದುರಿಸಬೇಕೆಂಬುದಂತೂ ಸ್ಪಷ್ಟವಾಗಿದೆ. ಇದೊಂದು ನಿರಂತರ ಪ್ರಪಂಚದ ಏಕೀಕರಣ ಪ್ರಕ್ರಿಯೆ(Global Citizenship) ಯಾಗಿದೆ.

ಜಾಗತೀಕರಣವು ತನ್ನೊಂದಿಗೆ ಬಹುರಾಷ್ಟ್ರೀಯ ಕಂಪನಿಗಳನ್ನೂ ಹೊತ್ತು ತಂದ ನಂತರ ಭಾರತದಲ್ಲಿ ಆರ್ಥಿಕ ಅಭಿವೃದ್ಧಿಗಿಂತ ಆರ್ಥಿಕ ಲೂಟಿ ಹೆಚ್ಚಾಗುತ್ತದೆ ಇದರಿಂದ ಉದ್ಯೋಗ ಸೃಷ್ಟಿಯಾಗುತ್ತವೆ, ಜಾಗತಿಕ ಬಂಡವಾಳ ನಮಗೆ ಸಿ(ದ)ಕ್ಕುತ್ತದೆಯಾದರೂ ನಮ್ಮ ದೇಸಿ ಸೊಗಡಿನ ಗುಡಿ ಕೈಗಾಗರಿಕೆಗಳು ವಿನಾಶದಂಚಿಗೆ ನೂಕಲ್ಪಡುತ್ತಿವೆ. ಜಾಗತೀಕರಣ ಹಾಗೂ ಆಧುನೀಕರಣಗಳು ಸುಂದರ ವೇಷ ಹಾಕಿ, ಕ್ರೂರ ದಾಳಿ ಮಾಡುತ್ತಿವೆ ಎಂದರೂ ಅತಿಶಯವಾಗಲಾರದು. ಇಂತಹ ಕ್ರೂರ ದಾಳಿಯಿಂದ ತಪ್ಪಿಸಿಕ್ರೊಂಡು, ಜಗತ್ತಿಗೇ ಮಾದರಿಯಾದ ಸಂಸ್ಕೃತಿಯನ್ನು ಹೊಂದಿರುವ ನಮ್ಮ ದೇಶದಲ್ಲಿ ನೇಪಥ್ಯಕ್ಕೆ ಸರಿಯುತ್ತಿರುವ ಪಾರಂಪರಿಕ ಕಸಬುಗಳನ್ನು ಪುನಃ ಪುನರುಜ್ಜೀವನಗೊಳಿಸುವಲ್ಲಿ ಶ್ರಮಿಸುವುದೇ ಸಂಶೋಧನೆಯ ಮಹತ್ವವಾಗಿದೆ.

ಆಧುನಿಕ ಸಮಾಜದ ಸಾಂಸ್ಕೃತಿಕ ಪ್ರತಿನಿಧಿಗಳಂತಿರುವ 'ಪಾರಂಪರಿಕ ಕಸಬುಗಳು' ಮೇಲ್ನೋಟಕ್ಕೆ ದೇಸಿಯಂತೆ ಕಂಡು ಬಂದರೂ ಕೇವಲ ಗ್ರಾಮೀಣಕ್ಕೇ ಸೀಮಿತವಾಗಿಲ್ಲ. ಅತ್ತ ನಗರದ್ದೂ ಅಲ್ಲ! ಅನಕ್ಷರಸ್ಥ, ಸಮಾಜದ ಕೆಳಸ್ಥರದವರು, ಹಿಂದುಳಿದವರಿಗೆ ಮಾತ್ರ ಸಂಬಂಧಿಸಿದ್ದು ಎನ್ನುವಂತೆಯೂ ಇಲ್ಲ. ಇದು ಮೂಲತಃ ಪ್ರಾಚೀನದ್ದಾಗಿದ್ದರೂ ಆಧುನಿಕತೆಯನ್ನೂ ಮೈಗೂಡಿಸಿಕೊಂಡು ವರ್ತಮಾನದ್ದಾಗಿದೆ. ಇದು ನಾಶವಾಗುವಂಥದ್ದಲ್ಲ. ಇದು ನಿರಂತರವಾದುದು, ಚಲನಶಿಲವಾದುದು. ಬದಲಾವಣೆ ಇದರ ಮೂಲ ಗುಣವೆನ್ನಬಹುದಾಗಿದೆ. ಆಧುನಿಕತೆಯಿಂದ ಕುಲಸಬುಗಳು ನಾಶವಾಗುವುದಿಲ್ಲ; ಅದನ್ನು ಬಳಸಿಕೊಂಡು ಬೆಳೆಯುತ್ತಿದೆ. ಉದಾ:- 'ಹಚ್ಚೆ' ಹಾಕುವವರು ಸೂಜಿಯ ಬದಲಾಗಿ 'ಟ್ಯಾಟೂ' ಹಾಕುತ್ತಿರಬಹುದು. ಬದಲಾವಣೆ ಅಥವಾ ಸುಧಾರಣೆ ಅದರ ಸಹಜ ಗುಣಧರ್ಮ.

ಜಾನಪದವು ಇಂದು ಕೇವಲ ಸಾಹಿತ್ಯ ರೂಪದಲ್ಲಿಲ್ಲ, ಅದು ವೈಜ್ಞಾನಿಕ ವಿಧಾನಗಳ ಮೂಲಕ ಅಧ್ಯಯನಕ್ಕೊಳಪಟ್ಟು ಬಹು ಆಯಾಮವನ್ನು ಪಡೆದಿದೆ. ಜಾನಪದವು ಇಂದು ಶಾಸ್ತ್ರವಾಗಿರದೇ ಸಮಾಜ'ವಿಜ್ಞಾನ'ವಾಗಿ ಬೆಳೆದು ಸಮಾಜವಿಜ್ಞಾನ ನಿಕಾಯದಲ್ಲಿ ಕಾಯಂ ಸ್ಥಾನವನ್ನು ಗಿಟ್ಟಿಸಿಕೊಂಡಿದೆ! ಅನ್ವಯಿಕ ಕ್ಷೇತ್ರಗಳಲ್ಲಿ ಪ್ರಕಾಶಿಸುತ್ತಿದೆ. ಸಂಶೋಧನೆಯ ಫಲವಾಗಿ ಆಧುನಿಕತೆಯ ಸ್ಪರ್ಶ ಪಡೆದು ಜಾನಪದವು ವಿಕಾಸಶೀಲತೆ

ಮೈಗೂಡಿಸಿಕೊಂಡಿದೆ. ಇದೇ ಸಂಶೋಧನೆಯ ಮಹತ್ವ. ಆರ್. ರವೀಂದ್ರಶಾಸ್ತ್ರಿಯವರು Research Methods in Social Science ಎಂಬ ಕೃತಿಯಲ್ಲಿ ಹೇಳಿರುವಂತೆ "Research is an endeavour to discover answers to problems (intelectual and practical) through the application of Scientific methods to the Knowable universo"[೩] ಎಂಬ ಅಂಶವನ್ನೂ ಗಮನದಲ್ಲಿಟ್ಟುಕೊಂಡು ಕುಷ್ಟಗಿ ಪರಿಸರದ ವಿಶಿಷ್ಟ ಪಾರಂಪರಿಕ ಕಸಬುಗಳ ಸಮಸ್ಯೆಗಳಿಗೆ ವೈಜ್ಞಾನಿಕ ವಿಧಾನಗಳ ಮೂಲಕ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುವುದು ಪ್ರಸ್ತುತ ಸಂಶೋಧನೆಯ ಮಹತ್ವವಾಗಿದೆ.

ಪರಸರಕ್ಕೆ ಅನುಗುಣವಾಗಿ ಅಂದರೆ ಕಾಲ, ಪ್ರದೇಶ, ವ್ಯಕ್ತಿಗಳಿಗೆ ಅನುಗುಣವಾಗಿ ಅದು ಬದಲಾಗುತ್ತಿರುತ್ತದೆ. ಸಂಪ್ರದಾಯ, ಆಚರಣೆ ಹಾಗೂ ಪರಂಪರೆಯ ಕಲಾತ್ಮಕ ಅಭಿವ್ಯಕ್ತಿಯೂ ಹೌದು. ಇವುಗಳಲ್ಲಿ ಮಾನವನ ಪರಿಕಲ್ಪನೆ, ಪ್ರಯೋಗಶಿಲತೆ, ತಾರ್ಕಿಕತೆ. ಪ್ರಯೋಗಶಿಲತೆ, ಸಂಯೋಜನೆ ಮತ್ತು ತಂತ್ರಕೌಶಲ್ಯಗಳೂ ಸೇರಿವೆ. ಈ ಪಾರಂಪರಿಕ ಕಸಬುಗಳು ತಂತ್ರಜ್ಞಾನದ ಪ್ರಭಾವದಿಂದಾಗಿ ಉದ್ದಿಮೆಗಳಾಗಿ ಬೆಳೆದಿವೆ. ತಂತ್ರಜ್ಞಾನದ ಉತ್ಪಾದನೆಯ ಸಂದರ್ಭದಲ್ಲಿ *ಮಾನವಶಕ್ತಿಗಿಂತ ಯಾಂತ್ರಿಕಶಕ್ತಿ* ಪ್ರಾಮುಖ್ಯತೆ ಪಡೆಯುತ್ತಿದೆ.

ಕುಷ್ಟಗಿ ಪರಿಸರದ ವಿಶಿಷ್ಟ ಪಾರಂಪರಿಕ ಕಸಬುಗಳನ್ನು ಪುನಃಶ್ಚೇತನಗೊಳಿಸುವ ನಿಟ್ಟಿನಲ್ಲಿ ಅಧ್ಯಯನ ಮಾಡವ ಮೂಲಕ ಇಲ್ಲಿನ ಕಸಬುದಾರರಲ್ಲಿ ಅಡಗಿರುವ ಕೌಶಲ್ಯವನ್ನು ಬಳಸಿ, ಬೆಳೆಸ್ಿ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವುದು, ಅವರ ನಿರುದ್ಯೋಗ ಹಾಗೂ ಮರೆಮಾಚಿದ ನಿರುದ್ಯೋಗವನ್ನು ಹೋಗಲಾಡಿಸುವುದು, ಆರ್ಥಿಕ ಸ್ವಾವಲಂಬನೆಗೆ ಪ್ರೋತ್ಸಾಹಿಸುವ ಜೊತೆಗೆ ತಲಾ ಆದಾಯ, ರಾಷ್ಟ್ರೀಯ ಆದಾಯದ ಹೆಚ್ಚಳಕ್ಕೂ ಕಾರಣವಾಗುವ ಮೂಲಕ ನಮ್ಮ ದೇಶದ ಪ್ರಗತಿಗೆ ಕೈಜೋಡಿಸುವುದಾಗಿದೆ. ಪಾರಂಪರಿಕ ಕಸಬುಗಳು ಕುಷ್ಟಗಿ ಪರಿಸರದಲ್ಲಿ ಇನ್ನೂ ಜೀವಂತವಾಗಿವೆ. ಏಕೆಂದರೆ ಅವು ಸಂಪ್ರದಾಯದೊಂದಿಗೆ ಬೆರೆತಿವೆ; ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುತ್ತಿವೆ: ಪರಿಣಿತಿಯನ್ನು ಪ್ರದರ್ಶಿಸುತ್ತಿವೆ. ಕೆಲವು ಪಾರಂಪರಿಕ ಕಸಬುಗಳು ಅಳಿವಿನ ಅಂಚಿನಲ್ಲಿರುವುದಕ್ಕೆ ಕಾರಣಗಳೂ ಇಲ್ಲದಿಲ್ಲ; ಈ ಕಸಬುಗಳಲ್ಲಿ ಮೇಲು-ಕೀಳು ಎಂಬ ಭಾವನೆ ಜನರ ಮನಸ್ಸಿನಲ್ಲಿ ಬೆಳೆದಿದೆ. ಇನ್ನೂ ಕೆಲವರು ತಾವೂ ಸಮಾಜದ

ಮೇಲಸ್ತರದಲ್ಲಿ ಬರಲು, ಬದುಕಲು ಇಷ್ಟಪಡುತ್ತಿದ್ದಾರೆ. ಕಸಬುದಾರರು ತಯಾರಿಸಿದ ವಸ್ತುಗಳಿಗಿಂತ ನಯ-ನಾಜೂಕಾದ, ನವೀನ ಶೈಲಿಯ ಸಿದ್ಧವಮಸ್ತುಗಳು ಮಾರುಕಟ್ಟೆಯಲ್ಲಿ ಅಗ್ಗದ ದರದಲ್ಲಿ ಸಿಕ್ಕುತ್ತಿರುವುದರಿಂದ ಕಸಬುದಾರರು ತಮ್ಮ ಕಸಬಿನಿಂದ ಪಲಾಯನ ಗೈಯುವ ಆಲೋಚನೆ ಬಂದಿದೆ. ಹೀಗಾಗಿ ಮೊದಲೇ ಅಸ್ತಿತ್ವದಲ್ಲಿದ್ದು, ತಿಳಿಯದ ವಿಷಯಗಳ ಬಗ್ಗೆ ಜಿಜ್ಞಾಸೆಯಲ್ಲಿದ್ದ ಕೆಳಸಮುದಾಯ, ಅಲಕ್ಷತೆಗೊಳಗಾದ ಬಗ್ಗೆ ವೈಜ್ಞಾನಿಕ ಅಧ್ಯಯನ ಮಾಡುವುದರ ಮೂಲಕ ಪಾರಂಪರಿಕ ಕಸಬುಗಳ ಪುನಶ್ಚೇತನಕ್ಕೆ ಪ್ರಯತ್ನಿಸುವುದೇ ಸಂಶೋಧನೆಯ ಮಹತ್ವ ಅಡಗಿದೆ.

## ೧.೫ ಅಧ್ಯಯನದ ವಿನ್ಯಾಸ :

**ಆಧುನಿಕರಣ ಪ್ರಕ್ರಿಯೆ : ಕುಷ್ಟಗಿ ಪರಿಸರದಲ್ಲಿರುವ ಪಾರಂಪರಿಕ ಕಸಬುಗಳು** ಎಂಬ ಶೀರ್ಷಿಕೆಯಡಿ ರಚಿತಗೊಂಡ ಈ ಮಹಾ ಪ್ರಬಂಧವು ಆರು ಅಧ್ಯಾಯಗಳನ್ನು ಒಳಗೊಂಡಿದೆ.

ಒಂದನೆಯ ಅಧ್ಯಾಯ **ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ** : ಪ್ರಸ್ತಾವನೆ, ಸಂಶೋಧನೆಯ ಉದ್ದೇಶ; ಇಲ್ಲಿ ಅಧ್ಯಯನಕ್ಕೆ ಬಳಸಿದ ವಿಧಾನ ಹಾಗೂ ಸಲಕರಣೆಗಳು, ಸಂಶೋಧನೆಯ ವ್ಯಾಪ್ತಿ, ಸಂಶೋಧನೆಯ ಮಹತ್ವ, ಅಧ್ಯಯನದ ವಿನ್ಯಾಸ, ಅಧ್ಯಯನದ ವಿಧಾನ ಹಾಗೂ ಇಲ್ಲಿಯವರೆಗೆ ನಡೆದ ಅಧ್ಯಯನಗಳನ್ನು ತಿಳಿಸಲಾಗಿದೆ.

ಎರಡನೆಯ ಅಧ್ಯಾಯ **ಕುಷ್ಟಗಿಯ ಭೌಗೋಳಿಕ & ಐತಿಹಾಸಿಕ ಅವಲೋಕನ** : ಶಾಸನ ಹಾಗೂ ಐತಿಹ್ಯಗಳಲ್ಲಿ ಕುಷ್ಟಗಿ, ಪ್ರಸ್ತುತ ಅಂಕಿ-ಅಂಶಗಳು, ಭೌಗೋಳಿಕ ಅವಲೋಕನ, ಐತಿಹಾಸಿಕ ಅವಲೋಕನ ಮಾಡಲಾಗಿದೆ.

ಮೂರನೆಯ ಅಧ್ಯಾಯ **ಪಾರಂಪರಿಕ ಕಸಬುಗಳು** : ಪರಂಪರೆಯ ಉಗಮ, ಪಾರಂಪರಿಕ ಕಸಬುಗಳ ಉಗಮ, ಪಾರಂಪರಿಕ ಕಸಬು – ಪದ, ಪಾರಂಪರಿಕ ಕಸಬುಗಳು ನಡೆದು ಬಂದ ದಾರಿ, ಕುಷ್ಟಗಿ ಪರಿಸರದ ವಿಶಿಷ್ಟ ಪಾರಂಪರಿಕ ಕಸಬುಗಳಾದ ಇಳಕಲ್ಲೆ ಸೀರೆ ನೇಕಾರಿಕೆ, ಗುಳೇದಗುಡ್ಡದ ಖಣ ನೇಕಾರಿಕೆ, ಕಮತಗಿ ಪಟಗ ಮತ್ತು ರುಮಾಲು ನೇಕಾರಿಕೆ, ಅಮೀನಗಡದ ಕರದಂಟು ತಯಾರಿಕೆ, ರಾಜೂರ ಸುಣ್ಣ ತಯಾರಿಕೆ, ಭಾಗ್ಯನಗರದ ಕೇಶೋದ್ಯಮ, ಕಿನ್ನಾಳ ಕಿಟ್ಟದ ಗೊಂಬೆ ತಯಾರಿಕೆ, ಹನಮಸಾಗರ ಕೌದಿ ಹೊಲಿಗಾರಿಕೆ, ಕೊಪ್ಪಳ ಮಂಡಾಳು ತಯಾರಿಕೆ – ಇವುಗಳನ್ನೇ ಸಂಶೋಧನೆಗೆ

ಮುಖ್ಯವಾಗಿಟ್ಟುಕೊಂಡು; ಅವುಗಳು ಹುಟ್ಟಿದ ಬಗೆ, ಐತಿಹಾಸಿಕ ಬೆಳವಣಿಗೆ, ವಿಕಾಸದ ಹಾದಿ, ರೂಪಾಂತರದ ಸ್ಥಿತಿ-ಗತಿ, ಉತ್ಪಾದನಾ ವಸ್ತುಗಳ ಮಾರಾಟ ವ್ಯವಸ್ಥೆಗಳನ್ನು ವಿಶ್ಲೇಷಿಸಿದೆ. ಕುಷ್ಟಗಿ ಪರಿಸರದ ಸಾಮಾನ್ಯ ಪಾರಂಪರಿಕ ಕಸಬುಗಳನ್ನು ಆನುಷಂಗಿಕವಾಗಿ ಅಧ್ಯಯನ ಮಾಡಲಾಗಿದ್ದು, ಈ ವಿಭಾಗದಲ್ಲಿ ಕುಂಬಾರಿಕೆ, ಕಮ್ಮಾರಿಕೆ, ಪತ್ತಾರಿಕೆ, ಬಡಗಿತನ, ಕೊರವರ ಕಸಬು, ಮೇದಾರಿಕೆ, ಚಿತ್ರಗಾರಿಕೆ, ಹೂಗಾರಿಕೆ, ಮಡಿವಾಳಿಕೆ, ಕ್ಷೌರಿಕ ಕಸಬು, ಬಯಲು ಕಮ್ಮಾರಿಕೆ, ಕಲ್ಲುಕುಟಿಗ ಕಸಬು, ಚಮ್ಮಾರಿಕೆ, ಶಿಲ್ಪಗಾರಿಕೆ, ನಾಲಗಾರಿಕೆಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಪಾರಂಪರಿಕ ಕಸಬುದಾರರು ಎಲ್ಲ ಜನಪದ ಸಮಾಜದಲ್ಲಿ ಸಾಮಾನ್ಯವಾಗಿ ಕಂಡು ಬರುವುದರಿಂದ ಈ ಕಸಬುಗಳನ್ನು ವ್ಯಾಪಕವಾಗಿ ವಿಶ್ಲೇಷಿಸಲು ಹೋಗಲಾಗಿಲ್ಲ. ಅವರನ್ನು ಹೇಗೆಲ್ಲಾ ಕರೆಯುತ್ತಾರೆ, ಅವರ ಉತ್ಪಾದನೆಗಳೇನು, ಅವರ ಕಸಬಿಗಿರುವ ಆತಂಕ ಅಥವಾ ಊರ್ಧ್ವಮುಖವನ್ನು ತಿಳಿಸಲಾಗಿದೆ.

ನಾಲ್ಕನೆಯ ಅಧ್ಯಾಯ **ಪಾರಂಪರಿಕ ಕಸಬುಗಳ ಸಮಸ್ಯೆಗಳು ಮತ್ತು ಪರಿಹಾರಗಳು :** ಆಧುನೀಕರಣ, ಜಾಗತೀಕರಣ ಹಾಗೂ ಕೈಗಾರಿಕೀಕರಣಗಳು ಈ ಕಸಬುಗಳಿಗೆ ಎಂತಹ ಮಾರಾಟ ಪ್ರಕ್ರಿಯೆಯ ಸಮಸ್ಯೆಗಳನ್ನು ತಂದೊಡ್ಡಿವೆ. ಮಾರಾಟ ಪ್ರಕ್ರಿಯೆಯ ಸಮಸ್ಯೆಗಳನ್ನು ಹೇಗೆ ಪರಿಹರಿಸಬಹುದೆಂಬುದರ ಜೊತೆಗೆ ನೇಪಥ್ಯಕ್ಕೆ ಸರಿಯುತ್ತಿರುವ ಪಾರಂಪರಿಕ ಕಸಬುಗಳ ಬಗ್ಗೆಯೂ ವಿಶ್ಲೇಷಿಸಲಾಗಿದೆ.

ಐದನೆಯ ಅಧ್ಯಾಯ **ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳು ಮತ್ತು ಆಧುನೀಕರಣ :** ಆಧುನೀಕರಣ, ಜಾಗತೀಕರಣ ಹಾಗೂ ಕೈಗಾರಿಕೀಕರಣ, ಔದ್ಯೋಗಿಕರಣ, ಖಾಸಗೀಕರಣ, ಪಾಶ್ಚಾತ್ಯೀಕರಣ, ಸಾಂಸ್ಕೃತೀಕರಣ ಹಾಗೂ ನಗರೀಕರಣಗಳಿಂದ ಈ ಕಸಬುಗಳ ಮೇಲೆ ಯಾವ ರೀತಿ ಪರಿಣಾಮ ಬೀರಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ.

ಆರನೆಯ ಅಧ್ಯಾಯ **ಸಮಾರೋಪ :** **ಅನುಬಂಧಗಳು** ವಿಭಾಗದಲ್ಲಿ ಕುಷ್ಟಗಿ ಪರಿಸರದ ನಕ್ಷೆ, ವೃತ್ತಿಪದಕೋಶ, ಪ್ರಶ್ನಾವಳಿ, ವಕ್ತೃ ವಿವರ, ಪರಾಮರ್ಶನ ಗ್ರಂಥಗಳು ಹಾಗೂ ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳ ಹಾಗೂ ಸಾಮಾನ್ಯ ಪಾರಂಪರಿಕ ಕಸಬುಗಳ ಛಾಯಾ ಚಿತ್ರಗಳನ್ನು ಅಳವಡಿಸಲಾಗಿದೆ.

## ೧.೬ ಸಂಶೋಧನಾ ವಿಧಾನ :

ಪ್ರಸ್ತುತ ಮಹಾಪ್ರಬಂಧವು **ಆಧುನಿಕರಣ ಪ್ರಕ್ರಿಯೆ : ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳು** ಎಂಬ ಶೀರ್ಷಿಕೆ ಅಡಿಯಲ್ಲಿ ಜಾನಪದದ ಸಂಶೋಧನೆಯ ಭಾಗವಾಗಿದೆ. ಬಹುತೇಕ ಎಲ್ಲ ಜಾನಪದ ತಜ್ಞರೂ ಒಪ್ಪಿರುವ 'Folklore research is not a digital; it's an experimental and endless.' ಎಂಬ ಅಭಿಪ್ರಾಯದಂತೆ ಅಧ್ಯಯನಕ್ಕಾಗಿ ಪ್ರಾಯೋಗಿಕ ಜಾನಪದೀಯ ಅಂಶಗಳನ್ನು ಅಳವಡಿಸಿಕೊಂಡಿದೆ. ಈ ಅಧ್ಯಯನದಲ್ಲಿ ಕುಷ್ಟಗಿ ಪರಿಸರದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ, ನೈಸರ್ಗಿಕ, ಶೈಕ್ಷಣಿಕ ಸ್ಥಿತಿ-ಗತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲು ಕೆಲವು ಸಂಶೋಧನಾ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಭೌಗೋಳಿಕ ಸಿದ್ಧಾಂತದ ಅಡಿಯಲ್ಲಿ, ಬಹುಶಿಸ್ತೀಯ ಅಧ್ಯಯನದ ಮೂಲಕ ಡಾ. ಮಂಜುನಾಥ ಬೇವಿನಕಟ್ಟಿಯವರ ಮಾರ್ಗದರ್ಶನದಲ್ಲಿ ಈ ಸಂಶೋಧನೆಯನ್ನು ಕೈಗೊಂಡಿದ್ದೇನೆ.

### ಮಾಹಿತಿ ಸಂಗ್ರಹ ವಿಧಾನಗಳು ಮತ್ತು ಬಳಸಿದ ಸಲಕರಣೆಗಳು :

'ಸಂಗ್ರಹ ಮೊದಲ ಮೆಟ್ಟಿಲು, ವಿಶ್ಲೇಷಣೆ ಕೊನೆಯ ಮೆಟ್ಟಿಲು' ಎಂಬುದಕ್ಕೆ ಇಂಬು ನೀಡಿ ಮಾಹಿತಿಗಳ ಸಂಗ್ರಹಕ್ಕಾಗಿ ಕ್ಷೇತ್ರ ಕಾರ್ಯದಲ್ಲಿ ಇರುವ ಬದ್ಧ ಪದ್ಧತಿ ಹಾಗೂ ಮುಕ್ತ ಪದ್ಧತಿಗಳೆರಡನ್ನೂ ಬಳಸುವ ಮೂಲಕ ಅಧ್ಯಯನ ಮಾಡಲಾಗಿದೆ. ಬದ್ಧ ಪದ್ಧತಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡು, ಹಲವು ವಿಧಾನಗಳನ್ನು ಅನುಸರಿಸಿ ಸಂಶೋಧನೆಗೆ ಒಳಪಡುವ ಸಂಗತಿ, ವ್ಯಕ್ತಿ, ಕುಟುಂಬ ಹಾಗೂ ಸಮುದಾಯವನ್ನು ನೇರವಾಗಿ ಭೇಟಿಯಾಗಿ ಪ್ರಾಥಮಿಕ ಮಾಹಿತಿಯನ್ನು ಸಂಗ್ರಹಿಸಲಾಯಿತು.

ಕ್ಷೇತ್ರಕಾರ್ಯದಲ್ಲಿ ಪಡೆದುಕೊಂಡ ಮಾಹಿತಿಯು ಮಹಾಪ್ರಬಂಧವನ್ನು ರಚಿಸುವಾಗ ಕೊರತೆಯೆನಿಸಿದಾಗ ಮೊಬೈಲ್ ಮೂಲಕ ವಕ್ತೃಗಳನ್ನು ಸಂಪರ್ಕಿಸಿ ಸಂದರ್ಶಿಸುವ ಮೂಲಕ ಇನ್ನಷ್ಟು ಮಾಹಿತಿಯನ್ನು ಪಡೆದೆನು. ನಾನು ಎರಡ್ಮೂರು ಸಲ ಕ್ಷೇತ್ರಕಾರ್ಯ ಕೈಗೊಂಡಾಗಲೂ ಇರುತ್ತೇವೆಂದು ಸಮಯ ಕೊಟ್ಟ ವಕ್ತೃಗಳು ಸಿಗದಿದ್ದಾಗ ಅನಿವಾರ್ಯವಾಗಿ ದೂರವಾಣಿಯ ಮೂಲಕ ಸಂದರ್ಶನ ಮಾಡಬೇಕಾಯಿತು. ಇನ್ನೂ ಕೆಲವು ಭಾವಚಿತ್ರಗಳನ್ನು ಇ-ಅಂಚೆ ಮೂಲಕ ತರಿಸಿಕೊಳ್ಳಬೇಕಾಯಿತು. ಈ ಹಿನ್ನೆಲೆಯಲ್ಲಿ ಮುಕ್ತ ಪದ್ಧತಿಯನ್ನು ಅನುಸರಿಸಿ ಮಾಹಿತಿ ಸಂಗ್ರಹಿಸಿದ್ದನ್ನು ಉಲ್ಲೇಖಿಸಲಾಗಿದೆ.

**ಪ್ರಾಥಮಿಕ ಮಾಹಿತಿ ಸಂಗ್ರಹ ವಿಧಾನಗಳು :** ಇದರಲ್ಲಿ ಮುಖ್ಯವಾಗಿ ಸಂದರ್ಶನ ವಿಧಾನ, ಅವಲೋಕನ ವಿಧಾನ ಹಾಗೂ ಪ್ರಶ್ನಾವಳಿ ಎಂಬ ಮೂರು ವಿಧಾನಗಳಿವೆ.

➤ **ಸಂದರ್ಶನ ವಿಧಾನ** – ಕುಷ್ಟಗಿ ಪರಿಸರದಲ್ಲಿನ ವಿಶಿಷ್ಟ ಪಾರಂಪರಿಕ ಕಸಬುಗಳನ್ನು ಅಧ್ಯಯನ ಮಾಡಲು ಮುಖ್ಯವಾಗಿ ಮಾಹಿತಿಗಳನ್ನು ಸಂಗ್ರಹಿಸಬೇಕಾಗುತ್ತದೆ. ಹೀಗಾಗಿ ನೇರವಾಗಿ ವಕ್ತೃಗಳನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸುವ 'ಬದ್ಧ ಪದ್ಧತಿ'ಯನ್ನು ಅನುಸರಿಸಿದೆನು.

ಇಳಕಲ್ಲ ಸೀರೆ ನೇಕಾರಿಕೆಯನ್ನು ಅಧ್ಯಯನ ಮಾಡಲು ಇಳಕಲ್ಲ ಪಟ್ಟಣದ ೧೦, ದೋಟಿಹಾಳ ಗ್ರಾಮದ ೫, ಹನಮಸಾಗರ ಗ್ರಾಮದ ೫ ಹಾಗೂ ತಾವರಗೇರ ಗ್ರಾಮದ ೩ ವಕ್ತೃಗಳನ್ನು ಸಂದರ್ಶಿಸಲಾಯಿತು. ಗುಳೇದಗುಡ್ಡದ ಖಣ ನೇಕಾರಿಕೆಯನ್ನು ಅಧ್ಯಯನ ಮಾಡಲು ಗುಳೇದಗುಡ್ಡ ಗ್ರಾಮದ ೧೫ ವಕ್ತೃಗಳನ್ನು ಸಂದರ್ಶಿಸಲಾಯಿತು. ಕಮತಗಿ ಪಟಗ ಮತ್ತು ರುಮಾಲ ನೇಕಾರಿಕೆಯನ್ನು ಅಧ್ಯಯನ ಮಾಡಲು ಕಮತಗಿ ಗ್ರಾಮದ ೧೫ ವಕ್ತೃಗಳನ್ನು ಸಂದರ್ಶಿಸಲಾಯಿತು. ಅಮೀನಗಡದ ಕರದಂಟು ತಯಾರಿಕೆಯನ್ನು ಅಧ್ಯಯನ ಮಾಡಲು ಅಮೀನಗಡದ ೭ ವಕ್ತೃಗಳನ್ನು, ಹುನಗುಂದದ ಒಬ್ಬ, ಬೆಂಗಳೂರಿನ ಇಬ್ಬರು ಹಾಗೂ ಚಿಲಾಪೂರ ಗ್ರಾಮದ ಒಬ್ಬ ವಕ್ತೃಗಳನ್ನು ಸಂದರ್ಶಿಸಲಾಯಿತು. ರಾಜೂರ ಸುಣ್ಣ ತಯಾರಿಕೆ ಅಧ್ಯಯನಕ್ಕಾಗಿ ರಾಜೂರ ಗ್ರಾಮದ ೧೩ ವಕ್ತೃಗಳನ್ನು ಸಂದರ್ಶಿಸಲಾಯಿತು. ಭಾಗ್ಯನಗರದ ಕೂದಲು ಉದ್ಯಮದ ಅಧ್ಯಯನಕ್ಕಾಗಿ ೧೧ ವಕ್ತೃಗಳನ್ನು ಸಂದರ್ಶಿಸಲಾಯಿತು. ಕಿನ್ನಾಳ ಕಿಟ್ಟದ ಗೊಂಬೆ ತಯಾರಿಕೆಯ ಅಧ್ಯಯನಕ್ಕಾಗಿ ೧೩ ಹಾಗೂ ಕಲಘಟಗಿಯ ಒಬ್ಬ ವಕ್ತೃಗಳನ್ನು ಸಂದರ್ಶಿಸಲಾಯಿತು. ಹನಮಸಾಗರ ಕೌದಿ ಹೊಲಿಗಾರಿಕೆಯ ಅಧ್ಯಯನಕ್ಕಾಗಿ ಹನಮಸಾಗರದ ೯ ಹಾಗೂ ಆಂಧ್ರಪ್ರದೇಶದ ಚಿನ್ನಸಿರ್ಲಾಂನ ೫ ವಕ್ತೃಗಳನ್ನು ಸಂದರ್ಶಿಸಲಾಯಿತು. ಕೊಪ್ಪಳದ ಮಂಡಾಳು ತಯಾರಿಕೆಯ ಅಧ್ಯಯನಕ್ಕಾಗಿ ಕೊಪ್ಪಳ ನಗರದ ೨೦ ವಕ್ತೃಗಳನ್ನು ಸಂದರ್ಶಿಸಲಾಗಿದೆ. ಒಟ್ಟಿನಲ್ಲಿ ೧೪೦ ವಕ್ತೃಗಳನ್ನು ಸಂದರ್ಶಿಸುವ ಮೂಲಕ ಸಮಗ್ರ ಮಾಹಿತಿಯನ್ನು ಸಂಗ್ರಹಿಸಲಾಯಿತು. ವಕ್ತೃಗಳು ನಾವು ನಿರೀಕ್ಷಿಸಿದ್ದಕ್ಕಿಂತ ಭಿನ್ನವಾಗಿ ತಮ್ಮ ಅನುಭವಗಳನ್ನು ತೆರೆದಿಟ್ಟರಷ್ಟೇ ಅಲ್ಲ ತಮ್ಮ ಧ್ವನಿಯನ್ನು ವಿಶಾಲ ಜಗತ್ತಿಗೆ ಕೇಳಿಸುವಂತೆ ಮಾಡಿದರು. ಹೀಗಾಗಿ ಅವರ ಗ್ರಾಮೀಣ ವ್ಯಕ್ತಿತ್ವ, ಶ್ರಮ ಸಂಸ್ಕೃತಿ, ಕೌಶಲ್ಯಯುತ ಉತ್ಪಾದನಾ ವಿಧಾನ ಹಾಗೂ ಜಾನಪದಕ್ಕೆ ಸಂಬಂಧಿಸಿದ ಸಹಾನುಭೂತಿಯ ಜೊತೆಗೆ ಆಂತರಿಕ ದೃಷ್ಟಿಕೋನವನ್ನು ಸೂಕ್ಷ್ಮವಾಗಿ ಗುರುತಿಸಿದೆನು. ಈ ಪೂರ್ವದಲ್ಲಿ ನನಗೆ

ಗೊತ್ತಿದ್ದ ಮಾಹಿತಿಯನ್ನೂ ಅವರೊಂದಿಗೆ ವಿಶ್ಲೇಷಿದೆನು. ಕೆಲವೊಮ್ಮೆ ವೈಯಕ್ತಿಕವಾಗಿಯೂ, ಇನ್ನೂ ಕೆಲವೊಮ್ಮೆ ಸಾಮೂಹಿಕವಾಗಿಯೂ ಸಂದರ್ಶಿಸಲಾಯಿತು.

➢ **ಅವಲೋಕನ ವಿಧಾನ** – ಕುಷ್ಟಗಿ ಪರಿಸರದಲ್ಲಿನ ವಿಶಿಷ್ಟ ಪಾರಂಪರಿಕ ಕಸಬುಗಳು ಭೌತಿಕ ಜಗತ್ತಿನ ಜಾನಪದವಾಗಿರುವುದರಿಂದ ಇವುಗಳನ್ನು ಅಧ್ಯಯನ ಮಾಡಲು ಮಾಹಿತಿ ಸಂಗ್ರಹಣೆಗಾಗಿ ಅವಲೋಕನ ವಿಧಾನಕ್ಕೂ ಮಾರುಹೋಗಬೇಕಾಯಿತು. ಸಂದರ್ಶಿಸಿದ ಕುಟುಂಬಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ಅವಲೋಕಿಸಿದಾಗ ಅವರ ಆರ್ಥಿಕ ಸ್ಥಿತಿಗೆ ಅನುಗುಣವಾದ ಸಾಮಾಜಿಕ ಸ್ಥಾನಮಾನ ಸಿಕ್ಕುವುದನ್ನುಅವಲೋಕಿಸಲಾಯಿತು. ಸಾಮಾಜಿಕ ಸ್ತರವಿನ್ಯಾಸದಲ್ಲಿ ಶ್ರೀಮಂತ ಕಸಬುದಾರ, ಮಧ್ಯಮ ವರ್ಗದ ಕಸಬುದಾರ ಹಾಗೂ ಅತ್ಯಂತ ಕೆಳವರ್ಗದ ಕಸಬುದಾರರ ಅಭಿಪ್ರಾಯದಲ್ಲಿ ವ್ಯತ್ಯಾಸವನ್ನು ಗಮನಿಸಲಾಯಿತು. ಶ್ರೀಮಂತ ಕಸಬುದಾರ ಈ ಪಾರಂಪರಿಕ ಕಸಬಿನಿಂದ ತೃಪ್ತಿಯನ್ನು ಕಂಡರೆ; ಮಧ್ಯಮ ವರ್ಗದ ಕಸಬುದಾರ ಹೊಟ್ಟೆ-ಬಟ್ಟೆಗೆ ಆಗುತ್ತದೆ, ಆದರೆ ಗಳಿಕೆ ಇಲ್ಲ ಎಂಬ ಸಮಾಧಾನದ ಅಭಿಪ್ರಾಯವನ್ನು ವ್ಯಕ್ತಪಡಿಸಿದರೆ; ಅತ್ಯಂತ ಕೆಳವರ್ಗದ ಕಸಬುದಾರ ಸಾಲದಲ್ಲೇ ಹುಟ್ಟಿ ಸಾಲದಲ್ಲೇ ಸಾಯುವ ಅಭಿಪ್ರಾಯ ವ್ಯಕ್ತಪಡಿಸುತ್ತಾನೆ. ಇಲ್ಲಿ ಆತನಿಗೆ ಈ ಕಸಬು ಬಿಟ್ಟರೆ ಬೇರೆ ಉದ್ಯೋಗವೇ ಗೊತ್ತಿಲ್ಲವೆಂದೂ, ತಮ್ಮ ಕುಟುಂಬದ ಪಾರಂಪರಿಕ ವೃತ್ತಿಯೆಂದೂ ಅನಿವಾರ್ಯತೆಯ ಮಾತನ್ನಾಡುತ್ತಾನೆ.

ಯಾವ ಕಸಬುದಾರ ಆಧುನಿಕತೆಗೆ ತಕ್ಕಂತೆ ತನ್ನ ವೃತ್ತಿಯಲ್ಲಿ ಕೌಶಲಗಳನ್ನು ಅಭಿವೃದ್ಧಿಪಡಿಸಿಕೊಂಡಿದ್ದಾನೆಯೋ ಅಂತಹ ಕಸಬುಗಳು ಈಗಲೂ ಜೀವಂತವಾಗಿವೆ. ಇಳಕಲ್ಲ ಸೀರೆ ನೇಕಾರ ಆಧುನಿಕತೆಗೆ ತಕ್ಕಂತೆ ಸೀರೆಗಳ ವಿನ್ಯಾಸವನ್ನು ಬದಲಾಯಿಸುತ್ತಿರುವುದರಿಂದ ಇಂತಹ ಸೀರೆಗಳಿಗೆ ಈಗಲೂ ಬೇಡಿಕೆ ಇದೆ. ಆದರೆ ಗುಳೇದಗುಡ್ಡದ ನೇಕಾರ ತನ್ನ ಕುಪ್ಪಸದ ಖಣ ನೇಕಾರಿಕೆಯಲ್ಲಿ ಹೊಸ ಹೊಸ ಶೈಲಿಯನ್ನು ತನ್ನ ಕಸಬಿನಲ್ಲಿ ಅಳವಡಿಸಿಕೊಳ್ಳದೇ ಇರುವುದರಿಂದ ಖಣ ನೇಕಾರಿಕೆ ಇಂದು ಅಳಿವಿನ ಅಂಚಿಗೆ ಬಂದಿದೆ. ಇಂತಹ ಸೂಕ್ಷ್ಮಾತೀಸೂಕ್ಷ್ಮ ಅಂಶಗಳನ್ನು ಅವಲೋಕಿಸಿ, ಅವುಗಳನ್ನು ಆಯಾಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

➢ **ಪ್ರಶ್ನಾವಳಿ ವಿಧಾನ** : ಪ್ರಶ್ನಾವಳಿಗಳು ಸಂಶೋಧನಾ ಲೋಕಕ್ಕೆ ಕೀಲಿಕೈ ಇದ್ದಂತೆ ಎಂಬುದರ ಮಹತ್ವವನ್ನು ತಿಳಿಸಲು ರುಡಿಯಾರ್ಡ ಕಿಪ್ಲಿಂಗ್ ಈ ರೀತಿ ಹೇಳಿದ್ದಾನೆ :

“ನಾನು ಅತಿ ನಮ್ರವಾಗಿ ಕಾರ್ಯಮಾಡುವ ಆರು ಜನ ಸೇವಕರನ್ನು ಹೊಂದಿದ್ದೇನೆ. ಅವರು ನನಗೆ ಎಲ್ಲವನ್ನೂ ಕಲಿಸುವರು. ಅವರ ಹೆಸರುಗಳಿ ಇಂತಿವೆ : ಏನು ಮತ್ತು ಏಕೆ, ಯಾವಾಗ ಮತ್ತು ಹೇಗೆ, ಎಲ್ಲಿ ಮತ್ತು ಯಾರು”[೪] ಈ ರೀತಿ ಪ್ರಶ್ನಿಸುವುದರಿಂದ ಮಾಹಿತಿದಾರನಿಂದ ತುರ್ತಾಗಿ ಮಾಹಿತಿಯನ್ನು ಒದಗಿಸಿಕೊಳ್ಳಲು ಪ್ರಶ್ನಾವಳಿಯನ್ನು ಬಳಸಲಾಯಿತು. ಅದೇ ಕಸಬು ಆಯ್ಕೆ ಮಾಡಿಕೊಳ್ಳಲು ಕಾರಣಗಳೇನು? ಕಸಬಿಗೆ ಬಳಸುವ ಪರಿಕರಗಳು ಯಾವುವು? ಪರಿಕರಗಳ ಬಗ್ಗೆ ನಿಮ್ಮ ನಂಬಿಕೆ ಏನು? ಯಾವುದಾದರೂ ಆಚರಣೆಗಳನ್ನು ಆಚರಿಸಲಾಗುತ್ತಿದೆಯೇ? ಕಸಬಿನಲ್ಲಿ ಬಳಸಲ್ಪಡುವ ಕಚ್ಚಾ ವಸ್ತುಗಳು ಯಾವುವು? ಅವುಗಳ ಬಗ್ಗೆ ನಿಮ್ಮ ನಂಬಿಕೆ ಏನು? ಯಾವುದಾದರೂ ಆಚರಣೆಗಳನ್ನು ಆಚರಿಸಲಾಗುತ್ತಿದೆಯೇ? ಉದ್ಯೋಗದ ಕಾರ್ಯವಿಧಾನ(ಕಚ್ಚಾವಸ್ತು ಸಂಗ್ರಹದಿಂದ–ಮಾರಾಟವಾಗುವವರೆಗೆ) ಹೇಗೆ? ಭೌತಿಕ ಶ್ರಮ & ಮಾನಸಿಕ (SKILLS) ಶ್ರಮ ಏನು? ಕುಟುಂಬದ ಭಾಗಿತ್ವ ಹೇಗಿದೆ? ತಯಾರಿಸಿದ ವಸ್ತುಗಳ ಉಪಯೋಗಗಳು ಏನು? ಆಧುನೀಕರಣ / ನಗರೀಕರಣ / ವಸಾಹತುಶಾಹಿಯಿಂದ ಬಂದ ಪೂರಕ ವಸ್ತುಗಳು ಯಾವುವು? ಆ ಪೂರಕ ವಸ್ತುಗಳಿಂದಾದ ಪರಿಣಾಮಗಳೇನು? ಹಿಂದಿನ ಸಾಮಾಜಿ/ಆರ್ಥಿಕಜೀವನಕ್ಕೂ ಈಗಿನ ಜೀವನಕ್ಕೂ ವ್ಯತ್ಯಾಸಗಲೇನಾದರೂ ಇವೆಯೇ? ಪಾರಂಪರಿಕ ಕಸುಬುಗಳೂ ಹೊಸ ರೂಪ ಹೊಂದಿವೆಯೇ? ಪಾರಂಪರಿಕ ಕಸುಬುಗಳು ಬೇಕೋ? ಬೇಡವೋ? ಹಾಗಾದರೆ.... ಏಕೆ? ಪಾರಂಪರಿಕ ಕಸುಬುಗಳ ಮುಂದುವರಿಕೆಗೆ ಇರುವ ಸಮಸ್ಯೆಗಳೇನು? ಎಂಬ ಪ್ರಶ್ನೆಗಳಿಗೆ ಉತ್ತರ ಪಡೆದಿದ್ದಲ್ಲದೇ ಒಟ್ಟಾರೆ ವಕ್ತೃ ಅಭಿಪ್ರಾಯವನ್ನೂ ಪಡೆಯಲಾಯಿತು. ಹೀಗೆ ೨೦ ಅಂಶಗಳಿರುವ ಪ್ರಶ್ನಾವಳಿ ವಿಧಾನವನ್ನು ಅನುಸರಿಸಬೇಕಾಯಿತು. ಇದರಿಂದ ಕಸಬಿನ ವಿವಿಧ ಹಂತದಲ್ಲಿ ತೊಡಗಿರುವ ಎಲ್ಲರ, ಎಲ್ಲಾ ವಯೋಮಾನದವರ, ಸ್ತ್ರೀ–ಪುರುಷ ಕಸಬುದಾರರ, ಗ್ರಾಹಕರ ಅಂತರಂಗವನ್ನೇ ಪ್ರವೇಶಿಸುವ ಮೂಲಕ ಅವರ ಮನಸ್ಸಿನಲ್ಲಿರುವ ಭಾವನೆ ಮತ್ತು ವೈಯಕ್ತಿಕ ಅಭಿಪ್ರಾಯಗಳನ್ನು ಪಡೆಯಲಾಯಿತು. ಕೆಲವೊಮ್ಮೆ ಪ್ರಶ್ನಾವಳಿಯಲ್ಲಿರುವ ಅಂಶಗಳಿಗಿಂತಲೂ ಹೆಚ್ಚಿನ ಪ್ರಶ್ನೆಗಳನ್ನು ಕೇಳಬೇಕಾಯಿತು.

➤ **ಆನುಷಂಗಿಕ ಮಾಹಿತಿ ಸಂಗ್ರಹ ವಿಧಾನಗಳು** : ಸಮಾಜವಿಜ್ಞಾನದ ಸಂಶೋಧನೆಯಲ್ಲಿ ಆನುಷಂಗಿಕ ಮಾಹಿತಿ ಸಂಗ್ರಹ ತುಂಬಾ ಮಹತ್ವದ ಹಂತ. ಸಂಶೋಧನೆಯ ಸಮಸ್ಯೆಯನ್ನು ಸಮಸ್ಯೀಕರಿಸುವ ಹಂತದಿಂದ ಹಿಡಿದು ಮಹಾಪ್ರಬಂಧದಲ್ಲಿ ಸಮಾರೋಪದವರೆಗಿನ ಎಲ್ಲ ಹಂತಗಳಲ್ಲಿಯೂ ಸಂಶೋಧನೆಗೆ

ಒಳಪಡುವ ಸಂಗತಿಗಳಿಗೆ ಸಂಬಂಧಿಸಿದ ಆನುಷಂಗಿಕ ಮಾಹಿತಿಯ ಪಾತ್ರವೂ ಮುಖ್ಯವಾಗಿದೆ. ಆನುಷಂಗಿಕ ದಾಖಲೆಗಳ ಪಟ್ಟಿಯಲ್ಲಿ ಬರುವ ಮುಖ್ಯ ದಾಖಲೆಗಳು ಇಂತಿವೆ. ಈಗಾಗಲೇ ಮಂಡಿತವಾದ ಸಂಶೋಧನಾ ಪ್ರಬಂಧಗಳು, ಅಚ್ಚಾದ ಸಂಶೋಧನಾ ಪ್ರಬಂಧಗಳು, ವಿಚಾರ ಸಂಕಿರಣದಲ್ಲಿ ಮಂಡಿತವಾದ ಸಂಶೋಧನಾ ಲೇಖನಗಳು, ಈಗಾಗಲೇ ಯಾವುದೋ ರೂಪದಲ್ಲಿ ದಾಖಲಾಗಿರುವ ಮೌಖಿಕ ಆಕರಗಳು ಇತ್ಯಾದಿಗಳನ್ನು ಪ್ರಮುಖ ಆನುಷಂಗಿಕ ಮಾಹಿತಿಗಳೆಂದು ಗುರುತಿಸಲಾಗಿದೆ. ಈ ನಿಟ್ಟಿನಲ್ಲಿ ಹಲವು ನಿಘಂಟುಗಳನ್ನು, ಪ್ರಕಟಿತ ಪುಸ್ತಕಗಳನ್ನು, ಸಂಪಾದಿತ ಕೃತಿಗಳನ್ನು, ನಿಯತಕಾಲಿಕೆ(ಪತ್ರಿಕೆ)ಗಳಲ್ಲಿ ಪ್ರಕಟಿತ ಲೇಖನಗಳು ಹಾಗೂ ಅಂತರ್ಜಾಲದ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ.

**ಬಳಸಿದ ಸಲಕರಣೆಗಳು :**

ಕ್ಷೇತ್ರಕಾರ್ಯದಲ್ಲಿ ಅನೇಕ ಸಲಕರಣೆಗಳು ತೀರಾ ಅಗತ್ಯವೆನಿಸುತ್ತವೆ. ಅದರಲ್ಲೂ ಭೌತಿಕ ಜಗತ್ತಿನ ಜಾನಪದ ಅಧ್ಯಯನಕ್ಕೆ ಹಲವಾರು ಸಲಕರಣೆಗಳು ಬೇಕಾಗುತ್ತವೆ.

➢ **ವೀಡಿಯೊ ಕ್ಯಾಮರಾ :** ಕಸುಬುಗಳ ಉತ್ಪಾದನಾ ವಿಧಾನ, ಕಸುಬುದಾರರ ವೈಯಕ್ತಿಕ ಮಾಹಿತಿ ಹಾಗೂ ಹೇಳಿಕೆಯನ್ನು ಚಿತ್ರೀಕರಿಸಲು ವೀಡಿಯೋ ಕ್ಯಾಮರಾ ಉಪಯೋಗಿಸಲಾಯಿತು. ಇದು ಆ ಸಂದರ್ಭವನ್ನು ಪುನಃ ನಮ್ಮ ಮುಂದೆ ತರುವ ಜೊತೆಗೆ ಇನ್ನಷ್ಟು ನಿಖರತೆ ಹಾಗೂ ವಿಶ್ವಾಸವನ್ನು ಹುಟ್ಟಿಸಿತು. ಮಹಾಪ್ರಬಂಧವನ್ನು ರಚಿಸುವಾಗ ನಮ್ಮ ವಿಚಾರ ಲಹರಿಯನ್ನು ಬೇರೆ ದೃಷ್ಟಿಕೋನದಿಂದ ನೋಡುವ ಹಾಗೆ ಮಾಡಬಲ್ಲ ಇತ್ತೀಚಿನ ಬಹು ಬಳಕೆಯ ಸಲಕರಣೆಯಾಗಿದೆ.

➢ **ಫೋಟೋ ಕ್ಯಾಮರಾ :** ಅಧ್ಯಯನವೊಂದು ಪೂರ್ಣಗೊಳ್ಳಲು ಛಾಯಾಚಿತ್ರಗಳು ಬೇಕೇ ಬೇಕು ಎನ್ನುವಷ್ಟು ಪ್ರಮುಖ ಸ್ಥಾನವನ್ನು ಗಿಟ್ಟಿಸಿವೆ. ಅವು ಸಂಶೋಧನೆಗೆ ಅತ್ಯವಶ್ಯಕವೂ ಆಗಿವೆ. A picture wroth thousand words ಎಂಬ ಮಾತು ಇಲ್ಲಿ ಅಕ್ಷರಶಃ ಸತ್ಯವೆನಿಸದೇ ಇರದು. ಕ್ಷೇತ್ರಕಾರ್ಯದ ಜೀವಂತಿಕೆಯನ್ನು ಹಿಡಿದಿಡುವಲ್ಲಿ ಫೋಟೋ ಕ್ಯಾಮರಾ ಆಪ್ತ ಸಹಾಯಕನ ಪಾತ್ರವಹಿಸಿತು.

➢ **ಧ್ವನಿ ಮುದ್ರಿಕೆ :** ವಕ್ತೃಗಳ ವಿವರಣೆ, ಅಭಿಪ್ರಾಯ ಹಾಗೂ ಅನಿಸಿಕೆಗಳನ್ನು ಧ್ವನಿ ಮುದ್ರಿಸಿಕೊಂಡರೆ ಅಧ್ಯಯನಕ್ಕೆ ಸುಲಭವಾಗುತ್ತದೆ. ಅಲ್ಲದೇ ವಕ್ತೃಗಳ ಹೇಳಿಕೆಯನ್ನು ಅವರದೇ ಆಡುಮಾತಿನಲ್ಲಿ ದಾಖಲಿಸಲು ಇದು ತುಂಬಾ ಸಹಕರಿಸುತ್ತದೆ.

➢ **ಮೊಬೈಲ್ ಫೋನ್** : ಈ ಆಧುನಿಕ ಸಲಕರಣೆಯು ಸಂಶೋಧನಾ ಕಾರ್ಯದಲ್ಲಿ ತುಂಬಾ ಅಗತ್ಯ ಹಾಗೂ All in one ಸಲಕರಣೆಯೂ ಆಗಿ ಬಳಕೆಯಾಯಿತು. ಫೋಟೋ ಕ್ಯಾಮರಾ ಆಗಿಯೂ, ದೃಶ್ಯವನ್ನು ಚಿತ್ರೀಕರಿಸಲು ವೀಡಿಯೋ ಕ್ಯಾಮರಾ ಆಗಿಯೂ, ಧ್ವನಿ ಮುದ್ರಿಕೆಯಾಗಿಯೂ ಬಳಸಲ್ಪಟ್ಟಿತು. ಇವಿಷ್ಟೇ ಅಲ್ಲದೇ ವಕ್ತೃಗಳನ್ನು ಸಂಪರ್ಕಿಸಲು ಹಾಗೂ ಕೆಲವೊಮ್ಮೆ ಅಂತರ್ಜಾಲದ ಮೂಲಕ ಹೆಚ್ಚಿನ ಮಾಹಿತಿಯನ್ನು ತೆರೆದಿಡುವ ಉತ್ತಮ ಸಲಕರಣೆಯಾಯಿತು.

➢ **ಕಂಪ್ಯೂಟರ್ / ಅಂತರ್ಜಾಲ / ಮುದ್ರಣ ಯಂತ್ರ :** ಇತ್ತೀಚಿನ ಸಂಶೋಧನೆಯು ಕಂಪ್ಯೂಟರ್ ಹಾಗೂ ಅಂತರ್ಜಾಲಗಳ ನೆರವಿಲ್ಲದೆ ಮುಕ್ತಾಯವೇ ಆಗಲಾರದು! ಮಾಹಿತಿಯನ್ನು ಹುಡುಕಲು ಜ್ಞಾನದ ಆಗರ ಅಂತರ್ಜಾಲ ತುಂಬಾ ಉಪಯುಕ್ತವಾಗಿದೆ. ಸಾರಲೇಖ, ವರದಿ ಹಾಗೂ ಮಹಾಪ್ರಬಂಧವನ್ನು ರಚಿಸಲು, ಬೆರಳಚ್ಚು ಮಾಡಿ ಮುದ್ರಿಸಲು ಕಂಪ್ಯೂಟರ್ ಹಾಗೂ ಮುದ್ರಣ ಯಂತ್ರ ತುಂಬಾ ಸಹಕಾರಿಯಾದವು.

## ೧.೭ ಇಲ್ಲಿಯವರೆಗೆ ನಡೆದ ಅಧ್ಯಯನಗಳು :

ಈಗಾಗಲೇ ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳ ಬಗ್ಗೆ ನಡೆದ ಅಧ್ಯಯನಗಳನ್ನು ಇಣುಕಿದಾಗ 'ಗುಡ್ಡವನ್ನು ಬಗೆದು, ಇಲಿ ಹಿಡಿದಂತಾಗುತ್ತದೆ'! ಅಂದರೆ ತುಂಬಾ ವಿರಳವಾದ ಮಾಹಿತಿಗಳು ಲಭ್ಯವಾಗುತ್ತವೆ. ಅವುಗಳಲ್ಲಿ ಕೆಲವು ನನ್ನ ಸಂಶೋಧನೆಗೆ ಪೂರಕ ಮಾಹಿತಿಗಳನ್ನು ಒದಗಿಸಿದರೆ; ಇನ್ನೂ ಕೆಲವು ಕೃತಿಗಳು ನೇರವಾಗಿ ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳಿಗೇ ಸಂಬಂಧಿಸಿದ ಮಾಹಿತಿಯನ್ನು ನೀಡಿದವು. ಅವುಗಳು ನೀಡುವ ಸಾರಾಂಶವನ್ನು ಇಲ್ಲಿ ಹಂಚಿಕೊಳ್ಳಲಾಗಿದೆ.

## ➢ **ಕುಲಕಸುಬುಗಳು ಮತ್ತು ಆಧುನಿಕತೆ :**

ತಿಮ್ಮಾರೆಡ್ಡಿ ಎಸ್.ವೈ., ೨೦೧೨, **ಕುಲಕಸುಬುಗಳು ಮತ್ತು ಆಧುನಿಕತೆ,** (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿದ ಈ ಪಿಎಚ್.ಡಿ. ಮಹಾಪ್ರಬಂಧವು ಡಾ. ಹೆಬ್ಬಾಲೆ ಕೆ. ನಾಗೇಶ್‌ರವರ ಮಾರ್ಗದರ್ಶನದಲ್ಲಿ ಡಾ. ಎಸ್.ವೈ. ತಿಮ್ಮಾರೆಡ್ಡಿಯವರಿಂದ ಮಂಡಿಸಲ್ಪಟ್ಟಿದೆ. ಈ ಮಹಾಪ್ರಬಂಧದಲ್ಲಿ ಜನಪದರು ಮತ್ತು ಕುಲಕಸಬುಗಳ ಪರಿಕಲ್ಪನೆಯಿದೆ. ಕುಲಕಸಬುಗಳ ಪದ ನಿಷ್ಪತ್ತಿ, ಬೆಳೆದು ಬಂದ ದಾರಿಯನ್ನು ಶಿಲಾಯುಗ ದಿಂದ ವಿಜಯನಗರದ ಅರಸರ ಕಾಲದವರೆಗೆ ವಿವರಿಸಲಾಗಿದೆ. ಕುಲಕಸಬುಗಳ ವರ್ಗೀಕರಣದಲ್ಲಿ... ಕುಂಬಾರಿಕೆ, ಕಮ್ಮಾರಿಕೆ, ಪತ್ತಾರಿಕೆ, ಬಡಗಿ ವೃತ್ತಿ, ಶಿಲ್ಪಗಾರಿಕೆ, ನೇಕಾರಿಕೆ, ಮೇದಾರಿಕೆ, ಚಮ್ಮಾರಿಕೆ, ಗಾಣಗಾರಿಕೆ, ಕಲ್ಲುಕುಟಿಗ ವೃತ್ತಿ, ಸುಣ್ಣಗಾರಿಕೆ, ಬಳೆಗಾರಿಕೆ, ಮಡಿವಾಳವೃತ್ತಿ, ಕ್ಷೌರಿಕ ವೃತ್ತಿ, ಹೂಗಾರಿಕೆ, ವೈದ್ಯವೃತ್ತಿ, ತಳವಾರಿಕೆ ಕಸಬುಗಳು ಹುಟ್ಟು, ಬೆಳವಣಿಗೆ, ಉತ್ಪಾದನಾ ವಿಧಾನ, ಉತ್ಪಾದನೆಗೆ ಬೇಕಾಗುವ ಸಲಕರಣೆಗಳು, ಉತ್ಪಾದಿಸುವ ವಿವಿಧ ವಸ್ತುಗಳು ಹಾಗೂ ಮಾರುಕಟ್ಟೆಯ ಸ್ಥಿತಿ-ಗತಿಯ ಬಗ್ಗೆ ವಿವರಣೆಯಿದೆ. ಸಮಾಜೋ-ಆರ್ಥಿಕ ನೆಲೆಯಲ್ಲಿ ಕುಲಕಸಬುಗಳನ್ನು ಕುಟುಂಬ, ಶಿಕ್ಷಣಗಳಂತಹ ವಿವಿಧ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ನಂತರ ಕುಲಕಸಬುಗಳು ಮತ್ತು ಆಧುನಿಕತೆಯನ್ನು ವಿವರಿಸಲಾಗಿದೆ. ಕುಲಸಬುಗಳು-ಸಮಸ್ಯೆ, ಸವಾಲುಗಳು ಮತ್ತು ಪರಿಹಾರಗಳನ್ನು ತಿಳಿಸಲಾಗಿದೆ. ಒಟ್ಟಿನಲ್ಲಿ ಈ ಹೊತ್ತಗೆಯು ಕುಷ್ಟಗಿ ಪರಿಸರದಲ್ಲಿರುವ ಸಾಮಾನ್ಯ ಪಾರಂಪರಿಕ ಕಸಬುಗಳಿಗೆ ತುಂಬಾ ನಿಕಟವಾಗಿರುವಂತೆ ಭಾಸವಾಗುತ್ತವೆ.

## ➢ **ಹದಿನೆಂಟು ಜಾತಿಗಳು :**

ವಿಜಯಶ್ರೀ ಇಟ್ಟಣ್ಣವರ, ೨೦೧೧, **ಹದಿನೆಂಟು ಜಾತಿಗಳು,** ಪ್ರಸಾರಾಂಗ ಕನ್ನಡ ವಿವಿ, ಹಂಪಿ.

ವರ್ಣಗಳ ವ್ಯವಸ್ಥೆ, ಜಾತಿಯ ಹುಟ್ಟು ಬೆಳವಣಿಗೆಯ ಜೊತೆ ಜೊತೆಯೇ ಕುಲಕಸಬುಗಳು ಹೇಗೆ ಹುಟ್ಟಿದವು? ಇವುಗಳು ಹದಿನೆಂಟು ಜಾತಿಗಳಾಗಲು ಹೇಗೆ ಸಹಕಾರಿಯಾದವು ಎಂಬುದನ್ನು ವಿವರಿಸಲಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಅಂಬಿಗರ ಚೌಡಯ್ಯ ವಚನಗಳು, ಸೊಡ್ಡಳಬಾಚರಸರಂಥಹ ವಚನಕಾರರ ವಚನವನ್ನೂ,

ಭಾರತದ ಮೊಟ್ಟಮೊದಲ ನಿಘಂಟು *'ಅಮರಕೋಶ'* ಅಥವಾ *'ನಾಮಲಿಂಗಾನುಶಾಸನ'*ದಲ್ಲಿ ಅಮರಸಿಂಹನು ಜಾತಿಗಳನ್ನು ತಿಳಿಸಿದ ಕುಲವೃತ್ತಿಗಳನ್ನೂ ಇದರಲ್ಲಿ ವಿವರಿಸಲಾಗಿದೆ.

➢ **ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ :**

ವೀರೇಶ ಬಡಿಗೇರ, ೨೦೧೦, **ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ**, ಪ್ರಸಾರಾಂಗ ಕನ್ನಡ ವಿವಿ, ಹಂಪಿ.

ಪ್ರಾಚೀನ ಕೃಷಿ ಸಮಾಜದ ಬಹುಮುಖ್ಯ ಆರ್ಥಿಕ ಹಾಗೂ ಸಾಮಾಜಿಕ ಪದ್ಧತಿಯಲ್ಲಿ ಅನೇಕ ಕುಲಕಸಬುಗಳು ಆಯಗಾರಿಕೆಗೆ ಒಳಗಾಗಿದ್ದವು. ಇದೊಂದು ಅಂತರ್ ಕುಟುಂಬ ಸಂಬಂಧಗಳ ತಾಳಿಕೆ ಹಾಗೂ ಬಾಳಿಕೆಯ ವ್ಯವಸ್ಥೆಯಾಗಿತ್ತು. ಅದೊಂದು ಸಮೂಹ ಹೊಣೆಗಾರಿಕೆಯ ಸಂಗತಿಯಾಗಿತ್ತು ಎಂದು ತಿಳಿಸುವ ಈ ಹೊತ್ತಗೆಯು ಆಯಗಾರಿಕೆಯ ಅರ್ಥ ಹಾಗೂ ಸ್ವರೂಪ, ವಿವಿಧ ಸಾಸನಗಲ್ಲಿ ಆಯಗಾರರ ಪ್ರಸ್ತಾಪ ಮಾಡುತ್ತಾ ಪಾಂಚಾಳರು ಮತ್ತು ಆಯಗಾರಿಕೆ ಇತರ ಉಲ್ಲೇಖಗಳನ್ನೂ ಒಳಗೊಂಡಿದೆ. ಜನಪದರ ಅಭಿಲಾಷೆಗಳು ಹಿಂದಿನ ಸಂಸ್ಕೃತಿಗೆ ಅನುಗುಣವಾಗಿದ್ದಾಗ ಪಾರಂಪರಿಕ ಕಸುಬುದಾರರ ಸಾಮಾಜಿಕ ಜೀವನಮಟ್ಟ ಉತ್ತಮವಾಗಿಯೇ ಇತ್ತು. ಸಾಮಾಜಿಕ ಜೀವನದಲ್ಲಿ ಕಸುಬುದಾರರಿಗೆ 'ಉತ್ತಮ'ವಾದ ಹಾಗೂ ಅವರಿಗೆಂದೇ 'ಮೀಸಲಾದ ಸ್ಥಾನ'ವಿತ್ತು. ಆ ಸ್ಥಾನವು ಪವಿತ್ರ ಮನೋಭಾವನೆಯನ್ನೂ ಹೊಂದಿದ್ದನ್ನು ಜನಪದರ ಚಾರಿತ್ರಿಕ ಅಧ್ಯಯನದಿಂದ ತಿಳಿದುಕೊಳ್ಳಬಹುದಾಗಿದೆ. ಆಯಗಾರಿಕೆ, ವಸ್ತುವಿನಿಮಯ ಪದ್ಧತಿಯ ಸಂದರ್ಭದಲ್ಲಿ ಅವರ ಆರ್ಥಿಕಸ್ಥಿತಿ ಕೂಡಾ ಉತ್ತಮವಾಗಿತ್ತು.

ಈ ಆಯಗಾರರ ಮೇಲೆ ರೈತರಿಗೂ ವಿಶೇಷ ಕಾಳಜಿ, ಇವರಿಗೆ ದಾನ ನೀಡಿದಷ್ಟೂ ಭೂತಾಯಿ ಹುಲುಸು ನೀಡುತ್ತಾಳೆಂದು ರೈತರು ನಂಬಿದ್ದು, ಆಯಗಾರರು "ಊರ ಹೆಣ್ಣುಮಕ್ಕಳೆಂದು" ಹೇಳಿಕೊಳ್ಳುವಲ್ಲಿ ನಿಜವಾಗಿಯೂ ಬಹುದೊಡ್ಡ ಅರ್ಥವಿದೆ. ಹೀಗೆ ಹಂಚಿ ತಿನ್ನುವ ಮಾನವೀಯ ಮೌಲ್ಯಗಳು ಜಾನಪದೀಯ ಪಂಥದಲ್ಲಿವೆ ಎಂಬುದನ್ನು ವಿವರಿಸುವ ಉತ್ತಮ ಕೃತಿಯಾಗಿದೆ.

➢ **ಇಳಕಲ್ಲ ಸೀರೆ :**

ಮಹೇಶ ತಿಪ್ಪಶೆಟ್ಟಿ, ೨೦೦೦, **ಇಳಕಲ್ಲ ಸೀರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ,

ನೇಕಾರಿಕೆಯ ಇತಿಹಾಸವನ್ನು ಅಲೆಮಾರಿ ಮಾನವನಿಂದ ಪ್ರಾರಂಭಿಸಿ ಆಧುನಿಕ ಮಾನವನ ಉಡುಪುಗಳ ತನಕ ಬಿಚ್ಚಿಟ್ಟಿದ್ದಾರೆ. ಮರದ ತೊಗಟೆ, ಎಲೆ, ಪ್ರಾಣಿಗಳ ಚರ್ಮದಿಂದ ದೇಹ ರಕ್ಷಣೆ ಗಾಗಿ ಬಳಸಿ ಕ್ರಮೇಣ ಸೌಂದರ್ಯದ ಕಲ್ಪನೆ ಲೇಪಿಸಿರಬಹುದೆಂದು ಉಲ್ಲೇಖಗೊಂಡಿದೆ. ನೇಕಾರರ ಮೂಲ ದೇವರು ದೇವಲ ಮಹರ್ಷಿ ಎಂಬುದನ್ನೂ, ೧೧ನೇ ಶತಮಾನದ ಜೇಡರದಾಸೀಮಯ್ಯನೊಂದಿಗೆ ಇವರು ಗುರುತಿಸಿಕೊಳ್ಳುವುದನ್ನೂ ಉಲ್ಲೇಖಿಸಿದ್ದಾರೆ. ನೇಕಾರ ; ಒಂದು ಟಿಪ್ಪಣಿಯಲ್ಲಿ ದೇವಾಂಗನ ಏಳು ಅವತಾರಗಳು, ಚೌಡೇಶ್ವರಿ ವರಪ್ರಸಾದ, ವಸ್ತ್ರ ನಿರ್ಮಾಣ, ವಸ್ತ್ರಪ್ರಧಾನಗಳಂತಹ ಪೌರಾಣಿಕ ಕಥೆಯನ್ನು ಉಲ್ಲೇಖಿಸಲಾಗಿದೆ. ಮೂಲಪುರುಷ ದೇವಾಂಗನನ್ನು ಕುರಿತು ಒಂದು ಪೌರಾಣಿಕ ಕಥೆಯನ್ನೂ ಹೇಳಲಾಗಿದೆ. ಇಳಕಲ್ಲ ಅಂದು- ಇಂದು ಚಿತ್ರಣವನ್ನೂ, ಸೀರೆಯ ಅರ್ಥಶಾಸ್ತ್ರವನ್ನೂ, ಇಳಕಲ್ಲ ಸೀರೆ ಭವಿಷ್ಯವನ್ನೂ ನುಡಿಯುವುದಲ್ಲದೇ ಕೈಮಗ್ಗದ ಸಲಕರಣೆಗಳನ್ನೂ ವಿವರಿಸಲಾಗಿದೆ.

➢ **ಕನ್ನಡ ವಿವಿ ವಿಶ್ವಕೋಶ-೨ ಕರಕುಶಲ ಕಲೆಗಳು :**

ಕರೀಗೌಡ ಬೀಚನಹಳ್ಳಿ(ಸಂ), ೨೦೦೦, **ಕರಕುಶಲ ಕಲೆಗಳು -೨**, ಪ್ರಸಾರಾಂಗ ಕನ್ನಡ ವಿವಿ, ಹಂಪಿ.

ಕರಕುಶಲಕಲೆಗಳ ಪರಂಪರೆ ಮತ್ತು ಇತಿಹಾಸ, ಉಗಮ ಮತ್ತು ವಿಕಾಸ, ಜಾಗತಿಕ ಪರಂಪರೆ ಮತ್ತು ಇತಿಹಾಸ, ಭಾರತ ಮತ್ತು ಕರ್ನಾಟಕದಲ್ಲಿ ಕರಕುಶಲಕಲೆಗಳು, ಸ್ವರೂಪ ಮತ್ತು ಅಗತ್ಯ, ವರ್ಗೀಕರಣದ ವಿವರಣೆಯಿದೆ. ಅಲಂಕರಣ ಸಂಬಂಧಿ ಕರಕುಶಲಕಲೆಗಳನ್ನು ವಿವರಿಸಲಾಗಿದೆ. ಆರಾಧನಾ ಸಂಬಂಧಿ ಕರಕುಶಲ ಕಲೆಗಳ ಪರಿಕಲ್ಪನೆಯಿದೆ. ಗೃಹೋಪಯೋಗಿ ಸಂಬಂಧಿ ಕರಕುಶಲ ಕಲೆಗನ್ನು ವಿವಿಧ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಮನರಂಜನಾ ಸಂಬಂಧಿ ಕರಕುಶಲ ಕಲೆಗಳನ್ನು ವಿವರಿಸಲಾಗಿದೆ. ವ್ಯವಸಾಯ ಸಂಬಂಧಿ ಸಂಬಂಧಿ ಕರಕುಶಲ ಕಲೆಗಳ ಸಮಸ್ಯೆ, ಸವಾಲುಗಳನ್ನು ತಿಳಿಸಲಾಗಿದೆ. ಕರಕುಶಲ ಕಲೆಗಳ ವಿಷಯ ಸೂಚಿ, ಪರಾಮರ್ಶನ ಗ್ರಂಥಗಳು, ಲೇಖಕರ ವಿಳಾಸಗಳನ್ನು ಪ್ರಕಟಿಸಲಾಗಿದೆ. ಜೊತಗೆ ನೇಕಾರಿಕೆ - ಇಳಕಲ್ಲ

ಸೀರೆ, ಕುಪ್ಪಸ, ರುಮಾಲು, ಕೌದಿ ಕಲೆ, ಕಿನ್ನಾಳ ಕಲೆಗಳು ಹಾಗೂ ಕಮ್ಮಾರ, ಕುಂಬಾರ, ಅಕ್ಕಸಾಲಿಗ, ಬಡಿಗ, ಚಮ್ಮಾರ ಮುಂತಾದ ಅಂಶಗಳ ಮೇಲೆ ಬೆಳಕು ಚೆಲ್ಲುವ ಮೂಲಕ ನನ್ನ ವಿಷಯಕ್ಕೆ ಸಂಬಂಧಿಸಿದಂತೆ ಅನೇಕಾನೇಕ ಮಾಹಿತಿಗಳ ಮಹಾಪೂರವನ್ನೇ ಹರಿಸಿತು.

➢ **ಕಮಲಾಪುರದ ಕೊರವರ ಸಮುದಾಯ : ಪರಿಶೋಧನೆ :**

ನೇತ್ರಾವತಿ ಕೆ.ವಿ., ೨೦೦೩, **ಕಮಲಾಪುರದ ಕೊರವರ ಸಮುದಾಯ : ಪರಿಶೋಧನೆ** (ಅಂಶಿಕ ಸಂಪ್ರಬಂಧ), ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಮಂಜುನಾಥ ಬೇವಿನಕಟ್ಟಿಯವರ ಮಾರ್ಗದರ್ಶನದಲ್ಲಿ ಸಂಶೋಧಕಿ ನೇತ್ರಾವತಿ ಕೆ.ವಿ.ಯವರು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಎ., ಪಿಎಚ್.ಡಿ. ಪದವಿಯ ಅಂಶಿಕ ಅವಶ್ಯಕತೆಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ ಕಮಲಾಪುರದ ಕೊರವರ ಸಮುದಾಯ : ಪರಿಶೋಧನೆ : ಈ ಕೃತಿಯಲ್ಲಿ... ಕೊರವರ ಸಾಮಾಜಿಕ ಜೀವನ, ಆರ್ಥಿಕ ಜೀವನ, ಆಚರಣೆಗಳನ್ನು ತಿಳಿಸಲಾಗಿದೆ. ಕೊರವರ ಭಾಷೆ ಮತ್ತು ಸಾಹಿತ್ಯ, ಈ ಜನಾಂಗದ ಸ್ಥಿತ್ಯಾಂತರಗಳನ್ನು ವಿವರಿಸಲಾಗಿದೆ.

➢ **ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಂಪರೆ :**

ಚಂದ್ರಶೇಖರಯ್ಯ ಬಿ.ಎಮ್., ೨೦೦೫, **ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಂಪರೆ**, ಸಿವಿಜಿ ಪ್ರಕಾಶನ ಬೆಂಗಳೂರು.

ಈ ಕೃತಿಯ ೫೭೦ನೇ ಪುಟದಿಂದ ೭೯ರವರೆಗೆ ಅನೇಕ ಕರಕುಶಲ ಕಲೆಗಳನ್ನು ಉಲ್ಲೇಖಿಸಲಾಗಿದೆ. ಕುಂಭಕಲೆ ಮತ್ತು ಗಾಜಿನ ಸಾಮಾನುಗಳು, ಮಣ್ಣಿನಗೊಂಬೆಗಳು ಮತ್ತು ಜಾನಪದ ಆಟಿಕೆಗಳು, ಲೋಹಶಿಲ್ಪ, ಬಂಗಾರ ಮತ್ತು ಬೆಳ್ಳಿಯ ಆಭರಣಗಳು, ಬಿದರಿ ವಸ್ತುಗಳು, ಕೈಮಗ್ಗದ ಜವಳಿ, ರೇಶ್ಮೆ ಬಟ್ಟೆಗಳು ಮತ್ತು ಸೀರೆಗಳು, ಕಸೂತಿ ಕಲೆ, ಜಮಖಾನೆ ಮತ್ತು ಕಂಬಳಿಗಳು, ಬಿಜಾಪುರ ಮತ್ತು ಧಾರವಾಡ ಜಿಲ್ಲೆಗಳ ಸುತಡ, ಕಲ್ಲು ಕೆತ್ತನೆ, ಮರದ ಕೆತ್ತನೆ ಮತ್ತು ಶಿಲ್ಪಗಳು, ಬಣ್ಣದ ಆಟಿಕೆಗಳು, ದಂತದ ಕೆತ್ತನೆ ಮತ್ತು ಹುದುಗು ಕಲೆ, ಬುಟ್ಟಿ ಚಾಪೆಗಳ ಹೆಣಿಗೆ, ಚರ್ಮದ ವಸ್ತುಗಳು, ರಂಗಪರಿಕರಗಳು,

ತೊಗಲುಗೊಂಬೆಯಾಟದ ಗೊಂಬೆಗಳನ್ನು ತಯಾರಿಸುವ ಬಗ್ಗೆ ಈ ಕೃತಿಯಲ್ಲಿ ಸರಳ ಮತ್ತು ಸುಂದರವಾಗಿ ಲಿಖಿತಗೊಂಡಿವೆ.

ಇದೇ ಕೃತಿಯಲ್ಲಿ ಕುಷ್ಟಗಿ ಪರಿಸರದ ವಿಶಿಷ್ಟ ಪಾರಂಪರಿಕ ಕಸಬುಗಳಿಗೆ ನೇರವಾಗಿ ಸಂಬಂಧಿಸಿದ ಮನಮೋಹಕ ಕಿನ್ನಾಳದ ಗೊಂಬೆಗಳು ಎಂಬ ಮಹತ್ತರವಾದ ವಿಷಯವು ಪುಟ೧೭೫ ರಿಂದ ೧೮೪ರವರೆಗೆ ಸಿಕ್ಕುತ್ತದೆ. ಹೀಗಾಗಿ ಈ ಕೃತಿಯು ನನ್ನ ಅಧ್ಯಯನಕ್ಕೆ ಒಂದಷ್ಟು ಮಾಹಿತಿಯನ್ನು ಒದಗಿಸಿ ಉಪಕರಿಸಿದೆ.

➢ **ಗುಳೇದಗುಡ್ಡದ ಖಣಗಳು :**

ಮಲ್ಲಿಕಾರ್ಜುನ ಬನ್ನಿ, ೨೦೧೦, **ಗುಳೇದಗುಡ್ಡದ ಖಣಗಳು**, ಪ್ರಸಾರಾಂಗ, ಕನ್ನಡ ವಿವಿ ಹಂಪಿ,

ಕುಷ್ಟಗಿ ಪರಿಸರದ ವಿಶಿಷ್ಟ ಪಾರಂಪರಿಕ ಕಸಬುಗಳಲ್ಲಿ ಒಂದಾಗಿರುವ ಗುಳೇದಗುಡ್ಡದ ಖಣಗಳು ಎಂಬ ವಿಷಯಕ್ಕೆ ನೇರವಾಗಿ ಸಂಬಂಧಿಸಿದ ಮಹತ್ತರವಾದ ವಿಷಯವು ಸಿಕ್ಕುತ್ತದೆ. "ಉಟ್ಟರೆ ಇಳಕಲ್ಲ ಸೀರೆ ಉಡಬೇಕು, ತೊಟ್ಟರೆ ಗುಳೇದಗುಡ್ಡದ ಖಣ ತೊಡಬೇಕು" ಎಂಬ ಗಾದೆಯು ನಿಜನಿಕಟವೆಂಬಂತೆ ವಿವರಿಸುತ್ತದೆ.

ಇದರಲ್ಲಿ ಕಾಯಕಕ್ಕೆ ಬೇಕಾಗುವ ಪರಿಕರಗಳು ಹಾಗೂ ಅವುಗಳ ಕಾರ್ಯವಿಧಾನವನ್ನು ವಿವರಿಸಲಾಗಿದೆ. ಈ ಒಂದು ಕಸಬು ಇನ್ನೂ ಹತ್ತಾರು ಉಪಕಸಬುಗಳನ್ನು ಒದಗಿಸುತ್ತದೆಯಾದ್ದರಿಂದ "ಲಾಳಿ-ಮೇಳಿ ಸಮ" ಎಂದು ಸಾರುತ್ತಾ ಬಂದಿರುವುದನ್ನು ತಿಳಿಸುತ್ತದೆ.

ನೇಕಾರರಲ್ಲಿ ಪ್ರಮುಖವಾಗಿ ೪ ವಿಧಗಳನ್ನು ಕಾಣಬಹುದಾಗಿದೆ- ೧)ಕೂಲಿ ನೆಯ್ಯುವ ನೇಕಾರ ೨)ಮುಂಗಡ ನೇಕಾರ ೩)ರೋಖಡಿ ಉತ್ಪಾದನಾ ನೇಕಾರ, ೪)ಅರೆ ಸರಕಾರಿ ತೀವ್ರ ಅಭಿವೃದ್ಧಿ ಯೋಜನೆ ಅಡ ಹಾಗೂ ಸಹಕಾರ ಸಂಘಗಳಲ್ಲಿ ದುಡಿಯುವ ನೇಕಾರರು. *"The Master weavers are exploiting the ignorance of the por weaves"* ಎಂಬುದನ್ನು ಮನವರಿಕೆ ಮಾಡಿಕೊಡುತ್ತದೆ. ಅಲ್ಲದೇ ಗುಳೇದಗುಡ್ಡದ ಖಣಗಳ ಪ್ರಸಿದ್ಧಿಗೆ ಕಾರಣಗಳನ್ನೂ ಈ ಕೃತಿ ಒಳಗೊಂಡಿದೆ. ಒಟ್ಟಾರೆ ಜಾನಪದೀಯ ಖಣಗಳ ನೇಕಾರರ ಜೀವನದ ಈ ಕೃತಿಯಿಂದ ತುಂಬಾ ಸದುಪಯೋಗವಾಗಿದೆ.

➢ **ಜಾನಪದ ಸ್ಪಂದನ** :

ನಾವಲಗೆ. ಸಿ.ಕೆ. ೧೯೮೯, **ಜಾನಪದ ಸ್ಪಂದನ**, ಭರತ ಪ್ರಕಾಶನ, ಗೋಕಾಕ.

ಈ ಕೃತಿಯ ೬೧ನೇ ಪುಟದಿಂದ ೧೧೬ರವರೆಗೆ ಅನೇಕ ಕಸಬುಗಳನ್ನು "ಹಳ್ಳಿಗಾಡಿನ ಕಸಬುಗಳು" ವಿಭಾಗದಲ್ಲಿ ಉಲ್ಲೇಖಿಸಲಾಗಿದೆ. ಒಕ್ಕಲುತನ, ಅಗಸರು, ಪತ್ತಾರಿಕೆ, ಗೌಡಿಕೆ, ಕುಲಕರ್ಣಿಕೆ, ತಳವಾರಿಕೆ, ವಾಲಿಕಾರಿಕೆ, ಕೋಲಗಾರಿಕೆ, ನೇಕಾರಿಕೆ, ಪೌರೋಹಿತ್ಯ, ಜ್ಯೋತಿಷ್ಯ, ಪೂಜಾರಿಕೆ, ಪಿಂಜಾರಿಕೆ, ಉಪ್ಪಾರಿಕೆ, ಕುರುಬಗಾರಿಕೆ, ಗಾಣಿಗಾರಿಕೆ, ಸಿಂಪಿಗಾರಿಕೆ, ಸುಣ್ಣಗಾರಿಕೆ, ಕುಂಬಾರಿಕೆ, ಕಮ್ಮಾರಿಕೆ, ಪತ್ತಾರಿಕೆ, ಬಡಗಿ ವೃತ್ತಿ, ಶಿಲ್ಪಗಾರಿಕೆ, ನೇಕಾರಿಕೆ, ಮೇದಾರಿಕೆ, ಚಮ್ಮಾರಿಕೆ, ಗಾಣಗಾರಿಕೆ, ಕಲ್ಲುಕುಟಿಗ ವೃತ್ತಿ, ಸುಣ್ಣಗಾರಿಕೆ, ಬಳೆಗಾರಿಕೆ, ಮಡಿವಾಳವೃತ್ತಿ, ಕ್ಷೌರಿಕ ವೃತ್ತಿ, ಹೂಗಾರಿಕೆ, ವೈದ್ಯವೃತ್ತಿ, ತಳವಾರಿಕೆ, ಮೇದಾರಿಕೆ, ಗೌಳಿಗಾರಿಕೆ, ದನಕಾಯುವಿಕೆ ಇತ್ಯಾದಿ ಹಳ್ಳಿಗಾಡಿನ ಕಸಬುಗಳನ್ನು ಸವಿವರವಾಗಿ ವಿವರಿಸಿದ್ದಾರೆ.

➢ **ಜಾನಪದ ವೈಭವ** :

ಸಂಗಣ್ಣ ಸಣ್ಣಕ್ಕಿ, ೧೯೯೮, **ಜಾನಪದ ವೈಭವ**, ಪೂರ್ಣಿಮಾ ಪ್ರಕಾಶನ, ಗೋಕಾಕ.

ಈ ಕೃತಿಯಲ್ಲಿ ಅನೇಕ ಕಸಬುಗಳನ್ನು 'ಕರ್ನಾಟಕದ ವೃತ್ತಿ ಜಾನಪದರು' ವಿಭಾಗದಲ್ಲಿ ಉಲ್ಲೇಖಿಸಲಾಗಿದೆ. ೧) ಬೇಟೆ ಜಾನಪದ ೨)ಕೃಷಿ ಜಾನಪದ ೩) ಕರಕುಶಲ (ಪಾಂಚಾಲ)ಜಾನಪದಗಳಾಗಿ ವಿಂಗಡಿಸಿದ್ದಾರೆ. ಇವರನ್ನು ಆಯಗಾರರೆಂದೂ ಕರೆದಿರುವ ಲೇಖಕರು ಆಯ-ಆಯಗಾರರು ಎಂಬ ವಿಭಾಗದಲ್ಲಿ ಒಕ್ಕಲುತನ, ಅಗಸರು, ಪತ್ತಾರಿಕೆ, ಗೌಡಿಕೆ, ಕುಲಕರ್ಣಿಕೆ, ತಳವಾರಿಕೆ, ವಾಲಿಕಾರಿಕೆ, ಕೋಲಗಾರಿಕೆ, ನೇಕಾರಿಕೆ, ಪೌರೋಹಿತ್ಯ, ಜ್ಯೋತಿಷ್ಯ, ಪೂಜಾರಿಕೆ, ಪಿಂಜಾರಿಕೆ, ಉಪ್ಪಾರಿಕೆ, ಕುರುಬಗಾರಿಕೆ, ಗಾಣಿಗಾರಿಕೆ, ಸಿಂಪಿಗಾರಿಕೆ, ಸುಣ್ಣಗಾರಿಕೆ, ಕುಂಬಾರಿಕೆ, ಕಮ್ಮಾರಿಕೆ, ಪತ್ತಾರಿಕೆ, ಬಡಗಿ ವೃತ್ತಿ, ಶಿಲ್ಪಗಾರಿಕೆ, ನೇಕಾರಿಕೆ, ಮೇದಾರಿಕೆ, ಚಮ್ಮಾರಿಕೆ, ಗಾಣಗಾರಿಕೆ, ಕಲ್ಲುಕುಟಿಗ ವೃತ್ತಿ, ಸುಣ್ಣಗಾರಿಕೆ, ಬಳೆಗಾರಿಕೆ, ಮಡಿವಾಳವೃತ್ತಿ, ಕ್ಷೌರಿಕ ವೃತ್ತಿ, ಹೂಗಾರಿಕೆ, ವೈದ್ಯವೃತ್ತಿ, ತಳವಾರಿಕೆ, ಮೇದಾರಿಕೆ, ಗೌಳಿಗಾರಿಕೆ, ದನಕಾಯುವಿಕೆ ಇತ್ಯಾದಿ ಕರ್ನಾಟಕದ ವೃತ್ತಿ ಜಾನಪದರನ್ನು, ಹಳ್ಳಿಗಾಡಿನ ಕಸಬುಗಳನ್ನು ಸವಿವರವಾಗಿ ವಿವರಿಸಿದ್ದಾರೆ.

➢ **ಇಳಕಲ್ಲ ಸೀರೆ : ಬಣ್ಣ ಹಾಗೂ ವಿನ್ಯಾಸ–ಒಂದು ಅಧ್ಯಯನ :**

ಕಂದಗಲ್ಲ. ಪಿ.ಎಸ್., ೨೦೦೫, **ಇಳಕಲ್ಲ ಸೀರೆ : ಬಣ್ಣ ಹಾಗೂ ವಿನ್ಯಾಸ–ಒಂದು ಅಧ್ಯಯನ,** (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಡಾ. ಕರಿದುರಗನವರ ಮಾರ್ಗದರ್ಶನದಲ್ಲಿ ಇಳಕಲ್ಲ ಸೀರೆ : ಬಣ್ಣ ಹಾಗೂ ವಿನ್ಯಾಸ–ಒಂದು ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯಕ್ಕೆ ಸಲ್ಲಿಸಿದ್ದಾರೆ. ಈ ಕೃತಿಯು ಇಳಕಲ್ಲ ಸೀರೆಯ ಬಣ್ಣವನ್ನು ವೈಜ್ಞಾನಿಕವಾಗಿಯೂ ವಿಶ್ಲೇಷಿಸುತ್ತದೆ. ನೇಕಾರಿಕೆಯ ವಿವಿಧ ಮಜಲುಗಳನ್ನು ಮನವರಿಕೆ ಮಾಡಿಕೊಡುವ ಮೂಲಕ ಪ್ರಸ್ತುತ ವಿಷಯಕ್ಕೆ ನೇವಾಗಿ ಸಂಬಂಧಿಸಿದ ಅನೇಕ ಮಾಹಿತಿಗಳನ್ನು ಒದಗಿಸಿದೆ.

➢ **ಕಿನ್ನಾಳ ಕಲೆ :**

ಪಾಟೀಲ್ ಎಚ್.ಎಸ್., ೨೦೧೧, **ಕಿನ್ನಾಳ ಕಲೆ,** ಹೈದ್ರಾಬಾದ ಕರ್ನಾಟಕ ಅಭಿವೃದ್ಧಿ ವಿಭಾಗ, ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ, ಸೇಡಮ್.

ಈ ಕೃತಿಯು ನೇರವಾಗಿ ಕಿನ್ನಾಳ ಕಲೆಯ ಮೂಲ, ಬೆಳೆದು ಬಂದ ಹಾದಿ, ಕಲೆಯಿಂದ ತಯಾರಾಗುವ ಗೊಂಬೆಗಳು, ಮೂರ್ತಿಗಳು, ಕಿನ್ನಾಳ ಕಲಾಕಾರರ ಸಂಕಟಗಳು, ಇದನ್ನು ಉಳಿಸಿ ಬೆಳೆಸಿಕೊಂಡು ಹೋಗುವ ಪರಿಹಾರೋಪಾಯಗಳನ್ನು ತಿಳಿಸುವ ಮೂಲಕ ನೇರವಾಗಿ ನನ್ನ ಅಧ್ಯಯನದ ವಿಷಯಕ್ಕೆ ಅನೇಕ ಮಾಹಿತಿಗಳನ್ನು ಒದಗಿಸುತ್ತದೆ.

ಈ ಪುಸ್ತಕಗಳೇ ಅಲ್ಲದೇ ಅನೇಕ ಪತ್ರಿಕೆಗಳಲ್ಲಿ ಪ್ರಕಟಗೊಂಡ ಲೇಖನಗಳು, ದೂರದರ್ಶನದಲ್ಲಿ ಪ್ರಸಾರಗೊಂಡ ಕಾರ್ಯಕ್ರಮಗಳು, ಅಂತರ್ಜಾಲ ಮಾಹಿತಿಗಳನ್ನೂ ಬಳಸಿಕೊಳ್ಳಲಾಗಿದೆ.

*

**ಅಡಿ ಟಿಪ್ಪಣಿಗಳು :-**

೧ ಬಸಪ್ಪ ಬಂಗಾರಿ, ೨೦೧೪, **ಪಾರಂಪರಿಕ ಸಂವಹನ ಮತ್ತು ಸರ್ಕಾರ**, ಬಂಗಾರಿ ಪಬ್ಲಿಕೇಶನ್ಸ್, ಗೊಟಗೋಡಿ. ಪುಟ-೨೩

೨ ವೀರೇಶ ಬಡಿಗೇರ, ೨೦೦೭, **ಜಾನಪದ ಕರ್ನಾಟಕ**, ಹೆಬ್ಬಾಲೆ ಕೆ. ನಾಗೇಶ್(ಸಂ), ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ-೧೦೫ & ೧೦೬

೩ ಶಿರೂರ.ಬಿ.ವಿ. ೨೦೧೨, **ಸಂಶೋಧನ ಸ್ವರೂಪ**, ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ. ಪುಟ-೮

೪. ಅದೇ. ಪುಟ-೧೨೬

*

## ಅಧ್ಯಾಯ ಎರಡು

# ಕುಷ್ಟಗಿಯ ಭೌಗೋಳಿಕ & ಐತಿಹಾಸಿಕ ಅವಲೋಕನ

೨.೧ ಸಾಹಿತ್ಯ, ಶಾಸನ ಹಾಗೂ ಐತಿಹ್ಯಗಳಲ್ಲಿ ಕುಷ್ಟಗಿ

೨.೨ ಪ್ರಸ್ತುತ ಅಂಕಿ-ಅಂಶಗಳು

೨.೩ ಭೌಗೋಳಿಕ ಅವಲೋಕನ

೨.೪ ಐತಿಹಾಸಿಕ ಅವಲೋಕನ

## ಅಧ್ಯಾಯ ಎರಡು

# ಕುಷ್ಟಗಿಯ ಭೌಗೋಳಿಕ & ಐತಿಹಾಸಿಕ ಹಿನ್ನೆಲೆ

ಕವಿರಾಜಮಾರ್ಗದಲ್ಲಿ 'ತಿರುಳ್ಗನ್ನಡ ನಾಡು' ಎಂದು ವರ್ಣಿಸಿದಂತೆ ಕೊಪ್ಪಳ ನಾಡಿನ ಭೌಗೋಳಿಕ ದರ್ಶನದೊಂದಿಗೆ ಕುಷ್ಟಗಿ ಪರಿಸರದ ದರ್ಶನವೂ ನಮಗಾಗುತ್ತದೆ.

ಬ್ರಿಟೀಷರ ಕಾಲದಲ್ಲಿಯೂ ಕುಷ್ಟಗಿಯು ಕೊಪ್ಪಳ ಜಹಗೀರು ಜಿಲ್ಲೆಯಲ್ಲಿಯೇ ಇತ್ತು! ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ನಂತರದಿಂದಲೂ ತಾಲ್ಲೂಕು ಕೇಂದ್ರವಾಗಿರುವ ಕುಷ್ಟಗಿ ಅವಿಭಜಿತ ರಾಯಚೂರು ಜಿಲ್ಲೆಯಲ್ಲಿತ್ತು. ೧೯೯೭ರ ಅಗಸ್ಟ್ ೨೪ರಂದು ಈಗಿನ ಕೊಪ್ಪಳ ಜಿಲ್ಲೆಯ ತಾಲ್ಲೂಕು ಎಂದು ಘೋಷಿಸಲ್ಪಟ್ಟು, ೧೯೯೮ರ ಅಗಸ್ಟ್ ೧ರಂದು ಅಧಿಕೃತವಾಗಿ ಕೊಪ್ಪಳ ಜಿಲ್ಲೆಗೆ ಸೇರಿತು. ತಾಲ್ಲೂಕಿನ ಕೇಂದ್ರವೂ ಆಗಿರುವ ಕುಷ್ಟಗಿ ಪಟ್ಟಣವು ಜಿಲ್ಲಾ ಕೇಂದ್ರದಿಂದ ೫೦ಕಿ.ಮೀ. ದೂರದಲ್ಲಿದೆ.

ಐತಿಹಾಸಿಕ ವಿವರಗಳು ಅಷ್ಟಾಗಿ ಸಿಕ್ಕಿಲ್ಲವಾದರೂ ಬಾದಾಮಿ, ಐಹೊಳೆ, ಪಟ್ಟದಕಲ್ಲು, ಮಹಾಕೂಟ, ಇಟಗಿ, ಪುರ, ಕನಕಗಿರಿ, ಆನೆಗೊಂದಿ, ಮುದಗಲ್ಲು ಐತಿಹಾಸಿಕ ಪ್ರೇಕ್ಷಣೀಯ ಸ್ಥಳಗಳಾಗಿವೆ. ಬನಶಂಕರಿ, ಇಟಗಿ ಭೀಮಾಂಬಿಕೆ, ಸಜ್ಜಲಗುಡ್ಡದ ಶರಣಮ್ಮ, ಪಂಚಪಕ್ಷಿ ಮಾರುತಿ, ಕನಕಗಿರಿಯ ಶ್ರೀ ಕನಕಾಚಲ, ಕುಷ್ಟಗಿಯ ಅಡವಿರಾಯ, ಹುಲಗಿಯ ಹುಲಿಗೆಮ್ಮದೇವಿ, ದೋಟಿಹಾಳ ಶುಕಮುನಿ ತಾತ, ಇಟಗಿಯ ಭೀಮಾಂಬಿಕಾ, 'ಕೋಟಿಲಿಂಗುಗಳ ಭೂಕೈಲಾಸ'ವೆಂದು ಪ್ರಸಿದ್ಧಿ ಪಡೆದಿರುವ ಪುರ ಸೋಮನಾಥೇಶ್ವರ ದೇವಾಲಯ, ಹನಮಸಾಗರದ 'ಅಭಿನವ ತಿರುಪತಿ' ವೆಂಕಟೇಶ್ವರ ದೇಗುಲ, ಚಂದ್ರಗಿರಿಯ ಚಂದಾಲಿಂಗೇಶ್ವರ, ಜಗಜ್ಯೋತಿ ಬಸವಣ್ಣನವರ ಕೂಡಲಸಂಗಮ, ಕೊಪ್ಪಳದ ಶ್ರೀ ಗವಿಸಿದ್ಧೇಶ್ವರ, ನಿಡಶೇಸಿಯ ಶ್ರೀ ಚನ್ನಬಸವೇಶ್ವರ, ಇಂದರಗಿಯ ಇಂದಿರೇಶ, ಕಾಲಕಾಲೇಶ್ವರ ಮುಂತಾದವು ಕುಷ್ಟಗಿ ಪರಿಸರದಲ್ಲಿರುವ ಧಾರ್ಮಿಕ ಕ್ಷೇತ್ರಗಳಾಗಿವೆ. ಅಲ್ಲದೇ ರಾಜಕೀಯ, ಶೈಕ್ಷಣಿಕ, ಜಾನಪದ ಸಾಂಸ್ಕೃತಿಕ ಪರಂಪರೆಯನ್ನೂ ಪಡೆದಿದೆ.

### ೨.೧ ಸಾಹಿತ್ಯ, ಶಾಸನ ಹಾಗೂ ಐತಿಹ್ಯಗಳಲ್ಲಿ ಕುಷ್ಟಗಿ :

'ಕುಷ್ಟಗಿ' ಎಂಬ ಹೆಸರಿನ ಮೂಲವನ್ನು ಸಂಶೋಧಿಸುವಲ್ಲಿ ಬಹುಶಃ ಯಾರೂ ಆಸಕ್ತಿ ತೋರಿಲ್ಲವೆಂದೇ ಹೇಳಬಹುದು. ಕುಷ್ಟಗಿ ಪದ ನಿಷ್ಪತ್ತಿ ಬಗ್ಗೆ ಯಾವುದೇ ಅಧಿಕೃತ

ದಾಖಲೆಗಳು ಇಲ್ಲ. ಕುಷ್ಟಗಿ ಸ್ಥಳನಾಮ ವಿವೇಚನೆಯನ್ನು ಗಮನಿಸಿದಾಗ "ಇತಿಹಾಸ ಸಂಶೋಧಕರಾದ ನಾ. ಶ್ರೀ ರಾಜಪುರೋಹಿತರ ಹೇಳಿಕೆಯಂತೆ, ಕುಷ್ಟಗಿ ಗ್ರಾಮದಲ್ಲಿದ್ದ ವ್ಯಾಸರಾಯಾಚಾರ್ಯ ಕೃಷ್ಣಾಚಾರ್ಯ ಕಟ್ಟಿ ಇವರ ಮನೆಯಲ್ಲಿರುವ ಕೈಬರಹದ 'ಭಾಗವತ ಪುರಾಣ'ದ ತೃತಿಯ ಸ್ಕಂದದ ಕೊನೆಯಲ್ಲಿ ಹೀಗೆ ಬರೆದಿದೆ – 'ಶಕವರ್ಷದ ೧೭೮೧ನೇ ಸಿದ್ಧಾರ್ಥಿ ಸಂವತ್ಸರದ ಮಾಘ ಮಾಸದ ತೃತಿಯಾ ತಿಥಿಯಲ್ಲಿ (೧೮೮೫) 'ಕೃಷ್ಣಗಿರಿ' ಗ್ರಾಮಸ್ಥ ಕೃಷ್ಣಾಚಾರ್ಯರು ಬರೆದದ್ದು.' ಎಂದಿದೆ."[೧] ಈ ಕೃಷ್ಣಗಿರಿ ಪದವೇ ಕಾಲಾಂತರದಲ್ಲಿ 'ಕುಷ್ಟಗಿ' ಅಪಭ್ರಂಶವಾಗಿದೆ.

"ಕನಕಗಿರಿಯ ಶ್ರೀ ಲಕ್ಷ್ಮಿನರಸಿಂಹ ದೇವಾಲಯದ ಪ್ರಾಕಾರದಲ್ಲಿರುವ ೨೧ನೇ ಜನವರಿ ೧೫೩೪ರಂದು ಬರೆಯಿಸಿದ ವಿಜಯನಗರದ ಅರಸ ಅಚ್ಯುತದೇವರಾಯನು ಆಳುತ್ತಿದ್ದಾಗಿನ ಶಿಲಾ ಶಾಸನದಲ್ಲಿ ಒಂದು ವಾಕ್ಯ ಹೀಗಿದೆ–'ಕುಸ್ಟಿಗೆಯ ಸೀಮೆಯ ವಳಗಣ ಸಮರ್ಪಿಸಿದ ಯಿಂಗಳದಹಾಳ ಗ್ರಾ ॥ ೧' ಎಂದಿದೆ "[೨] ಹೀಗೆ ಉಲ್ಲೇಖಗೊಂಡಿರುವುದನ್ನು ಬಿಟ್ಟರೆ ಇನ್ನೆಲ್ಲೂ ಉಲ್ಲೇಖವಾಗಿಲ್ಲ.

ಗದ್ಯ ಸಾಹಿತ್ಯದಲ್ಲಿ ಒಂದು ನಾಡಿನ, ದೇಶದ ಸಾಂಸ್ಕೃತಿಕ ಅಧ್ಯಯನದಲ್ಲಿ ಐತಿಹ್ಯಗಳು ಗಮನಾರ್ಹವಾಗಿರುವುದರಿಂದ ಅವುಗಳು ನಂಬಲು ಅರ್ಹವಾಗಿವೆ. ಹೀಗಾಗಿ ಕುಷ್ಟಗಿ ಸ್ಥಳನಾಮವನ್ನು ತಿಳಿಯಲು ಈ ಪರಿಸರದಲ್ಲಿ ಜನಜನಿತವಾಗಿರುವ ಐತಿಹ್ಯಗಳು ಇತಿಹಾಸದ, ಸಂಸ್ಕೃತಿಯ ತೋರ್‌ಬೆರಳುಗಳಂತೆ ತೋರಿರುವುದರಿಂದ ಐತಿಹ್ಯಗಳ(Legends) ಮೊರೆ ಹೋಗಲಾಗಿದೆ.

ಕುಷ್ಟಗಿ ಸ್ಥಳನಾಮದ ವಿವೇಚನಾ ಐತಿಹ್ಯ ಹೀಗಿದೆ – "ಕುಷ್ಟಗಿಯ ಮೂಲ ಹೆಸರು 'ಕೃಷ್ಣಗಿರಿ'. ಬಿಜಾಪುರದ ಸುಲ್ತಾನ ಇಸ್ಮಾಯಿಲ್ ಆದಿಲ್‌ಶಹ ರಾಜ್ಯ ವಿಸ್ತರಣೆಗಾಗಿ ಈ ಊರಿಗೆ ಬಂದಾಗ ಕೃಷ್ಣಗಿರಿ ಎನ್ನುವ ಬದಲು 'ಕೃಷ್ಟಗಿ' (ಕೃಷ್ಣಪ್ಪನನ್ನು ಕಿಷ್ಟಪ್ಪ ಎಂದು ಕರೆದಂತೆ) ಎಂದು ಅಪಭ್ರಂಶದಿಂದ ತಪ್ಪಾಗಿ ಕರೆಯುತ್ತಾನೆ. ಆ ತಪ್ಪಿಗೆ ಊರು ಸುತ್ತಲೂ ನಾಲ್ಕು ಸ್ಮಾರಕಗಳನ್ನು ಕಟ್ಟಿಸುತ್ತಾನೆ. ಎಂದಿಗೆ ಊರು ಬೆಳೆಯುತ್ತಾ ಬೆಳೆಯುತ್ತಾ ಆ ನಾಲ್ಕೂ ಸ್ಮಾರಕಗಳನ್ನು ದಾಟುತ್ತದೆಯೋ ಅಂದಿಗೆ ಕುಷ್ಟಗಿ ಪುನಃ ಕೃಷ್ಣಗಿರಿ ಆಗುತ್ತದೆಂದು ಅಭಯಹಸ್ತ ನೀಡುತ್ತಾನೆ!?"[೩] ಸದ್ಯಕ್ಕಂತೂ ಕೃಷ್ಣಗಿರಿ ಒಂದು ಕಾಲೋನಿಯಾಗಿದೆ.

ಸ್ಮಾರಕಗಳ ಕುರಿತು ಇನ್ನೊಂದು ಐತಿಹ್ಯ ಹೀಗಿದೆ – "ಕ್ರಿ.ಶ. ೧೨೯೪ರ ರಾಯಚೂರಿನ ಶಾಸನ ಹಾಗೂ ಕೋಟೆಯ ಮೇಲಿನ ರಾಣಿಯ ಮೆರವಣಿಗೆಯ ಶಿಲಾ ಚಿತ್ರಗಳು ತಿಳಿಸುವಂತೆ ಕಾಕತೀಯ ರಾಣಿ ರುದ್ರಾಂಬೆಯು ಈ ಪ್ರದೇಶವನ್ನು ಆಳುತ್ತಿದ್ದಳು. ಆಕೆಯ ಗಂಡನಿಗೆ ಕುಷ್ಠರೋಗ ಬಂದಿತು. ಹವಾಗುಣದಿಂದಲೇ ಕುಷ್ಠರೋಗವನ್ನು ನಿವಾರಿಸುವ ಈ ಸ್ಥಳಕ್ಕೆ ಆತನನ್ನು ಕರೆತಂದು, ಇಲ್ಲಿಯೇ ತಂಗಿಸುತ್ತಾಳೆ. ಕೆಲವು ವರ್ಷಗಳ ನಂತರ ಆ ರೋಗ ನಿವಾರಣೆಯಾಯಿತು! ಕುಷ್ಠರೋಗಿಯ ಸ್ಮರಣಾರ್ಥ ಊರು ಸುತ್ತಲೂ ನಾಲ್ಕು ಸ್ಮಾರಕಗಳನ್ನು ಕಟ್ಟಿಸಿದಳು. ಹನಮಸಾಗರ ರಸ್ತೆಯ ಪಕ್ಕದಲ್ಲಿರುವ ಸ್ಮಾರಕ ಕಾಯಿಗಡ್ಡಿ ಹುಸೇನಸಾಬರ ಗೋರಿ, ವಾಸವಿನಗರದ ವರಪ್ರಸಾದಾಂಜನೇಯ ದೇವಸ್ಥಾನದ ಪಕ್ಕದಲ್ಲಿರುವ ಹಿಂದೂ–ಇಸ್ಲಾಂ ಶೈಲಿಯ ವರಲೆಕ್ಕೆಮ್ಮ ಅಥವಾ ಉರುಕಮ್ಮ ದೇಗುಲ, ರಾಷ್ಟ್ರೀಯ ಹೆದ್ದಾರಿ–೫೦ರ ಪಕ್ಕದಲ್ಲಿ, ಟೆಂಗುಂಟಿ ರಸ್ತೆಯ ಹತ್ತಿರವಿರುವ ಕಾಶೀನಾಥ ಗುಡಿ ಹಾಗೂ ಶ್ರೀ ಬುತ್ತಿ ಬಸವೇಶ್ವರ ದೇವಾಲಯಗಳೇ ಆ ನಾಲ್ಕು ಸ್ಮಾರಕಗಳು! ಊರು ದೊಡ್ಡದಾಗುತ್ತಾ ಆ ನಾಲ್ಕೂ ಸ್ಮಾರಕಗಳನ್ನು ದಾಟಿದಂದಿಗೆ ಕುಷ್ಟಗಿ ಪುನಃ ಕೃಷ್ಣಗಿರಿ ಆಗುತ್ತದೆಂದು ಅಭಯಹಸ್ತ ನೀಡುತ್ತಾಳೆ!? ಹೀಗೆ ಕುಷ್ಠರೋಗ ವಾಸಿಯಾದ ಈ ಸ್ಥಳವು 'ಕುಷ್ಠಗಿ'ಯಾಗಿರಬಹುದು." [೪]

ಕುಷ್ಟಗಿ ಹೆಸರಿಗೆ ಇನ್ನೊಂದು ಐತಿಹ್ಯ ಹೀಗಿದೆ – "ಸುಮಾರು ಕ್ರಿ.ಶ. ೧೫೨೦ರಲ್ಲಿ ಬಿಜಾಪುರದ (ಬಹಮನಿ) ಸುಲ್ತಾನ ಇಸ್ಮಾಯಿಲ್ ಆದಿಲ್‌ಶಹ ತನ್ನ ರಾಜ್ಯ ವಿಸ್ತರಣೆಗಾಗಿ ಇಲ್ಲಿಗೆ ಬಂದಾಗ ಸಂಜೆಯಾದ ಪ್ರಯುಕ್ತ ವಾಸ್ತವ್ಯ ಹೂಡಬೇಕಾಯಿತು. ಸುಲ್ತಾನನ ಕುದುರೆ ಕಟ್ಟಿದ್ದ ಸ್ಥಳದಲ್ಲಿಯೇ ಕುಂಟುತ್ತಾ ಮೂರೇ ಕಾಲಿನ ಮೇಲೆ ನಿಂತಿತ್ತಂತೆ! ಈ ಬಗ್ಗೆ ಜ್ಯೋತಿಷಿಗಳನ್ನು ಕೇಳಿದಾಗ... ಆ ಜಾಗದಲ್ಲಿ ಏಳು ಕೊಪ್ಪರಿಗೆ ಹೊನ್ನು ಇದೆ ಎಂದಾಗ ಆ ಭೂಮಿಯ ಉತ್ಖನನ ನಡೆಯುವಾಗ ಬೃಹತ್ ತಗ್ಗೂ ಆಯಿತು. ಅಲ್ಲಿ ಏಳು ಕೊಪ್ಪರಿಗೆ ಹೊನ್ನು ಸಿಕ್ಕಿತು(?), ಆಗ ಆದಿಲ್‌ಶಹ ಇದೊಂದು ನೆನಪಿನ ತಾಣವಾಗಲೆಂದು ಆ ಬೃಹತ್ ತಗ್ಗನ್ನು ಕಲ್ಲುಗಳಿಂದ ಕಟ್ಟಿಸಿದ ಬಾವಿಯಾಗಿಸಿದನು. ಆ ಬೃಹತ್ ಕಲ್ಲುಬಾವಿ ಈಗಲೂ ಇದೆ. ಈ ಸ್ಥಳದಲ್ಲಿ ಸುಲ್ತಾನನ ಕುದುರೆ ಕುಂಟುತ್ತಾ ನಿಂತಿದ್ದರಿಂದ ಇದಕ್ಕೆ 'ಕುಂಟಗಿ' ಎಂದು ಹೆಸರಾಯಿತು. ಇದುವೇ ಮುಂದೆ 'ಕುಷ್ಟಗಿ' ಆಯಿತೆಂಬ ದಂತಕಥೆಯಿದೆ." [೫]

ಈ ಎಲ್ಲಾ ಅಂಶಗಳನ್ನೂ ಗಮನದಲ್ಲಿಟ್ಟುಕೊಂಡು ಕೆಳಕಂಡ ನಾಲ್ಕು ತೆರನಾಗಿ ಕುಷ್ಟಗಿಯ ಸ್ಥಳನಾಮ ಹೀಗಿರಬಹುದೆಂದು ವಿವೇಚಿಸಲಾಗಿದೆ.

- "ಕೃಷ್ಣಗೆಯ್ – ಕೃಷ್ಟಗಯಿ – ಕುಷ್ಟಗಿ
- ಕೃಷ್ಣಗಿರಿ – ಕೃಷ್ಟಗಿ – ಕುಷ್ಟಗಿ
- ಕೃಷ್ಣಗಿರಿ – ಕುಷ್ಠ(ರೋ)ಗಿ – ಕುಷ್ಟಗಿ
- ಕೃಷ್ಣಗಿರಿ – ಕುಂತ(ಟ)ಗಿ – ಕುಷ್ಟಗಿ" [೬]

ಒಟ್ಟಿನಲ್ಲಿ ಕ್ರಿ.ಶ. ೧೫೨೦ರಲ್ಲಿ ಬಿಜಾಪುರದ ದೊರೆ ಆದಿಲ್ ಶಾಹಿಯ ಕುದುರೆ ಇಲ್ಲಿ ಕುಂಟುತ್ತಾ ಮೂರು ಕಾಲಿನ ಮೇಲೆಯೇ ನಿಂತಿದ್ದರಿಂದ ಕುಂಟಗಿ ಎಂದೂ, ಕಾಕತೀಯ ರಾಣಿ ರುದ್ರಾಂಬೆಯು ತನ್ನ ಗಂಡನ ಕುಷ್ಠರೋಗ (ಹವಾಗುಣದಿಂದ)ವಾಸಿಯಾದ ಈ ಸ್ಥಳ ಕುಷ್ಠ(ರೋ)ಗಿ ಆಯಿತೆಂದೂ, ಕೃಷ್ಣಮೃಗ(ಜಿಂಕೆ)ಗಳು ಹೆಚ್ಚಾಗಿದ್ದ ಈ ಪ್ರದೇಶ(ಗಿರಿ) ಕೃಷ್ಣಗಿರಿಯಾಯಿತೆಂದೂ ಹೇಳಲಾಗುವ ಅನೇಕ ದಂತಕತೆಗಳಿವೆಯಾದರೂ, 'ಕೃಷ್ಣಗೆಯ್' ಅಪಭ್ರಂಶ ಹೊಂದಿ 'ಕುಷ್ಟಗಿ' ಎಂದಾಗಿರುವುದನ್ನು ನಂಬಬಹುದಾಗಿದೆ. ಏಕೆಂದರೆ ಕುಷ್ಟಗಿ ಪದವು ಪ್ರಾಯಶಃ ಪ್ರಕೃತಿವಾಚಕವಾಗಿದ್ದು ಕೃಷ್ಣ (ಕಪ್ಪು) + ಗೆಯ್ (ಮಣ್ಣು) → 'ಕಪ್ಪು(ಎರೆ) ಭೂಮಿ' ಎಂಬರ್ಥವನ್ನು ನೀಡುವ ಅನ್ವರ್ಥನಾಮವಾಗಿದೆ. ಕುಷ್ಟಗಿಯ ಸುತ್ತಮುತ್ತಲೂ ಬಹುಪಾಲು ಇರುವ ಕಪ್ಪುಮಣ್ಣು ಇದನ್ನು ಸಾಕ್ಷೀಕರಿಸುತ್ತಿದೆ. ಅಂತೆಯೇ 'ಕೃಷ್ಣಗೆಯ್' ಪದವೇ ಕಾಲಾಂತರದಲ್ಲಿ 'ಕುಷ್ಟಗಿ' ಆಗಿರಬಹುದಾದ ಸಾಧ್ಯತೆ ಇರುವುದರಿಂದ ಇದು ಸ್ವೀಕಾರಾರ್ಹವಾಗಿದೆ. ಮೇಲಿನ ಎಲ್ಲಾ ಅಂಶಗಳನ್ನೂ ಗಮನಿಸಿದಾಗ ಕೃಷ್ಣಗಿರಿ–ಕೃಷ್ಣಗೆಯ್–ಕೃಷ್ಣಗೆಯಿ–ಕೃಷ್ಟಗೆಯಿ–ಕುಷ್ಟಗೆಯಿ–ಕುಷ್ಟಗೆ–ಕುಷ್ಟಗಿ (ಈ ಪರಿಸರದಲ್ಲಿ 'ಎ'ಕಾರವನ್ನು 'ಇ'ಕಾರವಾಗಿ ಉಚ್ಚರಿಸುತ್ತಾರೆ. ಉದಾ : ಎಮ್ಮೆ–ಎಮ್ಮಿ, ಒಂಟೆ–ಒಂಟಿ, ಅತ್ತೆ–ಅತ್ತಿ, ) ಆಗಿರಬಹುದೆಂದು ತರ್ಕಿಸ ಬಹುದು.

### ೨..೨ ಪ್ರಸ್ತುತ ಅಂಕಿ–ಅಂಶಗಳು :

ಕುಷ್ಟಗಿ ಹಾಗೂ ತಾಲ್ಲೂಕಿನ ಬಗೆಗೆ ಇರುವ ಅಂಕಿ ಅಂಶಗಳನ್ನು ಪುರಸಭೆ ಹಾಗೂ ತಹಶೀಲ್ದಾರರವರ ಕಾರ್ಯಾಲಯದಿಂದ ಪಡೆಯಲಾಗಿದೆ. ಅವುಗಳ ಪ್ರಕಾರ ಪುರಸಭೆಯಲ್ಲಿ ೨೮ ವಾರ್ಡುಗಳಿವೆ. ೨೦೧೧ರ ಜನಗಣತಿಯ ಪ್ರಕಾರ ಕುಷ್ಟಗಿ ಪಟ್ಟಣದ

ಜನಸಂಖ್ಯೆ ೨೪೮೭೮ ಇದರಲ್ಲಿ ೧೨೪೯೩ ಪುರುಷರು, ೧೨೩೮೫ ಸ್ತ್ರೀಯರಿದ್ದು, ೪೮೧೪ ಮನೆಗಳಿವೆ.

ಕುಷ್ಟಗಿ ತಾಲ್ಲೂಕಿನಲ್ಲಿ ಒಟ್ಟಾರೆ ೧೮೮ ಗ್ರಾಮಗಳಿದ್ದು, ಇದರಲ್ಲಿ ೧೭೬ ಜನವಸತಿ ಗ್ರಾಮಗಳು ಹಾಗೂ ೧೨ ಬೇಚಿರಾಕ್‌ಗಳಿವೆ. ೪ ಹೋಬಳಿಗಳು, ೨೫ ತಾಲ್ಲೂಕು ಪಂಚಾಯತ ಕ್ಷೇತ್ರಗಳು, ೭ ಜಿಲ್ಲಾ ಪಂಚಾಯತ ಕ್ಷೇತ್ರಗಳು, ೩೫ ಗ್ರಾಮ ಪಂಚಾಯತಿಗಳಿವೆ. ೨೦೧೧ರ ಜನಗಣತಿಯ ಪ್ರಕಾರ ಕುಷ್ಟಗಿ ತಾಲ್ಲೂಕಿನ ಜನಸಂಖ್ಯೆ ೨೮೪೯೭೨ ಇದರಲ್ಲಿ ೧೪೪೨೨೭ ಪುರುಷರು, ೧೪೦೫೪೬೫ ಸ್ತ್ರೀಯರಿದ್ದು, ೫೧೩೪೭ ಮನೆಗಳಿವೆ. ಕುಷ್ಟಗಿ ವಿಧಾನಸಭಾ ಕ್ಷೇತ್ರವೂ ಆಗಿದ್ದು, ಕೊಪ್ಪಳ ಲೋಕಸಭಾ ಕ್ಷೇತ್ರಕ್ಕೆ ಸೇರಿದೆ.

### ೨. ೩ ಭೌಗೋಳಿಕ ಅವಲೋಕನ :

ಕುಷ್ಟಗಿ ತಾಲ್ಲೂಕು ಕೃಷ್ಣಾ ನದಿ ಮತ್ತು ತುಂಗಭದ್ರಾ ನದಿಗಳ ನಡುವೆ ಇರುವುದರಿಂದ ಇದನ್ನು 'ದೋ-ಅಬ್ ಪ್ರದೇಶ' ಎಂದು, 'ಎಡತೊರೆ – ಇರ್ಸಾಸಿರ' ಎಂದೂ ಕರೆಯುತ್ತಾರೆ. ಕೃಷ್ಣಾ ಜಲಾನಯನ ಪ್ರದೇಶದ ವ್ಯಾಪ್ತಿಯಲ್ಲಿರುವ ಈ ಪ್ರದೇಶ ಒಣಭೂಮಿಯನ್ನು ಹೊಂದಿದೆ. GI Raichur Dist ೧೯೭೦ ರಲ್ಲಿ ಉಲ್ಲೇಖವಾಗಿರುವಂತೆ ಭೌಗೋಳಿಕವಾಗಿ ಪೂರ್ವ ರೇಖಾಂಶ ೭೫.೩೦°ಯಿಂದ ೭೬.೩೦°ವರೆಗೆ ಹಾಗೂ ಉತ್ತರ ಅಕ್ಷಾಂಶ ೧೫.೩೦°ಯಿಂದ ೧೬.೦೨°ವರೆಗಿನ ಪರಿಧಿಯಲ್ಲಿದ್ದು, ೧೩೬೬ ಚ.ಕಿ.ಮೀ. ಭೌಗೋಳಿಕ ವಿಸ್ತೀರ್ಣದಲ್ಲಿ ಈ ತಾಲ್ಲೂಕು ಹರಡಿಕೊಂಡಿದೆ.

### ಪಾರಂಪರಿಕ ಕಸಬುಗಳು ಮತ್ತು ಭೌಗೋಳಿಕ ಅಂಶಗಳ ಸಂಬಂಧ :

ಆಯಾಯ ಭೌಗೋಳಿಕ ಪರಿಸರಕ್ಕೆ ತಕ್ಕಂತೆ ವೃತ್ತಿಗಳೂ ಹುಟ್ಟಿಕೊಂಡಿರುತ್ತವೆ. ಅಂದರೆ ಭೌಗೋಳಿಕ ಅಂಶಗಳಿಗೂ ಅಲ್ಲಿರುವ ಕುಲಕಸಬುಗಳು ಇಲ್ಲವೇ ಪಾರಂಪರಿಕ ಕಸಬುಗಳಿಗೂ ನೇರ ಅನುಸಂಧಾನವೇರ್ಪಟ್ಟಿರುತ್ತದೆ. ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳಿಗೆ ಇಂಬು ನೀಡುವಂತಹ ಭೌಗೋಳಿಕ ಅಂಶಗಳನ್ನು ಇಲ್ಲಿ ಕಾಣಬಹುದಾದೆ. ಇಲ್ಲಿ ಬಹುತೇಕ ಕಪ್ಪು ಮಣ್ಣು ಇದೆ. ಕಪ್ಪು ಮಣ್ಣನ್ನು ಎರೆ ಮಣ್ಣು ಇಲ್ಲವೇ ಕಪ್ಪು ಹತ್ತಿ

ಮಣ್ಣು ಎಂದೂ ಕರೆಯುತ್ತಾರೆ. ಅಂತೆಯೇ ಈ ಪ್ರದೇಶದಲ್ಲಿ ಹತ್ತಿಯನ್ನು ಹೆಚ್ಚಾಗಿ ಬೆಳೆಯುತ್ತಿದ್ದರು.

ಕುಷ್ಟಗಿಯ ಸುತ್ತಮುತ್ತಲಿನ ಇಳಕಲ್ಲು, ಹುನಗುಂದ, ಬಾದಾಮಿ, ರೋಣ, ಯಲಬುರ್ಗಾ, ಕೊಪ್ಪಳ, ಲಿಂಗಸ್ಗೂರು, ಸಿಂಧನೂರು ಹಾಗೂ ಗಂಗಾವತಿ ಪ್ರದೇಶಗಳಲ್ಲಿ ಬಟ್ಟೆ ತಯಾರಿಸಲು ಬೇಕಿದ್ದ ಕಚ್ಚಾ ಸಂಪನ್ಮೂಲ ಹತ್ತಿಯನ್ನು ಹೆಚ್ಚಾಗಿ ಬೆಳೆಯುತ್ತಿದ್ದುದರಿಂದ ಈ ಪ್ರದೇಶದಲ್ಲಿ ಬಟ್ಟೆ ನೇಕಾರಿಕೆ ತೀವ್ರವಾಗಿ ಬೆಳೆಯಿತು. ಅಂತೆಯೇ 'ಇಳಕಲ್ಲ ಸೀರೆ', 'ಗುಳೇದಗುಡ್ಡದ ಖಣ' ಹಾಗೂ 'ಕಮತಗಿಯ ಪಟಗ ಮತ್ತು ರುಮಾಲು' ನೇಕಾರಿಕೆಯನ್ನು ದೋಟಿಹಾಳ, ತಾವರಗೇರ, ಹನಮಸಾಗರ, ಗಜೇಂದ್ರಗಡ, ಗುಳೇದಗುಡ್ಡ, ಕಮತಗಿ, ಸೂಳೆಭಾವಿ, ಅಮೀನಗಡ, ಗುಡೂರು, ಕಿನ್ನಳ, ಭಾಗ್ಯನಗರ ಮುಂತಾದ ಊರುಗಳಲ್ಲಿ ನೇಕಾರಿಕೆಯೇ ಬಹುತೇಕರ ಕಸಬಾಗಿದೆ. ೧೨ನೇ ಶತಮಾನದ ನೇಯ್ಗೆ ಕಸಬನ್ನು ಮಾಡುತ್ತಿದ್ದ ಜೇಡರ ದಾಸೀಮಯ್ಯ ಇದೇ ಪರಿಸರದವನು. ವಿಜಯನಗರದ ಅರಸರ ಕಾಲದಲ್ಲಿ ಕೃಷಿಯನ್ನು ಹೊರತುಪಡಿಸಿದರೆ ನೇಕಾರಿಕೆ ಉದ್ಯಮದಿಂದಲೇ ಹೆಚ್ಚು 'ಮಗ್ಗರಿ' ತೆರಿಗೆ (ಮಗ್ಗಗಳ ಸಂಖ್ಯೆಗೆ ಅನುಗುಣವಾಗಿ ಹಾಕಲ್ಪಡುತ್ತಿದ್ದ ತೆರಿಗೆ) ಸಂದಾಯವಾಗುತ್ತಿತ್ತು. ಅಲ್ಲದೇ ವಿಜಯನಗರ ಸಾಮ್ರಾಜ್ಯಕ್ಕೆ ಹತ್ತಿ ಬಟ್ಟೆಯ ರಫ್ತು ಆದಾಯವೂ ಲಭ್ಯವಾಗುತ್ತಿದ್ದುದನ್ನು 'ಆಮುಕ್ತಮಾಲ್ಯದ'ದಲ್ಲಿರುವುದನ್ನು ಇತಿಹಾಸ ತಿಳಿಸುತ್ತದೆ.

ಹತ್ತಿಬಟ್ಟೆಯನ್ನು ತೊ(ಉ)ಟ್ಟು ಬಿಟ್ಟ ಮೇಲೆ ಆ ಹಳೆಯ ಬಟ್ಟೆಗಳಿಂದಲೇ 'ಕೌದಿ' ಎಂಬ ಹಾಸಿಗೆ ವ, ಹೊದಿಕೆಯನ್ನು ತಯಾರಿಸಲಾಗುತ್ತಿದೆ. ಇದು ಮೋಚಿ, ಗೊಂದಲಿಗ ಮುಂತಾದ ಜನಾಂಗಗಳಲ್ಲದೇ ಅನೇಕ ಅಲೆಮಾರಿ ಜನಾಂಗಗಳ ಕುಲಕಸಬಾಗಿದೆ. ಕೌದಿ ಹೊಲಿಯುವುದನ್ನೇ ನಂಬಿದಂತಹ ಜನಾಂಗಗಳನ್ನು ಹನಮಸಾಗರ, ಕೋಡಿಹಾಳ, ಗಜೇಂದ್ರಗಡ ಮುಂತಾದ ಊರುಗಳಲ್ಲಿ ಕಾಣಬಹುದಾಗಿದೆ.

ಹತ್ತಿಯನ್ನು ಕೊಟ್ಟರೆ ಅದರ ತೂಕದಷ್ಟು 'ಕರದಂಟು' ಕೊಡುತ್ತಿದ್ದ ಸಂದರ್ಭವೂ ಇತ್ತು. ಕೆಲವೊಬ್ಬರು ಕರದಂಟನ್ನು ಮಾಡಿಕೊಂಡು ಹೊಲ ಹೊಲಗಳಿಗೇ ಹೊತ್ತೊಯ್ದು ಮಾರುತ್ತಿದ್ದರು. ಆಗ ಹಲಗೆ ಅಂಟು ಎಂದು ಕರೆಯುತ್ತಿದ್ದ ಕರದಂಟನ್ನು ಮಾರುತ್ತಿದ್ದರು, ಈಗ ಅದುವೇ ರೂಪಾಂತರ ಹೊಂದಿ ಅಮೀನಗಡದ ಕರದಂಟಾಗಿದೆ.

ರಾಜೂರು ಗ್ರಾಮದ ಸುತ್ತಮುತ್ತಲಿನ ಹಳ್ಳದಲ್ಲಿ ಸುಣ್ಣದ ಕಲ್ಲು ಹೇರಳವಾಗಿ ಸಿಕ್ಕುತ್ತಿದ್ದುದರಿಂದ ಅಲ್ಲಿನ ಜನರು 'ಸುಣ್ಣ' ತಯಾರಿಸುವ ಕಸಬನ್ನು ಮಾಡತೊಡಗಿದರು.

ಕಿನ್ನಾಳ ಗ್ರಾಮದ ಸಮೀಪದಲ್ಲಿರುವ ಇಂದರಗಿ, ಜಬ್ಬಲಗುಡ್ಡ, ಕೊಪ್ಪಳದ ಗುಡ್ಡ, ಕುದುರಿಮೋತಿ, ಗಂಗಾವತಿಯ ಅಕ್ಕಪಕ್ಕದಲ್ಲಿ ಸಿಕ್ಕುವ ಹೆಬ್ಬೇವು, ಹತ್ತಿ ಮರ, ಪಳಕಿನ ಮರ, ನುಗ್ಗೆ ಕಟ್ಟಿಗೆಗಳಿಂದ ಗೊಂಬೆಗಳನ್ನು ಹಾಗೂ ಹುಣಸೆ ಬೀಜಗಳಿಂದ ಕಿಟ್ಟವನ್ನು, ಪಕ್ಕದ ಹಳ್ಳದಲ್ಲಿ ಸಿಕ್ಕುವ ಬಣ್ಣದ ಕಲ್ಲು ಹಾಗೂ ಸಸ್ಯಗಳಿಂದ ಬಣ್ಣಗಳನ್ನೂ ತಯಾರಿಸುವ ಕಲೆ ಕರಗತಮಾಡಿಕೊಂಡಿರುವುದರಿಂದ 'ಕಿನ್ನಾಳದ ಕಿಟ್ಟದ ಗೊಂಬೆಗಳು' ಪ್ರಸಿದ್ಧಿಪಡೆದವು.

ಹೀಗೆ ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳಿಗೆ ಭೌಗೋಳಿಕ ಅಂಶಗಳೂ ಬಹುತೇಕ ಕಾರಣವಾಗುತ್ತವೆ.

**ಭೂ ವಿಜ್ಞಾನ** :– "ಕುಷ್ಟಗಿ ಪರಿಸರವು ಸಾಮಾನ್ಯವಾಗಿ ಕಪ್ಪು (ಎರೆ) ಹಾಗೂ ಕೆಂಪು(ಮಸಾರಿ) ಮಣ್ಣಿನಿಂದ ಕೂಡಿದ್ದು, ವಾರ್ಷಿಕ ಸರಾಸರಿ ೩೯೦ಮಿ.ಮೀ. ಮಳೆಯನ್ನು ಪಡೆಯುತ್ತದೆ. ಸರಾಸರಿ ೧೮° ಸೆ.ಯಿಂದ ೩೭° ಸೆ. ಉಷ್ಣಾಂಶ ಹೊಂದಿದೆ. ಇಲ್ಲಿಯ ಬಹಭಾಗ ಆರ್ಕಿಯನ್ ಶಿಲಾ ಸಮುದಾಯದಿಂದ ಕೂಡಿದೆಯಾದರೂ ಹನಮಸಾಗರದ ಬಳಿ ಮರಳುಗಲ್ಲು(Sand Stone) ಹಾಗೂ ಪೆಂಟಿಗಲ್ಲು(Conglomerate) ಶಿಲಾ ಸಮುದಾಯದಿಂದ ಕೂಡಿದೆ. ಹೀಗಾಗಿ ಇಲ್ಲಿ ಸೈನೈಟ್ ಮತ್ತು ಕಣಶಿಲೆ(Granite)ಯೂ ಇದೆ!"[೨]

ಮೇಣೇದಾಳ ಹತ್ತಿರದ ಗುಡ್ಡ ೧೯೫೧ ಅಡಿ ಎತ್ತರವಿದ್ದು ತಾಲ್ಲೂಕಿನ ಅತೀ ಎತ್ತರದ ಬೆಟ್ಟವಾಗಿದೆ. ಚೆಂದಾಲಿಂಗೇಶ್ವರ ದಿಡುಗನ್ನು ಬಿಟ್ಟರೆ ಕಪಿಲತೀರ್ಥ ಜಲಪಾತ ಇಲ್ಲಿನ ಏಕಮೇವ ಜಲಪಾತವಾಗಿದೆ. ಈ ಪ್ರದೇಶವು ಸಮುದ್ರ ಮಟ್ಟದಿಂದ ೫೮೯ ಮೀಟರ್ ಎತ್ತರದಲ್ಲಿದೆ. ಅಂತೆಯೇ ಬೇರೆ ತಾಲ್ಲೂಕುಗಳಿಗೆ ಹೋಲಿಸಿದಲ್ಲಿ ಇಲ್ಲಿ ಚಳಿ ಹೆಚ್ಚು ಎಂದು ಹೇಳಬಹುದು. ಇದಕ್ಕೆ (ಅವಿಭಜಿತ) 'ರಾಯಚೂರು ಜಿಲ್ಲೆಯ ಸೀಮ್ಲಾ' ಎಂದು ಕರೆಯುತ್ತಿದ್ದರು! ಒಟ್ಟಿನಲ್ಲಿ ಬಿರುಬೇಸಿಗೆಯಲ್ಲಿಯೂ ಸಮಾಧಾನಪಟ್ಟುಕೊಳ್ಳುವಷ್ಟು ಹಿತಕರ ವಾತಾವರಣವಿರುತ್ತದೆ.

**ಖನಿಜ ಸಂಪತ್ತು :**

ಕುಷ್ಟಗಿ ತಾಲ್ಲೂಕಿನಲ್ಲಿ ಕೆಲವು ಖನಿಜ ನಿಕ್ಷೇಪಗಳನ್ನು ಕಾಣಬಹುದಾಗಿದೆ. ಇಲ್ಲಿನ ಮ್ಯಾದರಡೊಕ್ಕಿ ಗುಡ್ಡದಲ್ಲಿ **ಕಬ್ಬಿಣ** (Iron) ಅದಿರಿನ ನಿಕ್ಷೇಪವಿರುವುದಾಗಿ ತಿಳಿದು ಬಂದಿದೆ. ಈಗ ಬಳಕೆಯಲ್ಲಿರುವ ಉನ್ನತ ದರ್ಜೆಯ ಅದಿರು ಮುಗಿದ ನಂತರ ಖಂಡಿತಾ ಇದಕ್ಕೆ ಬೇಡಿಕೆ ಬರುತ್ತದೆ. ಸದ್ಯಕ್ಕೆ ಇಲ್ಲಿ ಕಬ್ಬಿಣದ ಅದಿರಿನ ಯಾವ ಗಣಿ ಗುತ್ತಿಗೆಯೂ ಮಂಜೂರಾಗಿಲ್ಲ.

ಗಾಜು ತಯಾರಿಕೆಗೆ, ಫೆರ್ರೋಸಿಲಿಕಾನ್ ಹಾಗೂ ಅಗ್ನಿನಿರೋಧಕ ಇಟ್ಟಿಗೆಗಳ ನಿರ್ಮಾಣಕ್ಕೆ ಬಳಕೆಯಾಗುವ ಬೆಣಚು(Quartz) ಕುಷ್ಟಗಿ ತಾಲ್ಲೂಕಿನ ಬೆನಕನಾಳ, ತಾವರಗೇರಿ ಸಮೀಪದ ಹೊನಗಡ್ಡಿ ಗುಡ್ಡದಲ್ಲಿ ದೊರೆಯುತ್ತಾದರೂ ಅಷ್ಟೊಂದು ಗುಣಮಟ್ಟದ್ದಲ್ಲ. ಹೀಗಾಗಿ ಖನಿಜೋದ್ಯಮಕ್ಕೆ ಉಪಯುಕ್ತವಲ್ಲವೆಂದೇ ಹೇಳಬೇಕಿದೆ.

ಕಣಶಿಲೆ, ಮರಳುಗಲ್ಲು ಮತ್ತಿತರ ಕಣಶಿಲೆ ಸಂಬಂಧಿತ ಶಿಲೆಗಳನ್ನು ಕುಷ್ಟಗಿ ಪರಿಸರದಲ್ಲಿ ದೊಡ್ಡ ಪ್ರಮಾಣದಲ್ಲಿ ಅಲಂಕರಣ ಶಿಲೆಯಾಗಿ (Ornamental Stones - OST) ಉತ್ಪಾದಿಸಲಾಗುತ್ತಿದೆ. ಕುಷ್ಟಗಿ ತಾಲ್ಲೂಕಿನ ಸೇಬಿನಕಟ್ಟಿ, ಹೂಲಗೇರಿ, ಪುರ್ತಗೇರಿ, ಅಂಟರಠಾಣಾ, ಬಂಡರಗಲ್ಲ, ಕಡೂರ, ಕಳಮಳ್ಳಿ, ತುರ್ಕನೂರ, ಭಾಗದಲ್ಲಿ ಗುಲಾಬಿ ವರ್ಣದ ಕಣಶಿಲೆ (Pink Granite) ದೊರೆಯುತ್ತದೆ. ಇದನ್ನು Pink Rose ಎಂದೂ ಕರೆಯಲಾಗುತ್ತಿದ್ದು ತುಂಬಾ ಬೇಡಿಕೆಯಿದೆ. ಇಳಕಲ್ಲ ಅಕ್ಕಪಕ್ಕದಲ್ಲಿಯೂ ಇದೇ ಕಣಶಿಲೆ ಸಿಕ್ಕುತ್ತಿದ್ದು ಇದು Ilkal Pink ಎಂದೇ ಪ್ರಸಿದ್ಧವಾಗಿದೆ. ಇವುಗಳಿಂದ ಅಲಂಕರಣಶಿಲೆಯ ಬ್ಲಾಕುಗಳನ್ನು ಮಾಡಿ ದೇಶ, ವಿದೇಶಗಳಿಗೂ ರಫ್ತು ಮಾಡಲಾಗುತ್ತಿದೆ. ಕುಷ್ಟಗಿ ಪರಿಸರದಲ್ಲಿ ಕುಷ್ಟಗಿ ತಾಲ್ಲೂಕಿನ ಹಿರೇಮುಕರ್ತಿನಾಳ ಅಕ್ಕಪಕ್ಕದಲ್ಲಿ ಸೀಣಶಿಲೆ ಸಿಕ್ಕುತ್ತಿದ್ದು, Himalayan Blue Granite ಎಂದು ಪ್ರಸಿದ್ಧಿಪಡೆದಿದೆ. ಇದೂ ಕೂಡಾ ದೇಶ, ವಿದೇಶಗಳಿಗೂ ರಫ್ತು ಆಗುತ್ತಿದೆ. ಅಲಂಕಾರಿಕಾ ಕಲ್ಲು ತಯಾರಿಸಿದ ನಂತರ ನಿರುಪಯುಕ್ತವೆಂದು ಬಿಸುಟ ಗ್ರ್ಯಾನೈಟ್ ಕಲ್ಲುಗಳಿಂದ ಮನೆ, ಮಠ, ಮಂದಿರ, ಮಸೀದಿಗಳ ಕಟ್ಟಡಕ್ಕೆ ಬಳಸಲಾಗುತ್ತಿದೆ.

ಪವನ ವಿದ್ಯುತ್ ಉತ್ಪಾದಿಸಲಾಗುತ್ತಿರುವ ಹನಮಸಾಗರ ಗುಡ್ಡದಲ್ಲಿ ಹಾಗೂ ಅದರ ಅಕ್ಕಪಕ್ಕದಲ್ಲಿ ಮರಳುಗಲ್ಲು Sand Stone ಸಿಕ್ಕುತ್ತಿದ್ದು ಮನೆ, ಮಠ, ಮಂದಿರ,

ಮಸೀದಿಗಳ ಕಟ್ಟಡಕ್ಕೆ ಹಾಗೂ ಬೀಸುವ ಕಲ್ಲುಗಳ, ಇಂಡಿ ಕಲ್ಲುಗಳ ತಯಾರಿಕೆಗೆ ಬಳಸಲಾಗುತ್ತಿದೆ.

ಈ ತಾಲ್ಲೂಕಿನಲ್ಲಿ ಹರಿಯುವ ಕೆಲ ಹಳ್ಳಗಳಿಗೆ ಕಟ್ಟೆಗಳನ್ನು ಕಟ್ಟಿ ಕೆರೆಗಳನ್ನು ನಿರ್ಮಿಸಲಾಗಿದೆ. ಹೊಸಹಳ್ಳಿ ಕೆರೆ, ನಿಡಶೇಸಿ ಕೆರೆ, ಪುರದ ಕೆರೆ, ಹುಲಿಯಾಪುರ ಕೆರೆ ಮುಂತಾದವು ಪ್ರಮುಖವಾಗಿದ್ದು, ನೀರಾವರಿ ಹಾಗೂ ಮೀನುಗಾರಿಕೆಗೆ ಸಹಕಾರಿಯಾಗಿವೆ.

ಗದಗ ಜಿಲ್ಲೆಯ ರೋಣ, ಬಾಗಲಕೋಟೆ ಜಿಲ್ಲೆಯ ಬಾದಾಮಿ, ಹುನಗುಂದ, ರಾಯಚೂರು ಜಿಲ್ಲೆಯ ಲಿಂಗಸಗೂರು, ಸಿಂಧನೂರು, ಕೊಪ್ಪಳ ಜಿಲ್ಲೆಯ ಗಂಗಾವತಿ, ಕೊಪ್ಪಳ, ಯಲಬುರ್ಗಾ ತಾಲ್ಲೂಕುಗಳು ಕುಷ್ಟಗಿ ತಾಲ್ಲೂಕಿನ ನೆರೆಹೊರೆಯ ತಾಲ್ಲೂಕುಗಳಾಗಿದ್ದು, ಕುಷ್ಟಗಿಯ ಪರಿಸರದ ವ್ಯಾಪ್ತಿಯಲ್ಲಿವೆ.

ಒಟ್ಟಾರೆ ಕುಷ್ಟಗಿ ತಾಲ್ಲೂಕಿನಲ್ಲಿರುವ ಬೆಣಚಿನ ನಿಕ್ಷೇಪದ ಮರುಮೌಲ್ಯೀಕರಣವೂ ಒಳಗೊಂಡಂತೆ ಕಬ್ಬಿಣದ ಅದಿರಿನ ನಿಕ್ಷೇಪಗಳ, ಅಲಂಕರಣ ಶಿಲೆಗಳ ಸೂಕ್ಷ್ಮ ಹಾಗೂ ಸಮಗ್ರ ಅಧ್ಯಯನದ ಅವಶ್ಯಕತೆಯಿದ್ದು, ಪರಿಸರಕ್ಕೆ ಧಕ್ಕೆಯಾಗದಂತೆ ಬಳಸಿಕೊಳ್ಳುವ ಪ್ರಯತ್ನ ನಡೆಯಬೇಕಿದೆ.

**೨. ೪ ಐತಿಹಾಸಿಕ ಅವಲೋಕನ :**

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿಗೆ ಹೆಮ್ಮೆಪಡುವಂತಹ ಇತಿಹಾಸವಿದೆ. ಸ್ವಾತಂತ್ರ್ಯ ಹೋರಾಟದಿಂದ ಹಿಡಿದು ಹೈದ್ರಾಬಾದ್ ಕರ್ನಾಟಕ ವಿಮೋಚನಾ ಹೋರಾಟ, ಗೋಕಾಕ ಚಳುವಳಿ, ಹೈದ್ರಾಬಾದ್ ಕರ್ನಾಟಕಕ್ಕೆ ೩೭೧(ಜೆ) ಮೀಸಲಾತಿ ಹೋರಾಟ, ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ಹೋರಾಟಗಳನ್ನೂ ಒಳಗೊಂಡಂತೆ ತೀರಾ ಇತ್ತೀಚಿನ ಮಹದಾಯಿ ಹೋರಾಟದವರೆಗಿನ ಅನೇಕ ಹೋರಾಟಗಳಲ್ಲಿಯೂ ಕುಷ್ಟಗಿ ತಾಲ್ಲೂಕಿನ ಬಹುಮುಖ್ಯ ಪಾತ್ರವಿದೆ.

"ಇಲ್ಲಿ ಸಿಕ್ಕಿರುವ ಶಿಲಾಶಾಸನಗಳು ಹಾಗೂ ಸ್ಮಾರಕಗಳಿಂದ ಈ ತಾಲ್ಲೂಕಿನಲ್ಲಿ ೩೧ ಶಿಲಾ ಶಾಸನಗಳು ದೊರಕಿದ್ದು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ನೊಳಂಬರು, ಕಳಚೂರ್ಯರು, ಹೊಯ್ಸಳರು, ಯಾದವರು, ಹೊಸಮಲೆ ಅರಸರು, ವಿಜಯನಗರದ ಅರಸರು, ಕನಕಗಿರಿ ಪಾಳೆಯಗಾರರು, ಮರಾಠರು, ಕೋಗಳಿಯ ಕದಂಬರು, ಕರಡಿಕಲ್ಲ ಕದಂಬರು ಹಾಗೂ ಆನೆಗೊಂದಿ ಅರಸರು ಆಳಿದ್ದಾರೆ.

ಕುಷ್ಟಗಿ ತಾಲ್ಲೂಕಿನಲ್ಲಿ ೨೦ ಶೈವ, ೬ ವೈಷ್ಣವ, ಜೈನ ಹಾಗೂ ಹಿಂದೂ-ಇಸ್ಲಾಂ ಮಾದರಿಯನ್ನೂ ಒಳಗೊಂಡಂತೆ ೩೦ ಪ್ರಾಚೀನ ದೇಗುಲಗಳಿವೆ."[೮]

ಇವುಗಳನ್ನು ನೋಡಿದಾಗ ಎಲ್ಲ ಧರ್ಮಗಳಿಗೂ ಆದ್ಯತೆ ಇರುವುದನ್ನು ಗಮನಿಸಬಹುದು. ಬಹುಕಾಲ ಯಾವ ರಾಜಮನೆತನದವರೂ ಈ ಪ್ರದೇಶವನ್ನು ಆಳದೇ ಇರುವುದರಿಂದ ಕನ್ನಡ ನಾಡಿನ ಪ್ರಮುಖ ರಾಜಮನೆತನಗಳ ಸ್ವತ್ತಾಗಿ, ವೈವಿಧ್ಯಮ ವೈರಿಗಳ ಹಾವಳಿಗೆ ನಿರಂತರ ತುತ್ತಾಗಿ, ಸದಾ ಕದನಗಳ ಕಣಜವಾಗಿದ್ದುದರಿಂದ ಹಿಂದುಳಿದ ಪ್ರದೇಶವೆಂಬ ಹಣೆಪಟ್ಟಿಗೆ ಹದವಾದ ವೇದಿಕೆಯಾಯಿತು!

"ಕುಷ್ಟಗಿ ಪರಿಸರದ ಬಿಜಕಲ್ಲು, ಮಾಟೂರು, ಹೊಸೂರು, ನವಲಹಳ್ಳಿ ಹಾಗೂ ಟೆಂಗುಂಟಿ ಗ್ರಾಮಗಳಲ್ಲಿ ಕ್ರಿ.ಪೂ. ೧೭೦೦-೮೦೦ರ ನೂತನ ಶಿಲಾಯುಗದ ಬಿಳಿಯ ಬೆಣಚು ಕಲ್ಲಿನ ಚಕ್ಕೆ ಆಯುಧಗಳು ಸಿಕ್ಕಿವೆ. ಹಾಗೆಯೇ ಕ್ರಿ.ಪೂ. ೯೦೦-೨೦೦ರ ಬೃಹತ್ ಶಿಲಾಯುಗದ ಮಣ್ಣಿನ ಪಾತ್ರೆಗಳು ಬಿಜಕಲ್ಲು, ಮಾಟೂರು, ಹೊಸೂರು, ನವಲಹಳ್ಳಿ ಹಾಗೂ ಟೆಂಗುಂಟಿಗಳಲ್ಲಿ ದೊರೆತರೆ, ಗಂಗನಾಳ, ಬೋದೂರು, ಕಂದಕೂರು, ತಾವರಗೇರೆ ಹಾಗೂ ಟಕ್ಕಳಕಿಗಳಲ್ಲಿ ಮೃತ್ ಪಾತ್ರೆಗಳು ಸಿಕ್ಕಿವೆ. ತಾವರಗೇರೆಯ ಪಕ್ಕದಲ್ಲಿರುವ ಗಾಣಗಿತ್ತಿ ಗುಡ್ಡದಲ್ಲಿ ಕಲ್ಲಾಸರೆಯ ವರ್ಣಚಿತ್ರಗಳಿವೆ. ನವಲಹಳ್ಳಿಯ ಉತ್ತರ ಭಾಗದಲ್ಲಿ ಬೂದಿಗುಡ್ಡವಿದೆ. ಬೂದಿಗುಡ್ಡೆಗಳು ಸಾಮಾನ್ಯವಾಗಿ ನೂತನ ಶಿಲಾಯುಗದ ಕೊನೆಯ ಘಟ್ಟಕ್ಕೆ ಅಥವಾ ಬೃಹತ್ ಶಿಲಾಯುಗದ ಕೊನೆಯ ಘಟ್ಟಕ್ಕೆ ಅಥವಾ ಬೃಹತ್ ಶಿಲಾ ಸಂಸ್ಕೃತಿಯ ಆರಂಭ ಘಟ್ಟಕ್ಕೆ ಸೇರಿದವುಗಳೆಂದು ಊಹಿಸಬಹುದಾಗಿದೆ."[೯]

ಕುಷ್ಟಗಿ ಪರಿಸರದ ಅನೇಕ ಐತಿಹಾಸಿಕ ಸ್ಮಾರಕಗಳನ್ನೂ ಕಾಣಬಹುದಾಗಿದೆ. ಈಗಾಗಲೇ ಕುಷ್ಟಗಿಯಲ್ಲಿರುವ ಸ್ಮಾರಕಗಳನ್ನು ನೋಡಿಯಾಗಿದೆ. ಮಾಟೂರಿನ ಹಾಗೂ ಮೇಗೂರಿನ ಈಶ್ವರ ದೇವಾಲಯಗಳು, ಮೇಣೇಧಾಳ ಗ್ರಾಮದ ವಿಷ್ಣು ದೇಗುಲ, ಅಂಟರಠಾಣಾದ ಜಂಬುನಾಥೇಶ್ವರ ಗುಡಿ, ಮುದೇನೂರಿನ ಪಾರ್ಶ್ವನಾಥ ವಿಗ್ರಹ, ತಾವರಗೇರಾದಲ್ಲಿ ಹುಡೆ(ನಶಿಸುತ್ತಿದೆ), ವೀರಗಲ್ಲು ಹಾಗೂ ವೈಜನಾಥ ದೇವಾಲಯ, ಗೋತಗಿ ಗ್ರಾಮದ ರಾಮಲಿಂಗ ದೇಗುಲ ಹಾಗೂ ನಾಗಗನ್ನಿಕಾ ದೇಗುಲ, 'ಕೋಟಿಲಿಂಗುಗಳ ಭೂಕೈಲಾಸ'ವೆಂದು ಪ್ರಸಿದ್ಧಿ ಪಡೆದಿರುವ ಪುರ ಗ್ರಾಮದ ಈಶ್ವರ, ಸೋಮಲಿಂಗೇಶ್ವರ ದೇವಾಲಯ, ಹನಮಸಾಗರದ 'ಅಭಿನವ ತಿರುಪತಿ' ವೆಂಕಟೇಶ್ವರ

ದೇಗುಲ, ಚಂದ್ರಗಿರಿಯ ಚಂದಾಲಿಂಗೇಶ್ವರಗಳಂತಹ ಅನೇಕ ಪುರಾತನ ಸ್ಮಾರಕಗಳು ಕುಷ್ಟಗಿ ತಾಲ್ಲೂಕಿನ ಐತಿಹಾಸಿಕ ಹಿನ್ನೆಲೆಯನ್ನು ಹೇಳುತ್ತವೆ.

ಹೀಗೆ ಕುಷ್ಟಗಿಯ ಭೌಗೋಳಿಕ ಮತ್ತು ಐತಿಹಾಸಿಕ ಅವಲೋಕನದಲ್ಲಿ ಸಿಕ್ಕ ಮಾಹಿತಿಗಳಿಗಿಂತ ಸಿಕ್ಕದಿರುವ ವಿಷಯಗಳು ಭೂಗರ್ಭದಲ್ಲಿಯೇ ಹೂತು ಹೋಗಿವೆ. ಈ ಪರಿಸರದಲ್ಲಿ ಬಿಚ್ಚಿಟ್ಟಿರುವುದಕ್ಕಿಂತ, ಬಚ್ಚಿಟ್ಟಿರುವುದೇ ಹೆಚ್ಚು! ಈ ನಿಟ್ಟಿನಲ್ಲಿ ಸಮಗ್ರ ಉತ್ಖನನವಾಗಬೇಕಿದೆ.

*

**ಅಡಿ ಟಿಪ್ಪಣಿಗಳು :-**

೧. ರವಿ ಎನ್. ಚವ್ಹಾಣ, ಎಚ್.ಎಸ್. ಪಾಟೀಲ(ಸಂ), ೨೦೧೧, **ಕೊಪಣ ಸಿರಿ,** (ಅಖಿಲ ಭಾರತ ೭೮ನೇ ಕನ್ನಡ ಸಾಹಿತ್ಯ ಸಮ್ಮೇಳನ, ಗಂಗಾವತಿ, ಸ್ಮರಣ ಸಂಚಿಕೆ), ಕಸಾಪ, ಬೆಂಗಳೂರು. ಪುಟ-೩೪೮

೨. ದೇವರಕೊಂಡಾರೆಡ್ಡಿ(ಸಂ), ೧೯೯೯, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ,** ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ-೩೭೦.

೩. ಕೆ. ಶರಣಪ್ಪ ನಿಡಶೇಸಿ, ಕೆ.ಶರಣಪ್ಪ ನಿಡಶೇಸಿ(ಸಂ), ೨೦೦೨, **ಕೃಷ್ಣಗಿರಿ ಸಾಹಿತ್ಯ ಸಿರಿ,** (ಕುಷ್ಟಗಿ ತಾಲ್ಲೂಕಾ ದ್ವಿತಿಯ ಕನ್ನಡ ಸಾಹಿತ್ಯ ಸಮ್ಮೇಳನ, ಹನಮಸಾಗರ, ಸ್ಮರಣ ಸಂಚಿಕೆ) ಕಸಾಪ,ಕುಷ್ಟಗಿ. ಪುಟ-೨೭.

೪. ಅದೇ. ಪುಟ-೨೭

೫. ಅದೇ. ಪುಟ-೨೭

೬. ಅದೇ. ಪುಟ-೨೭

೭. ಚಂದ್ರಶೇಖರ ಎಚ್., ಎಚ್.ಎಸ್. ಪಾಟೀಲ(ಸಂ), ೨೦೧೧, **ಕೊಪಣ ಸಿರಿ,** (ಅಖಿಲ ಭಾರತ ೭೮ನೇ ಕನ್ನಡ ಸಾಹಿತ್ಯ ಸಮ್ಮೇಳನ, ಗಂಗಾವತಿ, ಸ್ಮರಣ ಸಂಚಿಕೆ) ಸಂಪಾದಕ- ಕಸಾಪ, ಬೆಂಗಳೂರು. ಪುಟ-೧

೮. ಸೋಮಶೇಖರ ಎಸ್.ವೈ., ೨೦೦೧, **ಕರ್ನಾಟಕ ದೇವಾಲಯ-ಕೋಶ ಕೊಪ್ಪಳ ಜಿಲ್ಲೆ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪುಟ-XXXII (ಪ್ರಸ್ತಾವನೆ)

೯. ಹನಮಗೌಡ.ಸಿ., ೨೦೦೧, **ಕುಷ್ಟಗಿ ತಾಲೂಕ ದರ್ಶನ,** ಕುಂತಳ ಪ್ರಕಾಶನ, ಕೊರಡಕೇರಾ. ಪುಟ-೧

*

ಅಧ್ಯಾಯ ಮೂರು

# ಪಾರಂಪರಿಕ ಕಸಬುಗಳು

೩.೧ ಪರಂಪರೆಯ ಉಗಮ
೩.೨ ಪಾರಂಪರಿಕ ಕಸಬುಗಳ ಉಗಮ
೩.೩ ಪಾರಂಪರಿಕ ಕಸಬು – ಪದ
೩.೪ ಪಾರಂಪರಿಕ ಕಸಬುಗಳು ನಡೆದು ಬಂದ ದಾರಿ
೩.೫ ಕುಷ್ಟಗಿ ಪರಿಸರದ ವಿಶಿಷ್ಟ ಪಾರಂಪರಿಕ ಕಸಬುಗಳು
೩.೫.೧ ಇಳಕಲ್ ಸೀರೆ ನೇಕಾರಿಕೆ
೩.೫.೨ ಗುಳೇದಗುಡ್ಡದ ಖಣ ನೇಕಾರಿಕೆ
೩.೫.೩ ಕಮತಗಿ ಪಟಗ ಮತ್ತು ರುಮಾಲು ನೇಕಾರಿಕೆ
೩.೫.೪ ಅಮೀನಗಡದ ಕರದಂಟು ತಯಾರಿಕೆ
೩.೫.೫ ರಾಜೂರ ಸುಣ್ಣ ತಯಾರಿಕೆ
೩.೫.೬ ಭಾಗ್ಯನಗರದ ಕೇಶೋದ್ಯಮ
೩.೫.೭ ಕಿನ್ನಾಳ ಕಿಟ್ಟದ ಗೊಂಬೆ ತಯಾರಿಕೆ
೩.೫.೮ ಹನಮಸಾಗರ ಕೌದಿ ಹೊಲಿಗಾರಿಕೆ
೩.೫.೯ ಕೊಪ್ಪಳ ಮಂಡಾಳು ತಯಾರಿಕೆ
೩.೬ ಕುಷ್ಟಗಿ ಪರಿಸರದ ಸಾಮಾನ್ಯ ಪಾರಂಪರಿಕ ಕಸಬುಗಳು
೩.೬.೧ ಕುಂಬಾರಿಕೆ
೩.೬.೨ ಕಮ್ಮಾರಿಕೆ
೩.೬.೩ ಪತ್ತಾರಿಕೆ
೩.೬.೪ ಬಡಗಿತನ
೩.೬.೫ ಕೊರವರ ಕಸಬು
೩.೬.೬ ಮೇದಾರಿಕೆ
೩.೬.೭ ಚಿತ್ರಗಾರಿಕೆ
೩.೬.೮ ಹೂಗಾರಿಕೆ
೩.೬.೯ ಮಡಿವಾಳಿಕೆ
೩.೬.೧೦ ಕ್ಷೌರಿಕ ಕಸಬು
೩.೬.೧೧ ಬಯಲು ಕಮ್ಮಾರಿಕೆ
೩.೬.೧೨ ಕಲ್ಲುಕುಟಿಗ ಕಸಬು
೩.೬.೧೩ ಚಮ್ಮಾರಿಕೆ
೩.೬.೧೪ ಶಿಲ್ಪಗಾರಿಕೆ
೩.೬.೧೫ ನಾಲಗಾರಿಕೆ

ಅಧ್ಯಾಯ ಮೂರು

# ಪಾರಂಪರಿಕ ಕಸಬುಗಳು

ಅಲೆಮಾರಿಯಾಗಿದ್ದ ಆದಿಮಾನವನು 'ಬದುಕಿಗಾಗಿ ಬೇಟೆ' ಹೋರಾಟ ಮುಂದುವರೆಸಿದನು. ತಮಗೆ ಬೇಕಾದ ಬೇಟೆ ಲಭ್ಯವಿಲ್ಲದಿದ್ದಾಗ ಆಹಾರ ಸಂಗ್ರಹಣೆಯ ತಂತ್ರ ರೂಪಿಸಿಕೊಂಡನು. ಮುಂದೆ ಪಶುಪಾಲನೆಯಲ್ಲಿ ನೆಮ್ಮದಿ ಕಂಡುಕೊಂಡನು. ಪಶುಪಾಲನೆಯ ಮುಂದಿನ ಹಂತವೇ ಕೃಷಿ. ಇಲ್ಲಿ ಕೆಲವರು ಪಶುಪಾಲಕರಾದರೆ ಇನ್ನೂ ಕೆಲವರು ಕೃಷಿಕರಾದರು. ಇಲ್ಲಿಗೆ ಅಲೆಮಾರಿತನವು ಸ್ಥಗಿತಗೊಂಡಿತು. ಅವನು ನೆಲೆಯೂರಿದ ಸ್ಥಳಗಳೇ ಊರುಗಳಾದವು. ಈ ಊರುಗಳು ಸ್ವಯಂ ಪರಿಪೂರ್ಣ ಘಟಕವಾಗಲು, ಕೃಷಿಗೆ ಬೇಕಾದ ಎಲ್ಲ ಪೂರಕ ಸಾಧನಗಳನ್ನು ಪೂರೈಸಲು ಕುಶಲಕರ್ಮಿಗಳು ಬೇಕಾದರು. ಅವರ ಕುಟುಂಬ ಆ ಕಸಬಿನಲ್ಲಿ ಕುಶಲತೆಯನ್ನು ಪಡೆಯತೊಡಗಿದ್ದರಿಂದ, ಶ್ರಮ ವಿಭಜನೆಗೊಂಡು ಕಾಲಾನಂತರದಲ್ಲಿ ಆ ಕಸಬುಗಳೇ ಕುಲಗಳಾಗಿ ರೂಪಗೊಂಡವು.

ಕೆಲವು ಸಮುದಾಯದವರು ವಂಶಪಾರಂಪರ್ಯವಾಗಿ ಮುಂದುವರಿಸಿಕೊಂಡು ಬಂದ ಆನುವಂಶಿಕ ವೃತ್ತಿಗಳನ್ನೇ ಪಾರಂಪರಿಕ ಕಸಬುಗಳು ಎನ್ನಬಹುದು. ಇಂತಹ ಪಾರಂಪರಿಕ ಕಸಬುಗಳಿಗೆ ಒಂದು ಪರಂಪರೆಯಿದೆಯೇ ಹೊರತು ಯಾವುದೇ ವಿಧವಾದ ತರಬೇತಿಯಿಲ್ಲ. ಆದಾಗ್ಯೂ ಜನಪದರಲ್ಲಿ ಹುದುಗಿಕೊಂಡಿರುವ ಪಾರಂಪರಿಕ ಕಸಬುಗಳು ಸದಾ ಬದಲಾದ ರೂಪದಲ್ಲಿ ಪ್ರವಹಿಸುತ್ತಲೇ ಇರುತ್ತವೆ! ಚಲನಶೀಲ ಸಮಾಜದಲ್ಲಿ ಹಿಂದಿನ ನಂಬಿಕೆಗಳು, ಪದ್ಧತಿಗಳು, ಆಚರಣೆಗಳು, ಅಭಿರುಚಿಗಳು ಬದಲಾವಣೆಗೊಂಡು ಕುಲಕಸಬುಗಳು ಇಂದು ಪರ್ಯಾಯ ಕಸಬುಗಳನ್ನು ಹುಡುಕಿಕೊಂಡಿವೆ ಇಲ್ಲವೇ ಅವುಗಳನ್ನು ಕೈಬಿಟ್ಟಿವೆ! ಆರ್ಥಿಕ ಸ್ವಾವಲಂಬನೆಗಾಗಿ ಕಸಬುದಾರರಲ್ಲದವರೂ ಈ ಕಸಬುಗಳನ್ನು ಕೈಗೊಂಡು ಮೂಲ ಕಸಬುದಾರರಿಗೆ ಸಾಕಷ್ಟು ಪೈಪೋಟಿ ನೀಡುತ್ತಿರುವುದರಿಂದಲೂ ಕೆಲವು ಕಸಬುದಾರರ ಸ್ಥಿತಿ ಅಧೋಗತಿಗಿಳಿದಿದೆ.

ನಾಗಾಲೋಟದಿಂದ ಕ್ರಮಿಸುತ್ತಿರುವ ಜ'ಗತ್ತಿನ'ವ್ಯಾಪಕ ಜ್ಞಾನ, ತಂತ್ರಜ್ಞಾನ ಮತ್ತು ವಿಜ್ಞಾನಗಳ ಶೋಧನೆ ಮತ್ತು ಚಿಂತನೆಗಳನ್ನು ಮುಂದಿನ ಪರಂಪರೆಗೆ ಹೊತ್ತೊಯ್ಯಬೇಕಾಗಿದೆ. ಬಡವರ, ಹಿಂದುಳಿದವರ, ಬುಡಕಟ್ಟು ಜನಾಂಗಗಳ ಅಭಿವೃದ್ಧಿಗೆ

ಕೈಗೊಳ್ಳಲಾದ ಯೋಜನೆಗಳ ಫಲಗಳೆಲ್ಲವೂ ದೂರದಲ್ಲಿ ನಿಂತು ಅವರನ್ನು ಅಣಕಿಸುತ್ತಿವೆ. ಪರಂಪರಾಗತವಾಗಿ ರೂಢಿಸಿಕೊಂಡು ಬಂದಿದ್ದ ಕುಲಕಸಬುಗಳು ನಿಧಾನವಾಗಿ ಮರೆಯಾಗುತ್ತಿವೆ.

ಬ್ರಿಟೀಷರ ಆಂಗ್ಲ ಶಿಕ್ಷಣವು ಭಾರತೀಯರಲ್ಲಿ ವೈಚಾರಿಕತೆ-ವೈಜ್ಞಾನಿಕತೆ, ವಿಜ್ಞಾನ-ತಂತ್ರಜ್ಞಾನ, ಕೈಗಾರಿಕೀಕರಣ-ನಗರೀಕರಣ, ಜಾಗತೀಕರಣ-ಸಾಂಸ್ಕೃತೀಕರಣ, ಆಧುನೀಕರಣ-ಪಾಶ್ಚಾತ್ಯೀಕರಣದ ಪ್ರಭಾವ ಬೀರಿತು. ಇದರಿಂದ ಭಾರತದ ಜಾತಿ ವ್ಯವಸ್ಥೆ ಅಲುಗಾಡತೊಡಗಿದ್ದಲ್ಲದೇ ಪರಿವರ್ತನೀಯ ಹಾದಿ ಹಿಡಿಯಿತೆನ್ನಬಹುದು. ಇದಕ್ಕೆ ಪುಷ್ಟಿ ನೀಡಿದಂತೆ ಸ್ವಾತಂತ್ರ್ಯ ನಂತರ ನಮ್ಮ ಸಂವಿಧಾನವೂ ಸರ್ವತಂತ್ರ ಸ್ವತಂತ್ರ ಪ್ರಜಾಸತ್ತಾತ್ಮಕ ಗಣತಣತ್ರವೆಂದು ಘೋಷಿಸಿತು. ಭಾರತವನ್ನು ವರ್ಗರಹಿತ ಮತ್ತು ಜಾತ್ಯಾತೀತ ಸಮಾಜವೆಂದು ಘೋಷಿಸುವ ಸಾಂವಿಧಾನಿಕ ಸವಲತ್ತುಗಳನ್ನು ದೊರಕಿಸಿದ ಪ್ರಯುಕ್ತ ಜಾತಿವ್ಯವಸ್ಥೆಯಲ್ಲಿ ಹಲವಾರು ಬದಲಾವಣೆಗಳು ಹೊಸತನವನ್ನು ಸೃಷ್ಟಿಸತೊಡಗಿವೆ! ಒಟ್ಟಿನಲ್ಲಿ ಜಾತಿಯು ಸಾಮಾಜಿಕ ನಿಯಂತ್ರಣದಿಂದ ವಿಮೋಚನೆಗೊಳ್ಳುತ್ತಾ ಕುಲದಿಂದ ಪರಂಪರೆಯತ್ತ ಹೊರಳುತ್ತಿದೆ.

**೩.೧ ಪರಂಪರೆಯ ಉಗಮ :**

ಅನೇಕ ಮಹಾಪುರುಷರ, ಋಷಿಮುನಿಗಳ, ಕ್ರಾಂತಿಪುರುಷರ, ತತ್ವಜ್ಞಾನಿಗಳ ಜೀವನಾದರ್ಶಗಳು ಹಾಗೂ ತತ್ವಗಳೇ ಭಾರತದ ಪರಂಪರೆಯಾಗಿ ರೂಪುಗೊಂಡಿದೆ ಎನ್ನಬಹುದು. ವೈವಿಧ್ಯಮಯ ಪರಂಪರೆಗಳನ್ನು ಹೊಂದಿರುವ ನಮ್ಮ ದೇಶವು ಒಂದು 'ವೈವಿಧ್ಯಮಯ ಪುಟ್ಟ ಪ್ರಪಂಚ'(The Epitom of the World) ಎಂಬುದಕ್ಕೆ ಜೀವಂತ ಸಾಕ್ಷಿಯಾಗಿದೆ.

**'ಪರಂಪರೆ' – ಮೂಲ ಮತ್ತು ಅರ್ಥ :**

ವೇದಗಳು, ಉಪನಿಷತ್‌ಗಳು, ಭಗವದ್ಗೀತೆ, ಸ್ಮೃತಿಗಳು, ಪುರುಷಾರ್ಥಗಳು ಹಿಂದೂ ಪರಂಪರೆಯ ಆಧಾರಸ್ತಂಭಗಳೆನಿಸಿವೆ! ಮೌಲ್ಯ-ಆದರ್ಶ, ನಡೆ-ನುಡಿ, ಆಚಾರ-ವಿಚಾರ, ರೀತಿ-ನೀತಿಗಳು, ರೂಢಿ-ಸಂಪ್ರದಾಯಗಳನ್ನು ಗಳಿಸಿಕೊಂಡು, ಉಳಿಸಿಕೊಂಡು, ಬೆಳೆಸಿಕೊಂಡು ಸಾಗಿಬಂದಿರುವುದೇ 'ಪರಂಪರೆ' ಎನ್ನಬಹುದು. ಇದು ಬದುಕಿನ ತತ್ವ (Philosophy of Life) ಹಾಗೂ ಜೀವನ ಪಥ (Way of Life) ಎನಿಸಿಕೊಂಡಿವೆ.

ಇಂಗ್ಲೀಷ್ ಹಾಗೂ ಫ್ರೆಂಚ್ ಭಾಷೆಯಲ್ಲಿ – Tradition, ಇಟ್ಯಾಲಿಯನ್ ಭಾಷೆಯಲ್ಲಿ – Tradizione, ಸ್ಪ್ಯಾನಿಷ್ ಭಾಷೆಯಲ್ಲಿ – Tradicion ಎಂಬ ಪದಗಳಿವೆ. Tradition ಎಂಬ ಪದವು ಲ್ಯಾಟಿನ್ ಭಾಷೆಯ Tradere (Handing over- ಕೊಡು, ಹಸ್ತಾಂತರಿಸು) delever ಪದದ ನಿಷ್ಪತ್ತಿಯಾಗಿದೆ. ಈ ಪದವು ಗ್ರೀಕ್‌ನ Paradosisಗೆ ಸಂವಾದಿಯಾಗಿ ಬಳಸಲಾಗುತ್ತದೆ. ಇದರ ಅರ್ಥ ಒಟ್ಟಾರೆ ಹೀಗಿದೆ – Tradition and Paradosis ಪದಗಳನ್ನು ಸೂಚ್ಯವಾಗಿ 'ಬೋಧಿಸು' ಅಥವಾ 'ಸೂಚಿಸು' ಎಂಬರ್ಥದಲ್ಲಿ ಬಳಸಬಹುದಾಗಿದೆ. ಲ್ಯಾಟಿನ್ ಮತ್ತು ಗ್ರೀಕ್ ಧರ್ಮಶಾಸ್ತ್ರಜ್ಞರು ಈ ಎರಡು ಪದಗಳನ್ನು 'ಧರ್ಮ ಬೋಧೆ' ಎಂಬರ್ಥದಲ್ಲಿ ಪ್ರಯೋಗಿಸುತ್ತಾರೆ. ಒಟ್ಟಿನಲ್ಲಿ ಈಗ Tradition - A part of culture that is passed from person to person or generation to generation ಎಂದು ಹೇಳಬಹುದಾಗಿದೆ. ಅಂದರೆ... ಒಬ್ಬ ವ್ಯಕ್ತಿಯಿಂದ ವ್ಯಕ್ತಿಗೆ, ಜನಾಂಗದಿಂದ ಜನಾಂಗಕ್ಕೆ ವರ್ಗಾಯಿಸಲ್ಪಡುವ ಸಂಸ್ಕೃತಿಯ ಒಂದು ಭಾಗವೇ ಪರಂಪರೆ. ಇದರಲ್ಲಿ ನಂಬಿಕೆ ಮತ್ತು ಆಚರಣೆಗಳ ಪಾತ್ರ ಪ್ರಮುಖವಾಗಿರುತ್ತದೆ. ನಂಬಿಕೆಗೆ ಅರ್ಹ ಎಂಬ ಕಾರಣಕ್ಕಾಗಿಯೇ ಪರಂಪರೆಯು ಮೌಲ್ಯಯುತವಾಗಿರುತ್ತದೆ.

ಪರಂಪರೆಯಲ್ಲಿ ಮುಖ್ಯವಾಗಿ ಎರಡು ವಿಧಗಳಿವೆ. ಒಂದು; ಶಾಬ್ದಿಕ. ಇದರಲ್ಲಿ ಶ್ಲೋಕಗಳು, ಗಾದೆಗಳು, ಕಥೆಗಳು, ಹಾಡುಗಳು, ಕೆಲವು ಸಂಪ್ರದಾಯದ ನಿಯಮಗಳು, ವ್ಯಾಖ್ಯಾನಗಳು, ಪುರಾಣಗಳು, ಮಹಾಕಾವ್ಯಗಳು, ವೇದಗಳು, ಉಪನಿಷತ್ತುಗಳು, ಧರ್ಮಗ್ರಂಥಗಳು ಮೌಖಿಕ ಹಾಗೂ ಲಿಖಿತ ಎರಡೂ ರೀತಿಯಲ್ಲಿ ಇರಲೂ ಬಹುದಾಗಿದೆ. ಎರಡು; ಅಶಾಬ್ದಿಕ. ಇದರಲ್ಲಿ ಮೂರ್ತಿಶಿಲ್ಪಗಳು, ಸ್ಮಾರಕಗಳು, ಸಾಂಕೇತಿಕ ವಸ್ತುಗಳು, ಪಾರಂಪರಿಕ ಕಲೆಗಳು, ಕಸಬುಗಳು, ಸಂಪ್ರದಾಯಗಳು, ಹಾವಭಾವಗಳು, ಸ್ಥಳಗಳನ್ನು ಒಳಗೊಂಡಿರುತ್ತದೆ. ಈ ಅಶಾಬ್ದಿಕ ಪರಂಪರೆಯು ಶಾಬ್ದಿಕ ಪರಂಪರೆಯನ್ನು ಹೊರತುಪಡಿಸಿ ಇರುವುದಿಲ್ಲ. ಏಕೆಂದರೆ ಅವುಗಳ ವಿವರಣೆಗಳು ಅಗತ್ಯವಾಗಿ ಬೇಕಾಗುತ್ತವೆ. ಆದರೂ ಅಶಾಬ್ದಿಕ ಪರಂಪರೆಗಳು ಪೂರ್ಣ ಪ್ರಮಾಣದಲ್ಲಿ ಅವುಗಳನ್ನು ಆವರಿಸಿಕೊಳ್ಳಲಾರವು. ಜಾನಪದ ಅಧ್ಯಯನದಲ್ಲಿ 'Popular Antiquity' (ಜನಪ್ರಿಯ ಪಳೆಯುಳಿಕೆಗಳು) ಎನ್ನುವ ಪದವನ್ನು ಬಳಸುವುದರೊಂದಿಗೆ 'Popular Tradition' (ಜನಪ್ರಿಯ ಪರಂಪರೆ) ಎನ್ನುವ ಪದವನ್ನು ಬಳಸುತ್ತೇವೆ.

**'ಪರಂಪರೆ' ಬಗೆಗಿನ ವ್ಯಾಖ್ಯಾನಗಳು :**

ಪರಂಪರೆಯನ್ನು ಕುರಿತು ಅನೇಕಾನೇಕ ಚಿಂತಕರು ತಮ್ಮದೇ ಆದ ದೃಷ್ಟಿಕೋನದಲ್ಲಿ ವ್ಯಾಖ್ಯಾನಿಸಿದ್ದಾರೆ. ಅವುಗಳಲ್ಲಿ ಪ್ರಮುಖ ತತ್ವಜ್ಞಾನಿಗಳ ವ್ಯಾಖ್ಯಾನಗಳು ಹೀಗಿವೆ :

**"ಡಾ. ಎಸ್. ರಾಧಾಕೃಷ್ಣನ್**ರವರ ಅಭಿಮತದಂತೆ : ವರ್ಣಾಶ್ರಮ ಪದ್ಧತಿಯು ವಿಶ್ವಕ್ಕೆ ಕೊಡಮಾಡಿದ ಶ್ರೇಷ್ಠ ಕೊಡುಗೆ. ವ್ಯಕ್ತಿಯ ನಡೆ-ನುಡಿ, ಆಚಾರ-ವಿಚಾರ, ರೀತಿ-ನೀತಿಗಳು, ರೂಢಿ-ಸಂಪ್ರದಾಯಗಳ ಸಂಕೇತವೇ ಪರಂಪರೆ.

According to **Edwin Siindney** and **Hartland** : Tradition is always being created a new. and That Traditions modern origion whrere ever form or as much with in our province as ancient once.

According to **Newway** : Tradition means a system of Myths, Rituals, Feasts, Sacred Customs, Games, Songs, Tales existent is such presume that valumes would be required to contain the lore of each Saparate Tribe." [೧]

**ಕೇಂಬ್ರಿಡ್ಜ್ (ತೃತಿಯ ಆವೃತ್ತಿ)ಅಡ್ವಾನ್ಸ್ಡ್ ಲರ್ನರ್ಸ್ ಡಿಕ್ಷನರಿಯು** ಪರಂಪರೆಯನ್ನು ಹೀಗೆ ಅರ್ಥೈಸುತ್ತದೆ.

**Tradition** – ೧) A belief, principle or way of acting which people in a particular society or group have continued to follow for a long time, or all of these beliefs, etc. in a particular society or group.

೨) A part of culture that is passed from person to person or generation to generation, possibly differing in detail from family to family, such as the way to celebrate holidays.

೩) A commonly held system.

ಒಟ್ಟಾರೆ ಅಲೆಮಾರಿ ಬದುಕಿನಿಂದ ಸ್ಥಿರ ಬದುಕನ್ನು ಆಯ್ಕೆಮಾಡಿಕೊಂಡಂದಿನಿಂದಲೇ ಮಾನವನ ಬದುಕಿಗೊಂದು ನೆಲೆ ಸಿಕ್ಕು, ಚತುರ್ವರ್ಣಗಳ ಸಮಾಜವೊಂದು ರೂಪುಗೊಂಡಿತು. ಈ ವರ್ಣಗಳೇ ಮುಂದೆ ಸಮುದಾಯದ ರೂಪ ಪಡೆದವು. ಸಮುದಾಯಗಳು ಒಂದು ನಿರ್ದಿಷ್ಟ ಉದ್ದೇಶದ ಕಾರಣಕ್ಕಾಗಿ ಒಂದು ಗುಂಪಿಗೆ ಸೇರುತ್ತವೆ. ಭಾರತದ ಸಮುದಾಯ ವ್ಯವಸ್ಥೆಯು ಮೊದಲು ವೃತ್ತಿಗೆ ಸಂಬಂಧಿಸಿದಂತೆ ಆರಂಭವಾಯಿತು. ಹೀಗೆ ವೃತ್ತಿ(ಕಸಬು), ನಂಬಿಕೆ, ಕುಲ, ಭಕ್ತಿ, ಜೀವನ ವಿಧಾನ, ಆರ್ಥಿಕ ಸ್ಥಿತಿಗತಿ ಇತ್ಯಾದಿ ಲಕ್ಷಣಗಳ ಕಾರಣಕ್ಕೆ ಒಂದಾದ ಜನರನ್ನು ಒಂದು ಸಮುದಾಯ ಎನ್ನಬಹುದು. ಒಂದು ಸಮುದಾಯದಲ್ಲಿನ ಪೀಳಿಗೆಯವರು ಮತ್ತೊಂದು ಪೀಳಿಗೆಯವರಿಗೆ ಬಳುವಳಿಯಾಗಿ ನೀಡುವ ಆಸ್ತಿಯೇ ಪರಂಪರೆ. ಇದು ವಿವಿಧ ತಲೆಮಾರುಗಳ ನಡುವೆ ಸಂಸ್ಕೃತಿಯನ್ನು ಬೆಸೆಯುವ ಜೀವಂತ ಸೇತುವೆಯಾಗಿದೆ. *'ಸಮುದಾಯದ ವ್ಯವಸ್ಥೆಯಲ್ಲಿನ ಗತಕಾಲದ ಆಲೋಚನೆಯನ್ನು ವರ್ತಮಾನದ ಬದುಕಿನ ಜೊತೆಗೆ ಅರ್ಥಪೂರ್ಣವಾಗಿ ಜೋಡಿಸುವ ಮೂಲಕ ಸಾಂಸ್ಕೃತಿಕ ಬದಲಾವಣೆಗೆ ಕಾರಣವಾಗುವ ಪ್ರಗತಿಯ ಹಂತವೇ ಪರಂಪರೆ ಎನ್ನಬಹುದು.'*

ಒಟ್ಟಿನಲ್ಲಿ ಪಾರಂಪರಿಕ ಎನ್ನುವ ಪದದ ಮೂಲವೇ ಪರಂಪರೆ. ಅದು ಸಮಗ್ರತೆಯನ್ನು ಸೂಚಿಸುತ್ತಾದರೂ ಕೆಲವೊಮ್ಮೆ ಅದು ವೈಯಕ್ತಿಕವೂ ಆಗಬಹುದು. ಪರಂಪರೆಯ ಹೊರಗೆ ನಿಂತು ನೋಡುವಾಗ ಆ ಪಾರಂಪರಿಕತೆ ಇಷ್ಟವೂ ಆಗಬಹದು ಇಲ್ಲವೇ ಅನಿಷ್ಟವೂ ಆಗಬಹದು. ಉದಾಹರಣೆಗೆ ಕಸಬುದಾರರು ಉತ್ಪಾದಕರೂ ಆಗಿರಬಹುದು. ಅವರಲ್ಲಿ ನಮಗೆ ಒಂದು ಬೇಕಿಲ್ಲ ಎನ್ನುವಂತಿಲ್ಲ; ಏಕೆಂದರೆ ಪಾರಂಪರಿಕತೆಯಲ್ಲಿ ಇಬ್ಬರೂ ಇರುತ್ತಾರೆ. ಹೀಗೆ ಸಮಾಜ ಎನ್ನುವುದು ಎಲ್ಲಿಯವರೆಗೆ ಇರುತ್ತದೆಯೋ ಪರಂಪರೆ; ಪಾರಂಪರಿಕತೆ ಅಲ್ಲಿಯವರೆಗೂ ಇರುತ್ತದೆ.

"ಪರಂಪರೆಯಿಂದ ಬಂದ ಜ್ಞಾನ, ವಿಕೇಂದ್ರಿತ ವ್ಯವಸ್ಥೆ, ಸಹಕಾರ-ಸಹಯೋಗಗಳ ಮಾನವೀಯ ದೃಷ್ಟಿಯೇ ಗ್ರಾಮಗಳನ್ನು ಸ್ವಾವಲಂಬಿಯನ್ನಾಗಿ ಮಾಡಲು ಶಕ್ತ"[1] ಇದು ವಿನೋಬಾ ಬಾವೆಯವರ ಗ್ರಾಮೋದ್ಯೋಗಗಳಿಂದ ಗ್ರಾಮಸ್ವರಾಜ್ಯವಾಗುವ ಕನಸಾಗಿತ್ತು.

'ಕಾಯಕವೇ ಕೈಲಾಸ'ವೆಂದು ಸಾರಿದ ಬಸವಣ್ಣನವರು 'ಕಾಯಕದ ಆಯ್ಕೆಗೆ ಜಾತಿ, ವರ್ಣ ಪ್ರಮುಖವಾಗಿರದೇ ವ್ಯಕ್ತಿಯ ಆಸಕ್ತಿ ಮತ್ತು ಅಭಿರುಚಿಗಳು ಪ್ರಮುಖವಾಗಿರುತ್ತವೆ.

ಯಾವ ವೃತ್ತಿಯೂ ಪವಿತ್ರವಲ್ಲ ಮತ್ತು ಯಾವುದೂ ಅಪವಿತ್ರವಲ್ಲ; ಕೈಲಾಸಕ್ಕಿಂತಲೂ ಕಾಯಕವೇ ಮುಖ್ಯ' ಎಂಬ ನಿಲುವು ಇಂದಿಗೂ ಪ್ರಸ್ತುತವೆನಿಸಿದೆ.

**೩.೨ ಪಾರಂಪರಿಕ ಕಸಬುಗಳ ಉಗಮ :**

ಪಾರಂಪರಾಗತವಾಗಿ ಮುಂದುವರೆಸಿಕೊಂಡು ಬರುವಂಥ ವೃತ್ತಿಗಳನ್ನು ಗ್ರಾಮೀಣ ವೃತ್ತಿಗಳು, ಜಾನಪದ ವೃತ್ತಿಗಳು, ಜಾನಪದ ಕಸಬುಗಳು ಎನ್ನುತ್ತಾರೆ. ಇನ್ನೂ ಆಳಕ್ಕಿಳಿದಂತೆ ಅವುಗಳನ್ನು ಕುಲ ವೃತ್ತಿಗಳು, ಕುಲಕಸಬುಗಳು, ಪಾರಂಪರಿಕ ಕಸಬುಗಳು ಎನ್ನುತ್ತಾರೆ. ಇವು ಶ್ರಮ ಸಂಸ್ಕೃತಿಯ ಪ್ರತೀಕವಾಗಿದ್ದು, ಇಲ್ಲಿ ಮಾನವ(ಕೆಲವು ಕಸಬುಗಳಲ್ಲಿ ಪ್ರಾಣಿಗಳ) ಶ್ರಮವೇ ಮುಖ್ಯವಾಗಿರುತ್ತದೆ. ಅನಿವಾರ್ಯತೆ ಇದ್ದಲ್ಲಿ ಮಾನವ ( ಕೆಲವು ಕಸಬುಗಳಲ್ಲಿ ಪ್ರಾಣಿಗಳ) ಚಾಲಿತ ಒಂದೆರಡು ಸರಳ ಯಂತ್ರಗಳನ್ನು ರೂಪಿಸಿಕೊಂಡಿರುವುದರಿಂದ ಇವುಗಳನ್ನು ಕೈಕಸಬುಗಳೂ ಎನ್ನುತ್ತಾರೆ. ಬಹಳಷ್ಟು ಕಸಬುಗಳಲ್ಲಿ ಇಡೀ ಕುಟುಂಬದ ಬೇರೆ ಬೇರೆ ವಯೋಮಾನದವರು ಭಾಗಿಯಾಗುವುದರಿಂದ ಇವುಗಳನ್ನು ಕುಟುಂಬ ವೃತ್ತಿಗಳು ಎಂದೂ ಕರೆಯುತ್ತಾರೆ.

**ಉಪಕಸಬುಗಳು :** "ಕಸಬುಗಳೂ ಕೂಡಾ ಹಾಗೆಯೇ ಮುಂದುವರೆದು ಗ್ರಾಮೀಣ ಪ್ರದೇಶದಲ್ಲಿ ಪ್ರಧಾನವೃತ್ತಿ ಅವಲಂಬಿತ ಅನೇಕ ಉಪವೃತ್ತಿ ಅಥವಾ ಉಪಕಸಬು ಪರಂಪರೆಗಳು ಬೆಳೆದು ಬಂದವು. ನಿತ್ಯ ಬಳಕೆಯ ಮಣ್ಣಿನ ಸಾಧನಗಳು, ತಟ್ಟೆ, ಹೂದಾನಿ, ಹೆಂಚು, ಕುಂಡ, ಹೂಜಿ, ಪ್ರಾಣಿ–ಪಕ್ಷಿ–ಮಾನವನ ಪ್ರತಿಮೆಗಳ ತಯಾರಿಕೆಗಳು ಕುಂಬಾರಿಕೆಯ ಉಪಕಸಬುಗಳಾಗಿವೆ. ಶಿಲಾಕೆತ್ತನೆ, ಲೋಹ ಕೆತ್ತನೆ, ಹಸ್ತಿ ದಂತ ಕೆತ್ತನೆ, ಕೊಂಬು ಅಸ್ತಿ ಕೆತ್ತನೆ, ಲೋಹ ಎರಕ ಕಲೆ, ಕಂಚು ಮೂರ್ತಿ ಶಿಲ್ಪಕಲೆ, ಲೋಹದ ತಗಡು ಶಿಲ್ಪ ಮುಂತಾದ ಉಪವೃತ್ತಿಗಳು ಶಿಲ್ಪಗಾರಿಕೆ ಮತ್ತು ಕುಂಬಾರಿಕೆಯ ಉಪವೃತ್ತಿ ವಿಸ್ತರಣೆಗಳಾಗಿವೆ. ಕೈಮಗ್ಗದ ವಸ್ತುಗಳು, ಕಸೂತಿ ವಸ್ತ್ರ, ಕಲೆ ಹೊದಿಕೆ ವಸ್ತ್ರ, ಕಲೆ ಬಟ್ಟೆ ಕನ್ನಡಿ, ಮತ್ತು ಕಸೂತಿ, ಹಾಸು ಹಾಗೂ ಪ್ರಾರ್ಥನಾ ಹಾಸುಕಲೆ ಮುಂತಾದವು ನೇಕಾರಿಕೆಯ ಪ್ರಮುಖ ಉಪವೃತ್ತಿಗಳ ವಿಸ್ತರಣೆಗಳಾಗಿವೆ. ಮರದ ಕೆತ್ತನೆ, ಮರಶಿಲ್ಪ, ಹುದುಗು ಶಿಲ್ಪ, ಅರಗು ಲೇಪಿತ ಕುಶಲವಸ್ತು, ಗೊಂಬೆ ಮತ್ತು ಆಟಿಕೆ ವಸ್ತು, ಬಿದಿರು ಹೆಣಿಗೆ, ಹುಲ್ಲಿನ ಹಾಸಿಗೆ, ಬುಟ್ಟಿ, ಬೆತ್ತದ ಖುರ್ಚಿ ಮುಂತಾದ ಉಪವೃತ್ತಿಗಳು ಬಡಗಿ ವೃತ್ತಿಯ ಉಪಕಸಬುಗಳ ವಿಸ್ತರಣೆಯಾಗಿವೆ."[೩] ತಮ್ಮಲ್ಲಿ ಹೆಪ್ಪುಗಟ್ಟಿದ್ದ ಪಾರಂಪರಿಕ ಜ್ಞಾನವನ್ನು ಅನುಕರಣೆಯ ಮೂಲಕ ತಲೆಮಾರಿನಿಂದ ತಲೆಮಾರಿಗೆ ಸಹಜವಾಗಿಯೇ

ವರ್ಗಾಯಿಸುತ್ತಾ ಬಂದರು. ಹೀಗೆ ವರ್ಗಾಯಿತಗೊಂಡ ವೃತ್ತಿಜ್ಞಾನವು ಸಮುದಾಯದ ಒಟ್ಟು ಹಿತಾಸಕ್ತಿಯನ್ನು ಕಾಪಾಡುವಲ್ಲಿ ಸಹಕಾರಿಯಾಗಿದ್ದವು. ಇಲ್ಲಿ ಆರ್ಥಿಕ ಲಾಭಕ್ಕಿಂತ ಭಾವನಾತ್ಮಕ ಸಂಬಂಧದಲ್ಲಿ ಅಪಾರ ನಂಬಿಕೆ ಇಟ್ಟಿದ್ದ ಕಸಬುದಾರರು "ಊರವರೆಲ್ಲರ ಮನೆಯ ಒಲೆ ಉರಿಯಬೇಕು" ಎನ್ನುವ ಮಾನವೀಯ ಕಳಕಳಿಯ ನಿಲುವು ಹೊಂದಿದ್ದರು.



**ಮಹಿಳಾ ಕಸಬುಗಳು** : ಜನಪದರ ಕಸಬುಗಳ ಪರಂಪರೆಯಲ್ಲಿ ಮಹಿಳೆಯರ ಸಹಭಾಗಿತ್ವವು ತುಂಬಾ ಪರಿಣಾಮಕಾರಿಯಾಗಿದೆ. ಪಾರಂಪರಿಕ ಕಸಬುಗಳ ಸಂಸ್ಕೃತಿಯ ಹಿಂದೆ ಸ್ತ್ರೀಕುಲದ ಪರಿಶ್ರಮ, ಸಲಹೆ, ಸಹಾಯ, ಅನುಭವ, ನೈಪುಣ್ಯತೆಗಳ ಸಹಕಾರವಿಲ್ಲದ್ದನ್ನು ಊಹಿಸಿಕೊಳ್ಳುವುದಕ್ಕೂ ಸಾಧ್ಯವಿಲ್ಲ! ಹಾಗೆ ನೋಡಿದರೆ ಕೆಲವು ಕಸಬುಗಳು ಮಹಿಳೆಯರಿಗಾಗಿಯೇ ಉಗಮಗೊಂಡಂತೆ ಈಗಲೂ ಮುಂದುವರೆದುಕೊಂಡು ಬರತೊಡಗಿವೆ. ಕಸೂತಿ, ಹಚ್ಚೆ ಹಾಕುವುದು, ಬುಟ್ಟಿ ತಯಾರಿಕೆ, ಚಾಪೆ ಹೆಣಿಗೆ, ಕೂದಲು ತುಂಬುವುದು, ಹಣಿಗಿ ಕೆಚ್ಚುವುದು, ಲಡಿ ತೋಡುವುದು, ಸುಣ್ಣದ ಕಲ್ಲುಗಳನ್ನು ತುಂಡರಿಸುವುದು, ಕೌದಿ ಹೊಲಿಯುವುದು, ರಂಗೋಲಿ ಮುಂತಾದ ವೃತ್ತಿಗಳ ಜೊತೆಗೆ ಮನೆಯೊಳಗಿನ ಕೆಲಸಗಳಿಗೂ ಮಹಿಳೆ ಸೈ ಎನಿಸಿದ್ದಾಳೆ.

ಕೈಗಾರಿಕಾ ಕ್ರಾಂತಿಗೂ ಮುನ್ನ ನಮ್ಮ ಸಂಪ್ರದಾಯಸ್ಥ ಸಮಾಜದಲ್ಲಿ ಈ ಪಾರಂಪರಿಕ ಕಸಬುಗಳೇ ಪ್ರಮುಖ ಪಾತ್ರವಹಿಸಿದ್ದವು. ಇಲ್ಲಿ ಪಾರಂಪರಿಕ ಅಂಶವು ತುಂಬಾ ಗಮನೀಯವೆನಿಸುತ್ತದೆ. ಆಯಾಯ ಕಸಬಿಗೂ ತನ್ನದೇ ಆದ ಕಚ್ಚಾವಸ್ತುಗಳು, ತಯಾರಿಸಲು ಬಳಲ್ಪಡುವ ಸಲಕರಣೆಗಳು, ವಿಶಿಷ್ಟ ಪರಿಭಾಷೆ, ತಯಾರಿಕಾ ಸೂತ್ರಗಳು, ವಿನ್ಯಾಸಗಳು ಹಾಗೂ ವಿಧಾನಗಳು, ಪರಿಷ್ಕರಣೆ ವಿಧಾನಗಳು, ತರಬೇತಿಗಳು, ಕೆಲಸದ ಹಾಗೂ ಉತ್ಪನ್ನಗೊಂಡ ವಸ್ತುಗಳ ಗುಣಮಟ್ಟ ನಿಷ್ಕರ್ಷಿಸುವ ಮಾನದಂಡಗಳು, ಮುಖ್ಯವಾಗಿ ದೇಸಿ ತಂತ್ರಜ್ಞಾನವೂ ಇರುತ್ತವೆ.

ಜನಪದರ ಕುಲವೃತ್ತಿಗಳು ಅವರ ಪರಂಪರೆಯೂ ಹೌದು. ಕೆಲವು ಸಂದರ್ಭಗಳಲ್ಲಿ ಅನಿವಾರ್ಯ ಕಾರಣಗಳಿಂದ ಕುಲವೃತ್ತಿಯನ್ನು ಬಿಟ್ಟು ಬೇರೆ ವೃತ್ತಿಯನ್ನು ತಮ್ಮ ಕುಟುಂಬದ ವೃತ್ತಿಯಾಗಿ ಸ್ವೀಕರಿಸಬೇಕಾಗುತ್ತದೆ ಮಾತ್ರವಲ್ಲ ಅದನ್ನೇ ಮುಂದುವರೆಸಿಕೊಂಡು ಹೋಗಬೇಕಾಗುತ್ತದೆ. ಇದುವೇ ಮುಂದಿನ ದಿನಮಾನಗಳಲ್ಲಿ

ಅವರ ಪಾರಂಪರಿಕ ಕಸಬು ಆಗುವುದರ ಜೊತೆಗೆ ಜಾನಪದ ವೃತ್ತಿಯೂ ಆಗುತ್ತದೆ. ಹೀಗಾಗಿ ಪಾರಂಪರಿಕ ಕಸಬುಗಳು ಜಾನಪದದ ಅವಿಭಾಜ್ಯ ಅಂಗಗಳೂ ಹೌದು.

"ಪರಂಪರೆಯ ಸರಿಯಾದ ಜ್ಞಾನ ಬಲವಿಲ್ಲದೆ ಜಾನಪದವನ್ನು ಅಧ್ಯಯನ ಮಾಡುವಾಗ ನಾವು ಆ ಜಾನಪದದ ಜೀವವನ್ನು ಬಿಟ್ಟು ಕೇವಲ ಅದರ ಅಸ್ಥಿಪಂಜರವನ್ನು ಮಾತ್ರ ತೂಕ ಮಾಡಿ ಅಳೆದಿರುತ್ತೇವೆ. ಇವತ್ತು ಜಗತ್ತು ಎಷ್ಟೇ ವೇಗವಾಗಿ ಚಲಿಸುತ್ತಿದ್ದರೂ ಜಾನಪದವನ್ನು ತಾಳ್ಮೆಯಿಂದ ಕಾದು ಕಾದು ನಿಂತು ನೋಡಿ ಸರಿಯಾದ ತೀರ್ಮಾನಕ್ಕೆ ಬರಬೇಕಾಗುತ್ತದೆ. ಆಗ ದೇಶೀ ಚಿಂತನೆಯ ದಾರಿಗಳನ್ನು ನಾವೇ ಕಂಡುಕೊಳ್ಳುವುದು ಸಲೀಸಾಗುತ್ತದೆ. ಅಂದರೆ ದೇಶೀ ಚಿಂತನೆಯ ನೆಲೆಗಳು ಇವಿಷ್ಟೇ ಎಂದು ಹೇಳುವುದಾಗಲೀ, ಇಂತಿಂತಹ ಅಂಶಗಳು, ಹಿನ್ನೆಲೆಗಳು ದೇಶೀ ಚಿಂತನೆಯ ಜೀವಕೋಶಗಳಾಗಿರುತ್ತವೆ ಎಂದು ತೀರ್ಮಾನಿಸುವುದು ಕಷ್ಟ. ಆ ಮಾರ್ಗದಲ್ಲಿ ಹುಡುಕುತ್ತಾ ಹೋಗುವುದೇ ದೇಶೀ ಚಿಂತನೆಯನ್ನು ಹುಡುಕಿಕೊಂಡಂತಾಗುತ್ತದೆ."[೨] ಇದೇ ಸ್ಪಷ್ಟ ನಿಲುವನ್ನೇ ಪ್ರೊ. ಡಿ.ಬಿ. ನಾಯಕರವರು ಪ್ರೊ. ಮಂಜುನಾಥ ಬೇವಿನಕಟ್ಟಿಯವರ 'ಜನ ಜಾನಪದ' ಕೃತಿಯ ಮುನ್ನುಡಿಯಲ್ಲಿಯೂ ವಿಶ್ಲೇಷಿಸಿದ್ದಾರೆ.

ಮಾನವ ಸಂಪನ್ಮೂಲಗಳಿಂದ ತುಂಬಿರುವ ಹಳ್ಳಿಗಳ ದೇಶವಾದ ಭಾರತಕ್ಕೆ ಜಾಗತೀಕರಣ, ನಗರೀಕರಣ ಅಥವಾ ಕೈಗಾರಿಕೀಕರಣ ಅನಿವಾರ್ಯವಲ್ಲ! ಗ್ರಾಮೀಣ ಪ್ರದೇಶದ ಜನಸಾಮಾನ್ಯರ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಬದುಕಿನಲ್ಲಿ ಸಮ್ಮಿಳಿತಗೊಂಡಿರುವ ಹಾಗೂ ಎಂತಹ ಕಷ್ಟ ಕಾಲದಲ್ಲೂ ಎದೆಗುಂದದಂತೆ ಬದುಕಲು ಆಸರೆಯಾಗಿರುವ, ಅದರಿಂದಲೇ ಸಮುದಾಯವನ್ನು ಸಂಕಷ್ಟದಿಂದ ದೂರ ಮಾಡಿ, ಪೋಷಿಸುತ್ತಾ ಬಂದಿರುವ ಜ್ಞಾನಪರಂಪರೆಯ ಪ್ರತೀಕವಾಗಿರುವ ಕುಶಲಕಸಬುಗಳು, ಕುಲಕಸಬುಗಳು ಅಥವಾ ಪಾರಂಪರಿಕ ಕಸಬುಗಳನ್ನು ನಾವೀಗ ಅಳವಡಿಸಿಕೊಳ್ಳುವ ಕಾಲ ಪುನಃ ಬಂದಿದೆ!

ದೇಸಿ ಜ್ಞಾನವನ್ನು ಬಳಸಿಕೊಂಡು ಉತ್ಪಾದಿಸಲಾಗುತ್ತಿದ್ದ ಕಸಬುಗಳಿಗೆ ಆಧುನಿಕ ಸ್ಪರ್ಶ ನೀಡಬೇಕು. ಅಂದರೆ ಈ ನಿಟ್ಟಿನಲ್ಲಿ ಕಸಬುದಾರರಿಗೆ ತರಬೇತಿ ಅಥವಾ ಮಾರ್ಗದರ್ಶನ ಅಗತ್ಯವಾಗುತ್ತದೆ. ಉದಾ : ಇಳಕಲ್ಲ ಸೀರೆ ನೇಕಾರನು ಇಂದು ಆಧುನಿಕ ಮಹಿಳೆಯರು ಇಷ್ಟಪಡುವಂತಹ ವಿನ್ಯಾಸದ ಸೀರೆಗಳನ್ನು ನೇಯುತ್ತಿದ್ದಾನೆ. ಹೀಗಾಗಿ ಇಂದಿಗೂ ಇಳಕಲ್ಲ ಸೀರೆಗಳಿಗೆ ತುಂಬಾ ಬೇಡಿಕೆಯಿದೆ. ನೇಕಾರನಿಗೆ ಗ್ರಾಹಕರು ಬಯಸುವ

ವಸ್ತುಗಳ ಶೈಲಿಯ ನಾಡಿಮಿಡಿತ ಅರಿತುಕೊಂಡು ತನ್ನ ಕೌಶಲವನ್ನು ಬಳಸಿಕೊಂಡರೆ ಖಂಡಿತಾ ಆ ಕಸಬಿಗೆ ಸಾವಿಲ್ಲ! ಭಾರವಾದ ಎತ್ತಿನ ಚಕ್ಕಡಿಗಳನ್ನು ತಯಾರಿಸುತ್ತಿದ್ದ ಬಡಿಗನೊಬ್ಬ ಕುಷ್ಟಗಿ ಹಾಗೂ ಬೆಂಚಮಟ್ಟಿ ಗ್ರಾಮದಲ್ಲಿ ಕಟ್ಟಿಗೆ ಹಾಗೂ ಕಬ್ಬಿಣದ ಪೈಪುಗಳನ್ನು ಬಳಸಿಕೊಂಡು ಹಗುರವಾದ ಚಕ್ಕಡಿಗಳನ್ನು ಆಧುನಿಕ ಶೈಲಿಯಲ್ಲಿ ತಯಾರಿಸುತ್ತಿದ್ದಾನೆ. ಅವುಗಳಿಗೆ ಈಗಲೂ ತುಂಬಾ ಬೇಡಿಕೆಯಿದೆ.

ಗಾಂಧೀಜಿಯವರು ಕನಸು ಕಂಡಿದ್ದ ವಿಕೇಂದ್ರೀಕರಣ, ಗ್ರಾಮಸ್ವಾಯತ್ತೆತೆಗಾಗಿ ಜನಪರ ಚಳವಳಿ ರೂಪಿಸುವುದು ಹಾಗೂ ಲೋಕವಿದ್ಯೆಯ ವಾರಸುದಾರರಾದ ಕೃಷಿಕರು, ಕರಕುಶಲಗಾರರು, ಕುಲಕಸಬುದಾರರು ಅಥವಾ ಪಾರಂಪರಿಕ ಕಸಬುದಾರರು, ದಲಿತರು, ಗಿರಿಜನರೆಲ್ಲರೂ ಗಳಿಸಿಕೊಂಡಿರುವ ಲೋಕವಿದ್ಯೆ(SKILLS)ಯ ಮೂಲಕ ಬದುಕಬಹುದು! ಈ ಬದುಕಿನೊಂದಿಗೆ ಮಾನವ ಹಕ್ಕುಗಳ ಹೋರಾಟಗಳು, ನಿರಾಶ್ರಿತರ ಹೋರಾಟಗಳು ಹಾಗೂ ಪರಿಸರ ಚಳವಳಿಗಳ ಶಕ್ತಿಯೂ ಸೇರಿಕೊಂಡರೆ.... ಶ್ರೀಮಂತವರ್ಗ ರಾಜಕೀಯ ಪ್ರಕ್ರಿಯೆಯ ಮೂಲಕ ಪಡೆದುಕೊಂಡಿರುವ ಶಕ್ತಿಗಿಂತ ಹೆಚ್ಚಾಗಿ, ಜಾಗತೀಕರಣಕ್ಕೆ ವಿರುದ್ಧವಾಗಿ ಇಲ್ಲವೇ ಪರ್ಯಾಯವಾಗಿ ಬಹುಮುಖ ಸಮಾಜವನ್ನು ನಿರ್ಮಿಸಿಕೊಂಡು ಜಾ'ಗತೀಕರಣ'ಕ್ಕೊಂದು ಗತಿಕಾಣಿಸಬಹುದಾಗಿದೆ.

**ಕುಲ ಕಸಬುಗಳು ಪಾರಂಪರಿಕ ಕಸಬುಗಳಾಗುತ್ತಿವೆ! :**

ಅದೇ ಕುಟುಂಬದ ಸದಸ್ಯರು ಅಥವಾ ಬೇರೆ ಕುಟುಂಬಗಳ ಸದಸ್ಯರು ಇಡೀ ದಿನ ಅಥವಾ ಬಿಡುವಿನ ವೇಳೆಯಲ್ಲಿ ತೊಡಗಿಕೊಂಡು ಮಾಡುವ ಕಸಬನ್ನು ಗೃಹ(ಗುಡಿ)ಕೈಗಾರಿಕೆ ಎನ್ನಬಹುದು. ಈ ಗುಡಿ ಕೈಗಾರಿಕೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಇಲ್ಲಿಯೂ ಎರಡು ವಿಧದ ಕಸಬುಗಳನ್ನು ಗುರುತಿಸಬಹುದು! ಒಂದು ; 'ಕುಲ ಕಸಬು' ಇನ್ನೊಂದು ; 'ಪಾರಂಪರಿಕ ಕಸಬು' !!

ಅದೇ ಕುಲ ಅಥವಾ ಸಮುದಾಯದವರ ಸಂಸ್ಕೃತಿಯ ಬಳುವಳಿಯಾಗಿರುವ ವೃತ್ತಿಯನ್ನೇ ಅನುಸರಿಸುತ್ತಿದ್ದರೆ ಅದನ್ನು ಕುಲವೃತ್ತಿ ಅಥವಾ ಕುಲಕಸಬು ಎನ್ನುತ್ತಾರೆ. ಉದಾ:- ಬಡಿಗರ ಬಡಿಗತನ, ಕಮ್ಮಾರರ ಕಮ್ಮಾರಿಕೆ, ಕುಂಬಾರರ ಕುಂಬಾರಿಕೆ, ಚಮ್ಮಾರರ ಚಮ್ಮಾರಿಕೆ ಇತ್ಯಾದಿ.

ಒಂದು ವೇಳೆ ತಮ್ಮ ಸಮುದಾಯದವರಿಗಾಗಿಯೇ ಮೀಸಲಾಗಿರುವ ವೃತ್ತಿಯನ್ನು ಹೊರತುಪಡಿಸಿ ಬೇರೆ ವೃತ್ತಿಯನ್ನು ತಲತಲಾಂತರದಿಂದ ಅನುಸ(ಕ)ರಿಸುತ್ತಾ ಬಂದಿದ್ದು, ಅದು ಅವರ ಪರಂಪರೆಯಾಗಿದ್ದರೆ ಆ ವೃತ್ತಿಯನ್ನು ಪಾರಂಪರಿಕ ಕಸಬು ಎನ್ನುತ್ತಾರೆ. ಉದಾ:- ಗದಗ ಜಿಲ್ಲೆಯ ರೋಣ ತಾಲ್ಲೂಕಿನ ರಾಜೂರು ಗ್ರಾಮದ ಅಂಬಿಗರ ಜಾತಿಯವರು ಸುಣ್ಣಗಾರಿಕೆ ಕಸಬನ್ನು ಎರಡ್ಮೂರು ತಲೆಮಾರುಗಳಿಂದ ಮಾಡುತ್ತಿರುವುದು. ಇಲ್ಲಿ ಅಂಬಿಗರ ಕುಲಕಸಬು ದೋಣಿ ನಡೆಸುವುದು. ಆದರೆ ಇವರು ತಮ್ಮ ಕುಲಕಸಬನ್ನು ಬಿಟ್ಟು ಸುಣ್ಣ ತಯಾರಿಸುವುದನ್ನೇ ತಮ್ಮ ಕಸಬನ್ನಾಗಿ ಮುಂದುವರೆಯಿಸಿಕೊಂಡು ಬಂದಿದ್ದಾರೆ. ಅಂತೆಯೇ ಸುಣ್ಣಗಾರಿಕೆ ಅವರ ಪರಂಪರೆಯಾಯಿತು. ಅದೇ ಪರಂಪರೆಯನ್ನು ತಮ್ಮ ಮುಂದಿನ ಪೀಳಿಗೆಯೂ ಮುಂದುವರೆಸಿಕೊಂಡು ಬಂದಿರುವುದರಿಂದ ಇಂದು ಸುಣ್ಣಗಾರಿಕೆ ಅವರ ಪಾರಂಪರಿಕ ಕಸಬಾಗಿದೆ.

ವ್ಯವಸಾಯೇತರ ಉದ್ಯೋಗ ಸೃಷ್ಟಿಯ ಚಳುವಳಿ. ಅಂತರ್ ಸಮುದಾಯದ ಚಲನಶೀಲತೆಯ ಚಳುವಳಿಯೂ ಹೌದು. ಅಂದರೆ ಜಾತಿವೃತ್ತಿಗಳು ಅಥವಾ ಕುಲಕಸಬುಗಳಂತೆ ಇಂದು ಯಾವುದೇ ಕಸಬು ಅಥವಾ ವೃತ್ತಿಗಳು ಅದೇ ಸಮುದಾಯದವರಿಗಂತಲೇ ಮೀಸಲಾಗಿಲ್ಲ! ಹೇಗೆ ಎಂದು ಗಮನಿಸೋಣವಂತೆ. ಉದಾಹರಣೆಗೆ – ಗುಳೇದಗುಡ್ಡದಲ್ಲಿ ಪಾರಂಪರಿಕವಾಗಿ ನೇಕಾರಿಕೆ ಮಾಡುತ್ತಾ ಬಂದಿರುವ ಜಾತಿಗಳಾದ ದೇವಾಂಗರು ಹಾಗೂ ಪದ್ಮಶಾಲಿಗಳಲ್ಲಿ ಈಗಾಗಲೇ ಹೆಚ್ಚಿನವರು ನೇಕಾರಿಕೆಯನ್ನು ತೊರೆದು ವಿದ್ಯುತ್ ಮಗ್ಗಗಳಿಗೆ ವಲಸೆ ಹೋಗಿದ್ದಾರೆ ಅಥವಾ ಇತರೆ ಉದ್ಯೋಗಗಳನ್ನು ಹುಡುಕಿಕೊಂಡಿದ್ದಾರೆ. ಅವರನ್ನು ಬಲವಂತದಿಂದ ಹಿಂದೆ ಕರೆಯುವುದರಲ್ಲಿ ಯಾವ ಅರ್ಥವೂ ಇಲ್ಲ. ಇಳಕಲ್ಲ ಸೀರೆಯನ್ನು ಇಂದು ಕೇವಲ ನೇಕಾರರೇ ನೇಯುತ್ತಿಲ್ಲ, ಬೇರೆ ಬೇರೆ ಜಾತಿ, ಧರ್ಮದವರೂ ನೇಯುತ್ತಿದ್ದಾರೆ. ಕೊಪ್ಪಳದ ಮುಸ್ಲಿಮರು ಮಂಡಾಳು ತಯಾರಿಕೆ ಕಸಬನ್ನು ಎರಡ್ಮೂರು ತಲೆಮಾರುಗಳಿಂದ ಮಾಡುತ್ತಿದ್ದಾರೆ. ಹೀಗೆ ಬಡವರು ಮತ್ತು ಅಲ್ಪಸಂಖ್ಯಾತರು ತಮ್ಮ ತುತ್ತಿನಚೀಲ ತುಂಬಿಸಿಕೊಳ್ಳಲು ತಲೆತಲಾಂತರದಿಂದ ಮುಂದುವರಿಸಿಕೊಂಡು ಬಂದ ಆನುವಂಶಿಕ ವೃತ್ತಿಗಳನ್ನೇ 'ಪಾರಂಪರಿಕ ಕಸಬು'ಗಳು ಎನ್ನಬಹುದು. ಈ ಕಸಬುಗಳಿಗೆ ಒಂದು ಪರಂಪರೆಯಿದೆಯೇ ಹೊರತು ಯಾವುದೇ ವಿಧವಾದ ಕುಲದ ಕಟ್ಟಳೆಯಿಲ್ಲ.

"ದೇವಾಂಗದವರು ಹಾಗೂ ಪದ್ಮಶಾಲಿಗಳಿಗಿಂತ ಹೀನಾಯ ಸ್ಥಿತಿಯಲ್ಲಿರುವ ಹಲವು ಜಾತಿಗಳಿವೆ. ಅವರು ಕೈಮಗ್ಗವನ್ನು ವೃತ್ತಿಯನ್ನಾಗಿ ಸ್ವೀಕರಿಸುವುದು ಸಾಧ್ಯವಿದೆ ಅಥವಾ

ಇನ್ನಾವುದಾದರೂ ಉದ್ಯೋಗವನ್ನು ಸ್ವೀಕರಿಸುವುದು ಸಾಧ್ಯವಿದೆ. ಆ ಮೂಲಕ ಜಾತಿಪದ್ಧತಿಯ ವಿಷವರ್ತುಲವನ್ನು ಮೀರುವುದು ಸಾಧ್ಯವಿದೆ. ಕೈಮಗ್ಗ ಚಳುವಳಿಗಿರುವ ನಿಜವಾದ ಸಾಮಾಜಿಕ ಆಯಾಮವಿದು. ಉದಾಹರಣೆಗೆ, ಭಾರತದ ಅನೇಕ ಕಡೆಗಳಲ್ಲಿ, ಅದರಲ್ಲೂ ಆಂಧ್ರಪ್ರದೇಶ, ತಮಿಳುನಾಡು ಹಾಗೂ ಕರ್ನಾಟಕಗಳಲ್ಲಿ ದಲಿತರು ನೇಕಾರಿಕೆಯ ವೃತ್ತಿಯನ್ನು ಸ್ವೀಕರಿಸಿ ಯಶಸ್ವಿಯಾಗಿರುವ ಹಲವು ಉದಾಹರಣೆಗಳಿವೆ.”[೫]

ಕುರಿ ಕಾಯುವುದು, ಅವುಗಳ ತುಪ್ಪಟವನ್ನು ಮತ್ತೊಬ್ಬರಿಗೆ ಮಾರಿ ಕಂಬಳಿ ನೇಯಿಸುವುದು ಹಿಂದಿನ ಕುರುಬರ ವೃತ್ತಿಯಾಗಿತ್ತು. ಹೀಗಿದ್ದ ಕುರುಬರು ಸ್ವತಃ ಕಂಬಳಿ ನೇಕಾರಿಕೆ ವೃತ್ತಿಯನ್ನು ಸ್ವೀಕರಿಸಿ ನೇಕಾರರಾಗಿ ಒಂದೆಡೆ ನೆಲೆನಿಂತರು. ಜೊತೆಗೆ ಕೃಷಿಯೂ ಅವರನ್ನು ಸೆಳೆಯಿತು. ಹೀಗೆ ಸಾಮಾಜಿಕ ವೃತ್ತಿ ಚಲನೆ ಇಂದು ನಿನ್ನೆಯದಲ್ಲ. ಒಟ್ಟಿನಲ್ಲಿ ಪೇಟೆಯ ಉದ್ಯೋಗಗಳು ಜಾತಿಯನ್ನು ಮುಚ್ಚಿಡುತ್ತವೆ; ಹಳ್ಳಿಯ ಉದ್ಯೋಗಗಳು ಜಾತಿಯನ್ನು ಬಿಚ್ಚಿಡುತ್ತವೆ!

“ಇಂದು ಜಾತಿಗಳ ಈ ಚಿಕ್ಕ ಚಿಕ್ಕ ಬೇಲಿಯ ಅಗತ್ಯವಿಲ್ಲ. ಆದಷ್ಟು ಬೇಗ ಇವು ಕೊನೆಗಾಣಬೇಕು. ಗ್ರಾಮಪಂಚಾಯಿತಿಗಳ ಆರಂಭದಲ್ಲಿ ಈ ಬೇಲಿಗಳ ಉಪಯೋಗ ಕಂಡುಬಂದರೂ ಈಗ ಅವು ನಿರರ್ಥಕವೆನಿಸಿಕೊಂಡಿವೆ. ಸಸಿಗಳನ್ನು ನೆಡುವಾಗ ಅವುಗಳ ರಕ್ಷಣೆಗಾಗಿ ಸುತ್ತಲೂ ಬೇಲಿಯನ್ನು ಹಾಕಬೇಕಾಗುತ್ತದೆ. ಆಮೇಲೆ ಅವು ಬೆಳೆದಾಗ ಬೇಲಿಯ ಅಗತ್ಯ ಬೀಳುವುದಿಲ್ಲ. ವಿಜ್ಞಾನ ಯುಗದಲ್ಲಿ ಜಾತಿಗಳ ಕಲ್ಪನೆ ಸರಿಯಲ್ಲ. ಅವುಗಳ ಪೂರ್ಣ ಸಮಾಧಿಯಾಗಬೇಕು”[೬] ಎಂಬುದು ವಿನೋಬಾ ಬಾವೆಯವರ ಗ್ರಾಮಸ್ವರಾಜ್ಯದ ಜಾತ್ಯಾತೀತ ಕನಸಾಗಿತ್ತು.

“ವರ್ಣಗಳೆಲ್ಲವೂ ಸಮಾನವಾದವು. ಏಕೆಂದರೆ ಎಲ್ಲವೂ ಸಮುದಾಯಕ್ಕೆ ಆಧಾರವೇ. ಇವೊತ್ತು ವರ್ಣ ಎಂದರೆ ಮೇಲು-ಕೀಳು ಎಂಬರ್ಥ ಬಂದಿದೆ. ಇದು ಮೂಲದ ವಿಕಟ ವಿಡಂಬನೆ. ಜಾತಿಗೂ ವರ್ಣಕ್ಕೂ ಯಾವ ಸಂಬಂಧವೂ ಇಲ್ಲ. ವರ್ಣದ ವೇಷ ಧರಿಸಿಕೊಂಡಿರುವ ಜಾತಿ ಎಂಬ ರಾಕ್ಷಸನಿಗೆ ಧಿಕ್ಕಾರ!”[೭] ಇದು ವರ್ಣಾಶ್ರಮದ ಬಗ್ಗೆ ಗಾಂಧೀಜಿಯವರಿಗೆ ಇದ್ದ ತೆರೆದ ಮನಸ್ಸು.

‘Production by masses, not mass production.’ (ಜನಸಮೂಹದಿಂದ ಉತ್ಪಾದನೆಯೇ ವಿನಃ ದೈತ್ಯ ಪ್ರಮಾಣದ ಉತ್ಪಾದನೆ ಅಲ್ಲ.) ಎಂಬುದು ಬಾಪೂಜಿಯವರ ಗ್ರಾಮಸ್ವರಾಜ್ಯದಲ್ಲಿನ ಉತ್ಪಾದನಾರಂಗದ ಕನಸು. ಗಾಂಧೀಜಿಯ ಉದ್ಯೋಗ ಕಲ್ಪನೆ,

ಗ್ರಾಮಕೈಗಾರಿಕಾ ವ್ಯವಸ್ಥೆ, ಅರ್ಥರಚನೆಯನ್ನು ಸೌರಮಂಡಲಕ್ಕೆ ಹೋಲಿಸಿದ್ದಾರೆ! ಖಾದಿಯೇ ಸೂರ್ಯ. ಉಳಿದ ಗ್ರಾಮ ಕೈಗಾರಿಕೆಗಳು ಸೂರ್ಯನ ಸುತ್ತ ಸುತ್ತುವ ಗ್ರಹಗಳು. ಇವೆಲ್ಲ ಬದುಕಿಗೆ ಅವಶ್ಯಕವಾದ ವಸ್ತುಗಳನ್ನು ಉತ್ಪಾದಿಸುತ್ತವೆ. ಎಲ್ಲವೂ ಸ್ವದೇಶೀಯವಾದವು, ಸ್ಥಳೀಯವಾದವು. ಅಲ್ಲಲ್ಲಿನ ಕರಕೌಶಲವನ್ನು ಅಲ್ಲಲ್ಲೇ ಅರಳಿಸುವಂಥವು– ಇದು ಅವರ ಗ್ರಾಮೋದ್ಯೋಗದ ಕನಸು. "ನಮ್ಮ ನೆರೆಹೊರೆಯವ ಶ್ರಮದಿಂದ ಉತ್ಪಾದಿಸಲ್ಪಡುವ ವಸ್ತುಗಳನ್ನು ಬಳಸುವುದು ಸ್ವದೇಶೀ ಧರ್ಮ. ಅವುಗಳನ್ನು ತಿರಸ್ಕರಿಸಿ ವಿಧೇಶೀಯ ವಸ್ತುಗಳಿಗೆ ಮೋಹಗೊಂಡು ಧಾವಿಸಿದುದರಿಂದಲೇ ನಮ್ಮ ದಾಸ್ಯ ಅತ್ಯಂತ ಘೋರ ಬಡತನಕ್ಕೆ ನೂಕಿಬಿಟ್ಟಿದೆ."[೮] ಇದೇ ಗಾಂಧೀಜಿಯವರ ಸ್ವದೇಶೀ ವ್ರತ!

"ಭಾರತೀಯ ಸಮಾಜದಲ್ಲಿನ ಜಾತಿ ವ್ಯವಸ್ಥೆ ಮತ್ತು ಲಿಂಗ ಪ್ರಭೇದಗಳಿಂದ ಉಂಟಾಗಿರುವ ಶೋಷಣೆಯನ್ನು ಮಾರ್ಕ್ಸನ ವರ್ಗ ಹೋರಾಟ ಮತ್ತು ರಾಜಕೀಯ ಕ್ರಿಯಾಚರಣೆಯ ಹೊಸ ವಿಧಾನವನ್ನು ಅನುಸರಿಸಬೇಕು"[೯] ಎಂದು ರಾಮ ಮನೋಹರ ಲೋಹಿಯಾರವರು ಪ್ರತಿಪಾದಿಸುತ್ತಾರೆ. ಇನ್ನೂ ಮುಂದುವರೆದು 'ವರ್ಗ ಎನ್ನುವುದು ಚಲನೆಯಿರುವ ಜಾತಿ; ಜಾತಿ ಎನ್ನುವುದು ಚಲನೆಯಿಲ್ಲದ ವರ್ಗ' ಎಂದು ವ್ಯಾಖ್ಯಾನಿಸುತ್ತಾ, ಭಾರತೀಯ ಸಮಾಜದಲ್ಲಿರುವ ಜಾತಿ ಹಾಗೂ ವರ್ಗಗಳ ಹಿಡಿತವನ್ನು ಹಿಮ್ಮೆಟ್ಟಿಸಲು ತಮ್ಮ ಚಿಂತನೆ, ಪಕ್ಷ ಹಾಗೂ ಸಂಘಟನೆಗಳ ಮೂಲಕ ಪ್ರಯತ್ನಿಸಿದರು.

"ವೃತ್ತಿಯ ವಿಷಯದಲ್ಲಿ ನಿಯಮವು ಏನು ಹೇಳುತದೆ? ವ್ಯಕ್ತಿಯು ತನ್ನ ಜಾತಿಗೆ ಪರಂಪರೆಯಿಂದ ಬಂದಿರುವ ಕಸಬನ್ನು ಮಾಡತಕ್ಕದ್ದು, ಒಂದು ಜಾತಿಗೆ ಹಾಗೆ ಒಂದು ನಿರ್ದಿಷ್ಟ ವೃತ್ತಿಯಲ್ಲದ ಪಕ್ಷದಲ್ಲಿ ತನ್ನ ತಂದೆ ಏನು ಮಾಡುತ್ತಿದ್ದನೋ ಆ ಕೆಲಸವನ್ನು ಮಗನೂ ಮಾಡಬೇಕು." ಮುಂದುವರಿದು ಅವರು ಹೀಗೆ ಹೇಳುತ್ತಾರೆ–"ತನ್ನ ಜಾತಿಯ ಕಸಬಲ್ಲದ ಬೇರೆ ಯಾವುದೇ ಕಸಬನ್ನು ಹಿಡಿಯುವುದು. ಇತರ ಅಪರಾಧಗಳ ವಿಷಯದಲ್ಲಿ ಶಿಕ್ಷೆಯು ಹಗುರವಾದದ್ದು, ಹೆಚ್ಚುಕಡಿಮೆ ನಾಮಕಾವಸ್ಥೆಯದು"[೧೦]ಎಂದು ಭಟ್ಟಾಚಾರ್ಯರು ಪಟ್ಟಿ ಮಾಡುವ ಮೂಲಕ ಪರೋಕ್ಷವಾಗಿ ವೃತ್ತಿಚಲನೆಗೆ ಪ್ರೋತ್ಸಾಹಿಸಿದಂತಿದೆ. ಇದರಿಂದ ಕುಲಕಸಬುಗಳ ಸ್ಥಾನದಲ್ಲಿ ಪಾರಂಪರಿಕ ಕಸಬುಗಳು ಉಗಮಗೊಳ್ಳಲು ಕಾರಣವಾಯಿತು!

"೧೪ನೇ ಶತಮಾನದ ಇತಿಹಾಸಕಾರ ಬರನಿಯು ತನ್ನ 'ತರಿಖ್–ಇ–ಫಿರುಜ್–ಶಾಹಿ' ಎಂಬ ಕೃತಿಯಲ್ಲಿ ಪ್ರತಿಪಾದಿಸಿದಂತೆ– ೧೩–೧೪ನೇ ಶತಮಾನದಲ್ಲಿ ಪಟ್ಟಣಗಳ

ಕೆಲಸಗಾರರೊಳಗೆ ಒಂದು ಗಣನೀಯ ಭಾಗವು ಗುಲಾಮ–ಕೆಲಸಗಾರರೆಂದು ಗುರುತಿಸಬಹುದಾದ ಪರಿಸ್ಥಿತಿ ನಿರ್ಮಾಣವಾಯಿತು. ಹೆಚ್ಚು ಕಡಿಮೆ ಎಲ್ಲ ರಂಗಗಳಲ್ಲಿಯೂ ಸಾರ್ವತ್ರಿಕವಾಗಿ ಸುಲ್ತಾನರುಗಳ ಸೇವೆಯಲ್ಲಿ ಸಾವಿರಗಟ್ಟಲೆ ಗುಲಾಮರಿದ್ದರು. (ಅಲ್ಲಾವುದ್ದೀನ್ ಖಿಲ್ಜಿಯ ಸೇವೆಯಲ್ಲಿ ೫೦,೦೦೦ ಹಾಗೂ ಫಿರುಜ್ ತುಘಲಕ್‌ನ ಸೇವೆಯಲ್ಲಿ ೧,೮೦,೦೦೦ ಗುಲಾಮರಿದ್ದರೆಂದು ಹೇಳುತ್ತಾರೆ). ಗುಲಾಮರು ತಮ್ಮ ಜಾತಿಯನ್ನು ಕಳೆದುಕೊಳ್ಳುತ್ತಿದ್ದರು. ಇಸ್ಲಾಮಿಗೆ ಮತಾಂತರ ಹೊಂದುತ್ತಿದ್ದರು. ಯಾವುದೇ ಕೆಲಸವನ್ನಾದರೂ ಮಾಡಬಲ್ಲವರಾಗಿರುತ್ತಿದ್ದರು ಹಾಗೂ ಯಾವುದೇ ಕಸಬನ್ನಾದರೂ ಕಲಿಯಬಲ್ಲವರಾಗಿದ್ದರು. ಕಾಲಕ್ರಮೇಣ ಗುಲಾಮಗಿರಿಯಿಂದ ಬಿಡುಗಡೆಗೊಳಿಸಲ್ಪಟ್ಟ ನಂತರ ತಮ್ಮ ಸ್ಥಾನಮಾನಗಳನ್ನು ಉತ್ತಮಗೊಳಿಸುವ ಸಲುವಾಗಿ ಅಥವಾ ತಮಗೆ ನಿಷೇಧಿಸಲ್ಪಟ್ಟಿದ್ದ ಕಸಬುಗಳನ್ನೂ ಕೈಗೊಳ್ಳುವ ಉದ್ದೇಶದಿಂದ ತಮ್ಮ ಜಾತಿಗಳಿಂದ ಸಿಡಿದು ಹೋಗುವಂತಹವರು ಕೂಡ ಕ್ರಮೇಣ ಮತಾಂತರ ಹೊಂದಿದರು." [೧೧] ಈ ಎಲ್ಲಾ ಕಾರಣಗಳಿಂದಲೇ ಹೊಸ ಪರಂಪರೆ ಹಾಗೂ ಹೊಸ ಪಾರಂಪರಿಕ ಕಸಬುಗಳು ಉಗಮಗೊಂಡವು.

"ಅಸ್ಪೃಶ್ಯತೆಗೆ ವಂಶಭೇದದ ಆಧಾರವಿಲ್ಲದಿರುವಂತೆ ಉದ್ಯೋಗಗಳಿಗೂ ಯಾವುದೇ ಆಧಾರವೆಂಬುದಿಲ್ಲ."[೧೨] ಡಾ. ಬಾಬಾಸಾಹೇಬ್ ಅಂಬೇಡ್ಕರ್‌ರವರು ಅಸ್ಪೃಶ್ಯತೆಯ ಮೂಲವನ್ನು ಹುಡುಕುವಲ್ಲಿ ತಿಳಿಸಿದ್ದಾರೆ. ಹೀಗೆ ಹೇಳುವ ಮೂಲಕ ಪರೋಕ್ಷವಾಗಿ ವೃತ್ತಿಚಲನೆಗೆ ಪ್ರೋತ್ಸಾಹಿಸಿದಂತಿದೆ. ಇದರಿಂದ ಕುಲಕಸಬುಗಳ ಸ್ಥಾನದಲ್ಲಿ ಪಾರಂಪರಿಕ ಕಸಬುಗಳು ಉಗಮಗೊಳ್ಳಲು ಪ್ರೇರಣೆಯಾಯಿತು!

'ಅಸ್ಪೃಶ್ಯರು ಆರ್ಥಿಕವಾಗಿ ಸ್ವಾವಲಂಬಿಗಳಾಗುವುದು ಹೇಗೆ?' ಎಂಬ ಚರ್ಚೆಯಲ್ಲಿ ಡಾ. ಬಾಬಾಸಾಹೇಬ್ ಅಂಬೇಡ್ಕರ್‌ರವರು "ನಿಮ್ಮ ಆರ್ಥಿಕ ಪರಾವಲಂಬಿತನವನ್ನು ಬಳಸಿಕೊಂಡು ಸವರ್ಣೀಯರು ಅಸ್ಪೃಶ್ಯತೆಯ ಸಂಕಲೆ ನಿಮ್ಮ ಕಾಲುಗಳನ್ನು ಸದಾ ಕಟ್ಟಿರುವಂತೆ ಮಾಡಲು ಪ್ರಯತ್ನಿಸುತ್ತಿದ್ದಾರೆ. ಅದಕ್ಕಾಗಿ ಕೃಷಿ, ನೇಕಾರಿಕೆ ಇತ್ಯಾದಿ ಇತರೆ ದಂಧೆ(ಕಸಬು)ಗಳನ್ನು ನಡೆಸಿ ನೀವು ಸ್ವಾವಲಂಬಿಗಳಾಗಬೇಕು. ಯಾವ ದಂಧೆ(ಕಸಬು)ಗಳಲ್ಲಿ ಸ್ಪರ್ಧೆಯಿಲ್ಲವೋ ಅಥವಾ ಯಾವುದೋ ಒಂದು ಜಾತಿಗೆ ಮಾತ್ರ ಸೀಮಿತವಾಗಿರುವ ವಿಶಿಷ್ಠ ಕಸಬು ಅಲ್ಲವೋ, ಅವುಗಳನ್ನು ಮಾಡುವುದು ಸಾಧ್ಯವೆನಿಸಿದಲ್ಲಿ ಹರಿಜನರು ಅಗತ್ಯವಾಗಿ ಅವುಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು."[೧೩] ಹೀಗೆ ಹೇಳುವ

ಮೂಲಕ ಪರೋಕ್ಷವಾಗಿ ಕುಲಕಸಬನ್ನು ಬಿಟ್ಟು ಪ್ರಗತಿಪರ ವೃತ್ತಿಯಲ್ಲಿ ಅಥವಾ ಪಾರಂಪರಿಕ ಕಸಬುಗಳಲ್ಲಿ ತೊಡಗಿಕೊಳ್ಳಲು ಸಮ್ಮತಿಸಿದಂತಿದೆ.

ಹರಿಜನರು ತಮ್ಮ ಪಾರಂಪರಿಕ ಕಸಬಿಗೆ ಅಂಟಿಕೊಂಡಿರುವುದೇ ಅವರ ಆರ್ಥಿಕ ಸಮಸ್ಯೆಗಳಿಗೆ ಮುಖ್ಯ ಕಾರಣ. ಮುಂಬಯಿ ವಿಧಾನ ಮಂಡಲದಲ್ಲಿ ಡಾ. ಅಂಬೇಡ್ಕರ್‌ರವರು ಹರಿಜನ ವೇತನ ವಿಧೇಯಕವನ್ನು ಮಂಡಿಸಿ, ತಮ್ಮ 'ಬಹಿಷ್ಕೃತ ಭಾರತ'ದ ಮೂಲಕ ಪ್ರಚಾರವನ್ನೂ ಮಾಡುತ್ತಾರೆ. ಅದರಲ್ಲಿ 'ಬಲೂತಿ'ಯ ವಸೂಲಿಯನ್ನು ಸರಿಯಾದ ರೀತಿಯಲ್ಲಾಗುವಂತೆ ಸರ್ಕಾರದ ಮೂಲಕವೇ ಅದನ್ನು ನಗದಾಗಿ ಪರಿವರ್ತಿಸುವುದು ಈ ವಿಧೇಯಕದ ಉದ್ದೇಶ. "ಇಲ್ಲಿ 'ಬಲೂತಿ' ಅಥವಾ 'ವತನ' ಎಂದರೆ...ಪಾರಂಪರಿಕ ಉದ್ಯೋಗದ ಮೂಲಕ ಗ್ರಾಮದ ಸೇವೆ ಮಾಡುವ ಮನೆತನದವರಿಗೆ ಅವರ ಹಕ್ಕಿನಂತೆ ಕೊಡಬೇಕಾದ ಕೃಷಿ ಉತ್ಪನ್ನದ ಭಾಗ. ಪ್ರತಿ ಗ್ರಾಮದಲ್ಲೂ ಇರುವ ಇಂತಹ ಹನ್ನೆರಡು ವಿಧ ಉದ್ಯೋಗಗಳನ್ನು 'ಬಾರಾ ಬಲೂತಿ' ಎನ್ನಲಾಗುತ್ತಿತ್ತು. ಅವರೇ ಬಡಗಿ, ಕಮ್ಮಾರ, ಕುಂಬಾರ, ಹಮಾಲ, ಚಮ್ಮಾರ, ಅಗಸ, ಕ್ಷೌರಿಕ, ಬ್ರಾಹ್ಮಣ, ಅಕ್ಕಸಾಲಿಗ, ಅರ್ಚಕ, ಹರಿಜನ...ಇವರೆಲ್ಲ ಬಲೂತಿದಾರರು."[೧೪]

ಗ್ರಾಮೀಣ ಕೈಗಾರಿಕೆಗಳಲ್ಲಿ ಕುಲಕಸಬುಗಳು ಅಥವಾ ಪಾರಂಪರಿಕ ಕಸಬುಗಳು ಇಂದು ಬದಲಾದ ರೂಪದಲ್ಲಿ ಗೃಹ(ಗುಡಿ)ಕೈಗಾರಿಕೆ ಮತ್ತು ಸಣ್ಣ ಕೈಗಾರಿಕೆಗಳೆಂದು ಗುರುತಿಸಲ್ಪಡುತ್ತಿವೆ. ಇವುಗಳ ನಡುವೆ ಅತೀ ಸೂಕ್ಷ್ಮವಾದ ವ್ಯತ್ಯಾಸವನ್ನು ಗಮನಿಸಬಹುದು. ಜಾತಿ(ಕುಲ), ಪರಂಪರೆ, ಕುಟುಂಬದ ಸದಸ್ಯರು, ಕೆಲಸಗಾರರ ಸಂಖ್ಯೆ, ಬಂಡವಾಳ, ಉಪಯೋಗಿಸುವ ಉಪಕರಣ, ಸ್ಥಳೀಯ ಸಂಪನ್ಮೂಲ, ಕರಕೌಶಲ್ಯ, ತಂತ್ರಜ್ಞಾನ ಕೌಶಲ್ಯದ ಅಳವಡಿಕೆ ಹಾಗೂ ಉತ್ಪಾದನೆಯ ಆಧಾರದ ಮೇಲೆ ವಿಂಗಡಿಸಬಹುದು. ರಾಷ್ಟ್ರೀಯ ಆರ್ಥಿಕತೆಯಲ್ಲಿ ಗೃಹ(ಗುಡಿ)ಕೈಗಾರಿಕೆ ಹಾಗೂ ಸಣ್ಣ ಕೈಗಾರಿಕೆಗಳ ಪಾತ್ರ ಬಹುಮುಖ್ಯವಾಗಿವೆ. ಇವುಗಳಿಗೆ ಉಜ್ವಲ ಭವಿಷ್ಯವಿದೆ. ಇವು ಭಾರತೀಯ ಪರಿಸ್ಥಿತಿಗೆ ಸಮಂಜಸವಾಗಿ ಹೊಂದಿಕೊಳ್ಳುತ್ತವೆ. ಇವು ಭಾರತದಲ್ಲಿಯೇ ಹುಟ್ಟಿ, ಬೆಳೆದು ಭಾರತದ ಸಂಸ್ಕೃತಿ, ಪರಂಪರೆ, ಸಂಪನ್ಮೂಲ ಹಾಗೂ ಕರಕುಶಲತೆಯನ್ನು ಮೈಗೂಡಿಸಿಕೊಂಡಿವೆ. ಅದೇ ಕುಲದವರಿಗೆಂದೇ ಮೀಸಲಾಗಿದ್ದ ಕಸಬನ್ನು ಬೇರೆ ಕುಲದವರೂ ಮಾಡುವ ಮೂಲಕ ಅದನ್ನೇ ತಮ್ಮ ಪರಂಪರೆಯನ್ನಾಗಿಸಿಕೊಂಡಿರುವುದರಿಂದ ಪಾರಂಪರಿಕ ಕಸಬುಗಳಾಗಿವೆ ಎನ್ನಬಹುದು.

ಒಟ್ಟಿನಲ್ಲಿ ಎತ್ತಿಕೊಂಡ ಕಸಬುದಾರರ ಕೈ ಕೂಸು ಎನ್ನಬಹುದಾದಷ್ಟು ಸರಳ ಪರಂಪರೆಯಾಗಿ, ಆಧುನೀಕರಣಕ್ಕೆ ತಕ್ಕಂತೆ ತನ್ನ ವಿನ್ಯಾಸವನ್ನು ಬದಲಿಸಿಕೊಂಡಿರುವ ಕಸಬುಗಳು ಇಂದಿನ ಪಾರಂಪರಿಕ ಕಸಬುಗಳಿವೆ. ಗ್ರಾಮೀಣ ಪ್ರದೇಶದ ಜನಪದರ ಬದುಕೂ ಜಾನಪದಕ್ಕೆ ಬೆನ್ನುಮಾಡಿ, ಇಂದು ಆಧುನೀಕರಣದತ್ತ ಮುಖ ಮಾಡಿದೆ! ಜನಸಂಖ್ಯಾ ಬಾಹುಳ್ಯ ದೇಶವಾದ ಭಾರತಕ್ಕೆ ಇಂತಹ ಪಾರಂಪರಿಕ ಕಸಬುಗಳ ಅಗತ್ಯವಿದೆ. ಕುಶಲತೆ ಇಲ್ಲದ ಕುಲಕಸಬು ಖಂಡಿತಾ ಅವಸಾನದ ಹಾದಿ ಹಿಡಿಯುತ್ತದೆ! ಆಧುನಿಕತೆಗೆ ತಕ್ಕಂತೆ ವಿನ್ಯಾಸ ಬದಲಿಸಿಕೊಂಡ ಬೇರೆ ಸಮುದಾಯದ ಪಾರಂಪರಿಕ ಕಸಬುದಾರ ಇಂದು ಉನ್ನತಿ ಸಾಧಿಸಬಹುದಾಗಿದೆ. ಒಟ್ಟಿನಲ್ಲಿ ಇಂದು ಭಾರತಕ್ಕೆ ಬೇಕಿರುವುದು ಜಾತಿ ಆಧಾರಿತ ವೃತ್ತಿಯಲ್ಲ; ಬದಲಾಗಿ ಇಂದಿನ ಭಾರತೀಯ ಪರಂಪರೆಯೊಂದಿಗೆ ಹೆಜ್ಜೆ ಹಾಕುವ ಪಾರಂಪರಿಕ ವೃತ್ತಿ ಮಾತ್ರ. ಹೀಗೆ ಕುಲಕಸಬುಗಳು ಇಂದು ಪಾರಂಪರಿಕ ಕಸಬುಗಳಾಗಿ ಮಾರ್ಪಡುತ್ತಿರುವುದು ಪ್ರಗತಿಯ ಸಂಕೇತವಾಗಿದೆ.

### ೩.೩. ಪಾರಂಪರಿಕ ಕಸಬು : ಪದ ನಿಷ್ಪತ್ತಿ

'ಪಾರಂಪರಿಕ ಕಸಬು' ಎಂದರೇನು? ಎಂದು ತಿಳಿಯುವ ಮೊದಲು, 'ಕಸಬು' ಎಂದರೇನು? ಎಂಬುದರ ಬಗ್ಗೆ ತಿಳಿಯೋಣ. ಆದಿಮ ಜನಾಂಗಗಳು ಪಶು ಪಾಲನೆ ಮತ್ತು ಕೃಷಿಯನ್ನು ಮಾಡುವ ಸಂದರ್ಭಗಳಲ್ಲಿ ಅವರಿಗೆ ಸಹಾಯಕವಾದ ಕೆಲವು ವೃತ್ತಿಗಳನ್ನು ಮಾಡಿ ಕೊಡಬೇಕಾಯಿತು. ಇವುಗಳನ್ನು ಆಗ 'ಕಸಬು' ಎಂದು ಕರೆದರು. ಹೀಗಾಗಿ ಕಸಬು ಎಂದರೆ ಮೂಲ ವೃತ್ತಿ ಎಂದೂ ಅರ್ಥೈಸಬಹುದು.

ಮನು ತನ್ನ ಸ್ಮೃತಿಯಲ್ಲಿ ಕಸಬು ಎಂದರೇನು ಎಂಬುದನ್ನೂ ಹೇಳಿದ್ದಾನೆ.

"ಯೈಃ ಕರ್ಮಭಿಃ ಪ್ರಚರಿತ್ರೈಃ ಶುಶ್ರೂಷ್ಯಂತೇ ದ್ವಿಜಾತಾಯಃ ।
ತಾನಿ ಕಾರುಕರ್ಮಾಣಿ ಶಿಲ್ಪಾನಿ ವಿವಿಧಾನಿ ಚ ॥

ಯಾವ ಕೆಲಸಗಳನ್ನು ಮಾಡುವುದರಿಂದ ದ್ವಿಜಾತಿಗಳ ಸೇವೆ ಮಾಡಿದಂತಾಗುತ್ತದೆಯೋ ಆ ಕೆಲಸಗಳೆಂದರೆ – ಕಟ್ಟಿಗೆಯಲ್ಲಿ ಕೆತ್ತನೆ, ಶಿಲ್ಪ, ಚಿತ್ರ ರಚನೆ ಇತ್ಯಾದಿ (ಕಸಬು)"[೧೫] ಅಂದರೆ ಮನುವಿನ ಪ್ರಕಾರ 'ಕಸಬು' ಎಂದರೆ ದ್ವಿಜಾತಿಗಳ ಸೇವೆ ಮಾಡುವ ಕೌಶಲ್ಯಯುಕ್ತ ಕೆಲಸಗಳು ಎಂದರ್ಥವಾಗುತ್ತದೆ.

**'ಕಸಬು'** ಮತ್ತು **'ಕಸುಬು'** ಇವೆರಡರಲ್ಲಿ ಯಾವ ಪದದ ಬಳಕೆ ಸರಿ? ಈ ಪದಗಳ ಬಳಕೆಯನ್ನು ನೋಡುವುದಾದರೆ ವಿದ್ವಾಂಸರುಗಳೇ, ಜಾನಪದ ತಜ್ಞರುಗಳೇ ಈ ಬಗ್ಗೆ ಗಂಭೀರತೆ ತೋರಿಲ್ಲವೆಂಬುದು ಅವರು ಬಳಸುವ **'ಕಸಬು'** ಹಾಗೂ **'ಕಸುಬು'** ಪದಗಳಿಂದಲೇ ಅರಿತುಕೊಳ್ಳಬಹುದು. ಅನೇಕರು ಒಂದೇ ಪುಸ್ತಕಗಳಲ್ಲಿ ಎರಡೂ ಪದಗಳನ್ನೂ ಅನೇಕ ಕಡೆಗಳಲ್ಲಿ ಬಳಸಿದ್ದಾರಲ್ಲದೇ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ ಕೂಡಾ! *ಬಹುಶಃ ವಿಷಯಕ್ಕೆ ಅತೀ ಮಹತ್ವ ನೀಡುವ ಧಾವಂತದಲ್ಲಿ* **'ಕಸಬು'** ಪದ/ಶಬ್ದದ ಬಗ್ಗೆ ಗಂಭೀರವಾಗಿ ಚಿಂತಿಸಿರಲಿಕ್ಕಿಲ್ಲ! ಈ ನಿಟ್ಟಿನಲ್ಲಿ ಚಿಂತನೆ ಅಗತ್ಯವೆನಿಸಲಾರದೇ ಇರದು.

**ಕಸಬು – ಪದಕ್ಕಾಗಿ ಪರಾಮರ್ಶಿಸಿದ ನಿಘಂಟುಗಳು :**

**'ಸಂಕ್ಷಿಪ್ತ ಕನ್ನಡ ನಿಘಂಟು'** :– ೧೯೭೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರುರವರು ಪ್ರಕಟಿಸಿದ ಪ್ರೊ. ಜಿ.ವೆಂಕಟಸುಬ್ಬಯ್ಯರವರ ಸಂಪಾದಕತ್ವದಲ್ಲಿ ಹೊರಬಂದ 'ಸಂಕ್ಷಿಪ್ತ ಕನ್ನಡ ನಿಘಂಟು', ಪುಟ–೧೮೬ರಲ್ಲಿ **ಕಸಬು** – ಕೆಲಸ, ಉದ್ಯೋಗ, ವೃತ್ತಿ ಶಿಕ್ಷಣ ಶಾಲೆ ಎಂದು ಅರ್ಥೈಸಲಾಗಿದ್ದು; ಪುಟ–೧೮೭ರಲ್ಲಿ ಕಸುಬು – **ಕಸಬು** ಎಂಬರ್ಥಗಳಿವೆ.

**'ಸಿರಿಗನ್ನಡ ಅರ್ಥಕೋಶ'** :– ೧೯೯೦ರಲ್ಲಿ ಎಸ್.ಬಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯುಟರ್ಸ್, ಬೆಂಗಳೂರುರವರು ಪ್ರಕಟಿಸಿದ ಡಾ. ಶಿವರಾಮ ಕಾರಂತರವರ ಸಂಪಾದಕತ್ವದಲ್ಲಿ ಹೊರಬಂದ 'ಸಿರಿಗನ್ನಡ ಅರ್ಥಕೋಶ', ಪುಟ–೪೮೭ ೧೮೬ರಲ್ಲಿ **ಕಸಬು** – ಕೆಲಸ, ಗಳಿಕೆ, ಉದ್ಯೋಗ, ವೃತ್ತಿ ಶಿಕ್ಷಣ ಶಾಲೆ ಎಂದು ಅರ್ಥೈಸಲಾಗಿದೆ.

**'ಕನ್ನಡ ಕನ್ನಡ ಶಬ್ದಾರ್ಥಕೋಶ'**:– ೨೦೧೨ರಲ್ಲಿ ಮೆ॥ ಪಿ.ಸಿ.ಶಾಬಾದಿಮಠ, ಗದಗರವರು ಪ್ರಕಟಿಸಿದ ಅರವಿಂದ ಸುಗೂರರವರ ಸಂಪಾದಕತ್ವದಲ್ಲಿ ಹೊರಬಂದ 'ಕನ್ನಡ ಕನ್ನಡ ಶಬ್ದಾರ್ಥಕೋಶ' ಪುಟ–೧೦೭ ರಲ್ಲಿ ಹೀಗಿದೆ : **ಕಸಬು** – ಗಳಿಕೆ, ಧಂದೆ, ಉದ್ಯೋಗ ಎಂಬರ್ಥಗಳಿವೆ.

**'ಐಬಿಎಚ್ ಕನ್ನಡ– ಕನ್ನಡ–ಇಂಗ್ಲಿಷ್ ನಿಘಂಟು'** :– ೧೯೯೯ರಲ್ಲಿ ಇಂಡಿಯಾ ಬುಕ್ ಹೌಸ್ ಲಿಮಿಟೆಡ್, ಬೆಂಗಳೂರುರವರು ಪ್ರಕಟಿಸಿದ ಪ್ರೊ. ಜಿ.ವೆಂಕಟಸುಬ್ಬಯ್ಯ, ಪ್ರೊ. ಎಲ್.ಎಸ್.ಶೇಷಗಿರಿರಾವ್, ಪ್ರೊ. ಎಚ್.ಕೆ.ರಾಮಚಂದ್ರಮೂರ್ತಿಯವರ ಸಂಪಾದಕತ್ವದಲ್ಲಿ

ಹೊರಬಂದ 'ಐಬಿಎಚ್ ಕನ್ನಡ– ಕನ್ನಡ–ಇಂಗ್ಲೀಷ್ ನಿಘಂಟು ಪುಟ–೧೬೭ ರಲ್ಲಿ **ಕಸಬು** – ಕೆಲಸ; ಕಾಯಕ; ಉದ್ಯೋಗ (work; profession; occupation; vocation; business) ಎಂಬ ಅರ್ಥಗಳಿವೆ.

**'ಹಿಂದಿ ಕನ್ನಡ ಕೋಶ'** :– ೧೯೯೧ರಲ್ಲಿ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ, ಮದ್ರಾಸ್‌ರವರು ಪ್ರಕಟಿಸಿದ 'ಹಿಂದಿ ಕನ್ನಡ ಕೋಶ', ಪುಟ–೫೨ ರಲ್ಲಿ **'ಕಸಬ** – ಉದ್ಯೋಗ, ಉಪಾರ್ಜನೆ' ಎಂಬರ್ಥಗಳಿವೆ.

**'ರತ್ನ ಕೋಶ – ಹಿಂದಿ ಹಿಂದಿ ಕನ್ನಡ ಕೋಶ'** :– ೧೯೫೦ರಲ್ಲಿ ರಾಮಾಶ್ರಯ ಬುಕ್ ಡಿಪೋ, ಧಾರವಾಡರವರು ಪಂ. ಜೆ.ಡಿ. ಮೈಸಾಳೆರವರ ಸಂಪಾದಕತ್ವದಲ್ಲಿ ಪ್ರಕಟಿಸಿದ 'ರತ್ನ ಕೋಶ – ಹಿಂದಿ ಹಿಂದಿ ಕನ್ನಡ ಕೋಶ', ಪುಟ–೧೨೦ ರಲ್ಲಿ **'ಕಸಬ** – ಪರಿಶ್ರಮ, ವೃತ್ತಿ, ಕಲೆ, ಉದ್ಯೋಗ, ವ್ಯವಸಾಯ ಎಂಬರ್ಥಗಳಿವೆ.

ಈ ಎಲ್ಲಾ ಗ್ರಂಥಗಳನ್ನೂ ಕನ್ನಡ ಸಾರಸ್ವತ ಲೋಕದ ದಿಗ್ಗಜರುಗಳೇ ಸಂಪಾದಿಸಿದ್ದು, ಎಲ್ಲದರಲ್ಲೂ **'ಕಸಬು'** ಎಂಬ ಪದವಿದೆಯೇ ವಿನಃ **'ಕಸುಬು'** ಎಂದು ನಮೂದಿಸಿಲ್ಲ! ಆದ್ದರಿಂದ 'ಕಸಬು' ಎಂಬ ಪದದ ಬಳಕೆಯೇ ಸೂಕ್ತ; ಈ ಪದವನ್ನೇ ಬಳಸಬೇಕೆಂಬುದು ನನ್ನ ಆನುಷಂಗಿಕ ವಾದಕ್ಕೆ ಇವು ಪುಷ್ಠಿ ನೀಡುತ್ತವೆ. ಈ ನಿಟ್ಟಿನಲ್ಲಿ ಇನ್ನೂ ಸಮಗ್ರವಾದ ಹಾಗೂ ಕೂಲಂಕುಷವಾದ ಅಧ್ಯಯನದ ಅವಶ್ಯಕತೆಯಿದೆ. ಸಾಮಾನ್ಯವಾಗಿ ಬಲ್ಲವರು ಹೇಳುವಂತೆ..

- **ಕುಲ + ಕಸಬು** = ಕುಲಕಸಬು,
- **ಕುಲ + ವೃತ್ತಿ** = ಕುಲವೃತ್ತಿ
- **ಅನುವಂಶ + ವೃತ್ತಿ** = ಅನುವಂಶೀಯ ವೃತ್ತಿ
- **ಪರಂಪರೆ + ಕಸಬು** = ಪಾರಂಪರಿಕ ಕಸಬು ಎಂಬ ಮೂಲವನ್ನು ಹುಡುಕುವಾಗ...

**'ಪಾರಂಪರಿಕ ಕಸಬು'**–ಎಂದರೆ ಪರಂಪರಾಗತ ವೃತ್ತಿ, ಮನೆತನದ ಉದ್ಯೋಗ, ಅನುವಂಶೀಯ ವೃತ್ತಿ ಕಲೆಗಾರಿಕೆ, ಕೈಕಸಬು, ವೃತ್ತಿಕಲೆಗಾರಿಕೆ, ಗುಡಿ ಕೈಗಾರಿಕೆ, ಕರಕುಶಲ ಕಲೆಗಳು ಎಂಬ ಇತರ ಪ್ರಯೋಗಗಳು ಈ ಕಸಬಿನ ವಿವಿಧಾರ್ಥವನ್ನು ಪ್ರತಿಬಿಂಬಿಸುತ್ತವೆ.

ಆದರೂ ಇಲ್ಲಿ ಜಾತಿ ವೃತ್ತಿ, ಕುಲ ಕಸಬು, ಕುಲವೃತ್ತಿ, ಜಾನಪದ ವೃತ್ತಿ ಎಂದೆಲ್ಲ ಅರ್ಥೈಸುವುದು ಕೆಲವು ಸಲ ತಪ್ಪಾಗುವ ಸಾಧ್ಯತೆ ಉಂಟು! ಏಕೆಂದರೆ ಕುಲಕಸಬಿಗೂ ಪಾರಂಪರಿಕ ಕಸಬಿಗೂ ಸೂಕ್ಷ್ಮವಾದ ವ್ಯತ್ಯಾಸವನ್ನು ಕಾಣಬಯಸುತ್ತೇನೆ!! ಕುಷ್ಟಗಿಯ ಪರಿಸರದಲ್ಲಿ... ಈಚಲು ಬುಟ್ಟಿ ತಯಾರಿಸುವುದು ಕೊರವರ ಸಮುದಾಯದ ವೃತ್ತಿಯಾದರೆ; ಬಿದಿರಿನ ಬುಟ್ಟಿ ತಯಾರಿಸುವುದು ಮ್ಯಾದಾರರ ಸಮುದಾಯದ ವೃತ್ತಿ. ಆದರೆ... ಇದೇ ಕುಷ್ಟಗಿಯ ಪರಿಸರದ ಹನಮಸಾಗರ ಗ್ರಾಮದಲ್ಲಿ ಮೋಚಿ ಜನಾಂಗದ ಮಹಿಳೆಯರು ಕೌದಿ ಹೊಲಿಯುತ್ತಾರೆ. ಈಗ ಕೌದಿ ಹೊಲಿಯುವುದು ಅವರ ಪಾರಂಪರಿಕ ಕಸಬಾಗಿದೆ. ಇಳಕಲ್ಲ ಸೀರೆಯನ್ನು ದೇವಾಂಗ ಸಮುದಾಯ ಮಾತ್ರ ನೇಕಾರಿಕೆ ಮಾಡುತ್ತಿಲ್ಲ; ಅನೇಕ ಮುಸ್ಲಿಂ ಧರ್ಮದವರೂ ನೇಕಾರಿಕೆ ವೃತ್ತಿ ಮಾಡುತ್ತಿದ್ದಾರೆ. ಹೀಗಾಗಿ ಆ ಮುಸ್ಲಿಂ ಧರ್ಮದ ಆ ನೇಕಾರರ ಪಾರಂಪರಿಕ ಕಸಬು ನೇಕಾರಿಕೆಯಾಗಿದೆ. ಹೀಗೆಯೇ ಅಮೀನಗಡದ ಕರದಂಟು ಯಾವೊಂದು ಸಮುದಾಯದ ಸ್ವತ್ತೂ ಅಲ್ಲ ಎಂಬಂತೆ ಹಲವಾರು ಸಮುದಾಯದ ಪಾರಂಪರಿಕ ಕಸಬಾಗಿದೆ. ಹೀಗೆ ಕುಲ ಕಸಬಿಗೂ, ಪಾರಂಪರಿಕ ಕಸಬಿಗೂ ಸೂಕ್ಷ್ಮವಾದ ಹಾಗೂ ಸೂಕ್ತವಾದ ವ್ಯತ್ಯಾಸವನ್ನು ಕಾಣಬಹುದು!

**೩.೪ ಪಾರಂಪರಿಕ ಕಸಬುಗಳು ನಡೆದು ಬಂದ ದಾರಿ :**

ಅಲೆಮಾರಿಯಾಗಿ, ಅರೆ ಅಲೆಮಾರಿಯಾಗಿದ್ದ ಬದುಕಿನಿಂದ ಸ್ಥಿರ ಬದುಕನ್ನು ಆಯ್ಕೆ ಮಾಡಿಕೊಂಡಾಗ ಬದುಕುವಿಕೆ ಹಾಗೂ ಇರುವಿಕೆಗಳಲ್ಲಿ ಪರಿವರ್ತನೆಗಳನ್ನು ಕಾಣುತ್ತಾ ಭಾವಜೀವಿಯಾಗಿ, ಬುದ್ಧಿಜೀವಿಯಾಗಿ ಹಲವಾರು ಸಂಬಂಧ, ಸಂಪರ್ಕಗಳನ್ನು ವಿಸ್ತರಿಸಿಕೊಂಡನು. ಹೀಗಾಗಿ ಎಲೆ, ಕರಟ, ಬುರುಡೆಗಳು ಮಣ್ಣಿನ ಪಾತ್ರೆಗಳಿಗೆ ಪ್ರೇರಣೆಯಾದರೆ, ಪ್ರಾಣಿಗಳ ಕೋರೆ-ಮೂಳೆಗಳು ಆಯುಧಗಳಿಗೂ, ಚರ್ಮವು ಬಟ್ಟೆಯ ಅನ್ವೇಷಣೆಗೆ ಪ್ರೇರಣೆಯಾಯಿತು. ಮಾನವನ ಆಗತ್ಯಗನುಗುಣವಾಗಿ ವಿವಿಧ ವಸ್ತುಗಳನ್ನು ತಯಾರಿಸಲು ಅರಿತುಕೊಂಡನು. ವೃತ್ತಿಗಳ ಹಿಂದೆ ಜೀವನಾವಶ್ಯಕತೆಯ ಒತ್ತಡ ಇತ್ತೆಂಬುದನ್ನು ಅಲ್ಲಗಳೆಯುವಂತಿಲ್ಲ. ಒಂದರ್ಥದಲ್ಲಿ ಕಸಬುಗಳ ಉಗಮಕ್ಕೆ ಅಗತ್ಯಗಳ ಅನ್ವೇಷಣೆಯೇ ಕಾರಣವೆನ್ನಬಹುದು!

ಬೇಟೆ, ಬೇಸಾಯ ಹಾಗೂ ದೈನಂದಿನ ಜೀವನಕ್ಕೆ ಬೇಕಾದ ಅಗತ್ಯತೆಗಳನ್ನು ಪೂರೈಸಿಕೊಳ್ಳಲು ಅನೇಕ ಮೂಲ ಸಾಮಗ್ರಿಗಳನ್ನು ಬಳಸಿಕೊಂಡನು. ಕಲ್ಲು, ಕೋರೆ, ಮೂಳೆ, ತೊಗಟೆ, ತೊಗಲು ಇತ್ಯಾದಿಗಳ ನಂತರ ಲೋಹಗಳನ್ನು ಕುಶಲತೆಯಿಂದ

ತಯಾರಿಸಿ ಬಳಸಿಕೊಂಡಾಗಲೇ ಕುಂಬಾರ, ನೇಕಾರ, ಬಡಗಿ, ಮೇದಾರ, ಕಲ್ಲುಕುಟಿಗ, ಕಮ್ಮಾರ ಮುಂತಾದ ಕಸಬುಗಳ ಕಸಬುದಾರರ ಉಗಮವಾಯಿತೆಂದೇ ಹೇಳಬಹುದು.

ವೃತ್ತಿಗಳ ವಿಕಾಸಕ್ಕೂ ಮಾನವನ ಬುದ್ಧಿಭಾವಗಳ ಬೆಳವಣಿಗೆಗೂ ನೇರಸಂಬಂಧ ಏರ್ಪಟ್ಟಾಗಲೇ ಮಾನವನ ಬದುಕಿಗೊಂದು ನೆಲೆ ಸಿಕ್ಕು, ಚತುರ್ವರ್ಣಗಳ ಸುಂದರ ಸಮಾಜವೊಂದು ರೂಪುಗೊಂಡಿತು. ಈ ಚತುರ್ವರ್ಣಗಳು ವ್ಯವಸ್ಥಿತವಾಗಿ ಕಾರ್ಯನಿರ್ವಹಿಸಿದರೆ ಸಮಾಜ ಸುವ್ಯವಸ್ಥಿತವಾಗಿ ಮುನ್ನಡೆಯುತ್ತದೆ ಎಂದೂ "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ" ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನೇ ಹೇಳಿದ್ದಾನೆ. ಕ್ರಿ.ಪೂ ೬೦೦ರ ಹೊತ್ತಿಗೆ ವರ್ಣಗಳ ಸಾಮರಸ್ಯ ಮರೆಯಾಗಿ 'ಜಾತಿ' ರೂಪಗೊಂಡಿತು.

ಮೌರ್ಯ ಚಕ್ರವರ್ತಿ ಅಶೋಕ(ಕ್ರಿ.ಪೂ.೨೭೩)ನ ಆಳ್ವಿಕೆಯಲ್ಲಿ ವ್ಯವಸಾಯ ಮುಖ್ಯ ಕಸಬಾಗಿತ್ತು. ಜೊತೆಗೆ ನೌಕೆಗಳನ್ನು ಕಟ್ಟುವವರು, ಶಸ್ತ್ರಾಸ್ತ್ರಗಳ ತಯಾರಕರನ್ನು ರಾಜರೇ(ಸರ್ಕಾರವೇ) ನೇರವಾಗಿ ನೇಮಿಸಿಕೊಳ್ಳುತ್ತಿದ್ದರು. ಕಸಬುದಾರರಿಗೆ ಕೆಲವು ತೆರಿಗೆಗಳಿಂದ ವಿನಾಯಿತಿ ಇದ್ದ ಬಗ್ಗೆ ಇತಿಹಾಸ ಹೇಳುತ್ತದೆ. ಚಾಣಕ್ಯ(ಕೌಟಿಲ್ಯ)ನ ಪ್ರಕಾರ ವೃತ್ತಿದೋಷಕ್ಕೆ ದಂಡನೆಯಿತ್ತೆಂದೂ, ದಂಡನೆಯಿಂದ ಮನುಷ್ಯ ಸದಾ ಜಾಗರೂಕನಾಗಿ ಕೆಲಸದಲ್ಲಿ ಕೌಶಲ್ಯತೆ, ಪ್ರಾವಿಣ್ಯತೆ ಪಡೆಯುತ್ತಾನೆಂದೂ; ಇವುಗಳನ್ನೇ ಮುಂದಿನ ಪೀಳಿಗೆಗೆ ವರ್ಗಾಯಿಸುತ್ತಾನೆಂದೂ ಇವುಗಳೇ ಮುಂದೆ ಜಾತಿ ಅಥವಾ ಕುಲಗಳಾದವು ಹಾಗೂ ಇವರ ಕಸಬುಗಳು ಕುಲಕಸಬುಗಳಾದವೆಂದೂ ತಿಳಿಸಿದ್ದಾನೆ. ಹದಿನೆಂಟು ಜಾತಿ ಅಥವಾ ಅಷ್ಟಾದಶ ಜಾತಿಗಳ ಬಗ್ಗೆ ಶಾಸನಗಳಿಂದ ದೊರಕುತ್ತದೆ. ಹನ್ನೆರಡನೆಯ ಶತಮಾನದಲ್ಲಿ ವಚನಕಾರರಾದ ಬಸವಾದಿ ಪ್ರಥಮರು ತಮ್ಮ ವಚನದಲ್ಲಿ 'ಕುಲವೇನೋ? ಅವಂದಿರ ಕುಲವೇನೊ?' ಎಂದು ಪ್ರಶ್ನಿಸುವ ಮೂಲಕ, ವೃತ್ತಿಯ ನೈಜಾರ್ಥವನ್ನು ಹೇಳಿದ್ದಲ್ಲದೇ ಅವುಗಳನ್ನು ಕಾಯಕ ಸ್ಥರಕ್ಕೇರಿಸಿದ್ದಾರೆ. ಕಮ್ಮಾರ, ಚಮ್ಮಾರ, ಕುಂಬಾರ, ಪತ್ತಾರ, ಮಡಿವಾಳ, ತಳವಾರ, ಉಪ್ಪಾರ, ಅಂಬಿಗೇರ, ಬೇಡ, ಡೋಹಾರ ಮುಂತಾದವು ಕೇವಲ ಜಾತಿ ವಾಚಕಗಳಲ್ಲ ಬದಲಾಗಿ ಅವು ಕಸಬುಗಳ, ಕಾಯಕಗಳ ಸೂಚಕಗಳು ಎಂದು ಸಾರಿದರು. ಅವರ ಕಾಲದಲ್ಲಿದ್ದ ಅಂಬಿಗರ ಚೌಡಯ್ಯ, ಸೊಡ್ಡಳಬಾಚರಸರಂಥಹ ವಚನಕಾರರ ವಚನದಲ್ಲಿಯೂ ಆಯಗಾರಿಕೆ ಒಳಗಾಗಿದ್ದ ಅನೇಕ ಕುಲಕಸಬುಗಳನ್ನು ತಿಳಿಸಿದ್ದಾರೆ. ಸರ್ವಜ್ಞ ಕವಿಯಂತೂ ಒಂದೆಡೆ ಜಾತಿ, ಕುಲವೆನ್ನುವುದನ್ನು ತನ್ನ ತ್ರಿಪದಿಯ ಮೂಲಕ ವಿರೋಧಿಸಿದ್ದೂ ಉಂಟು!

ಜಾತಿ ಪದ್ಧತಿಯ ವಿರೋಧದ ನಡುವೆಯೂ 'ಕುಲಕಸಬುದಾರ'ರ (ಆಯಗಾರರ) ಮೇಲೆ ಜನಪದ ಗೀತೆಗಳಲ್ಲಿ ರೈತರಿಗೂ ವಿಶೇಷ ಕಾಳಜಿ ಇರುವುದನ್ನು ಕಾಣುತ್ತೇವೆ. ಇವರಿಗೆ ದಾನ ನೀಡಿದಷ್ಟೂ ಭೂತಾಯಿ ಹುಲುಸು ನೀಡುತ್ತಾಳೆಂದು ರೈತರು ನಂಬಿದ್ದು, ಆಯಗಾರರು 'ಊರ ಹೆಣ್ಣುಮಕ್ಕಳೆಂದು' ಹೇಳಿಕೊಳ್ಳುವಲ್ಲಿ ನಿಜವಾಗಿಯೂ ಬಹುದೊಡ್ಡ ಅರ್ಥವಿದೆ. ಅನೇಕ ಜಾನಪದ ತ್ರಿಪದಿಯಲ್ಲಿ ಸಾಮುದಾಯಿಕ ಪ್ರವೃತ್ತಿಗಳನ್ನು ಎತ್ತಿತೋರಿಸಲಾಗಿದೆ. ಹಂಚಿ ತಿನ್ನುವ ಮಾನವೀಯ ಮೌಲ್ಯಗಳು ಜಾನಪದೀಯ ಪಂಥದಲ್ಲಿವೆ.

"ಕುಷ್ಟಗಿ ಪರಿಸರದ *ಪುರ* ಗ್ರಾಮದ ೧೨ನೇ ಶತಮಾನದ ಈಶ್ವರಗುಡಿಯ ಶಾಸನವು ಬಡಗಿ ಕಾಳೋಜನಿಗೆ ೧ ಮತ್ತರು, ಬಡಗಿ ಕಲ್ಲೋಜನಿಗೆ ಅರೆಮತ್ತರು ಭೂಮಿಯನ್ನುದಾನ ನೀಡಿದ ಬಗ್ಗೆ ಉಲ್ಲೇಖವಿದೆ. ಇದೇ ಊರಿನಅಗಸಿ ಗೋಡೆಯ ಶಾಸನವೊಂದು ಗಾಣಿಗರು ೧ ಗಾಣ ಹಾಗೂ ಸೊಳಸಿಗೆ ಎಣ್ಣೆಯನ್ನು ದಾನ ಮಾಡಿದ ಉಲ್ಲೇಖವಿದೆ. ಇದೇ ಗ್ರಾಮದ ಸೋಮೇಶ್ವರ ದೇಗುಲ ಬಾಗಿಲಲ್ಲಿರುವ ೨೭ನೇ ಡಿಶಂಬರ್ ೧೫೪೭ರ ಶಾಸನವು ನಾಡ ತಳವಾರಿಕಗೆ ಗವುಡ ಮಾನ್ಯದ ಹಣ, ಕುಂಬಾರ ತರುವ ಹಣ, ಉಪ್ಪಿನಮೊಳೆಯನ್ನು ದತ್ತಿಯಾಗಿ ನೀಡಿದ್ದನ್ನು ತಿಳಿಸುತ್ತವೆ. *ತಾವರಗೆರೆ* ಗ್ರಾಮದಲ್ಲಿನ ವೀರಭದ್ರ ದೇಗುಲದ ಬಳಿಯಿರುವ ೧೫೪೫ ಜುಲೈ ೨೩ರ ಶಾಸನವು "ರಾಮರಾಜದೇವನು ೧೩೦ ಗ್ರಾಮಗಳ ಕ್ಷೌರಿಕರಿಗೆ ಅಂನು ಪನ್ನು ಬಿಟ್ಟಿ ಬಿರಾಡ ಎಲ್ಲವನ್ನೂ ಮನ್ನಾ ಮಾಡಿದ" ಎಂದು ಉಲ್ಲೇಖಿಸುತ್ತದೆ."[೧೬] ಇದರಿಂದ ಇತಿಹಾಸದುದ್ದಕ್ಕೂ ರಾಜ ಮಹಾರಾಜರಿಂದಲೂ ಕಸಬುದಾರರಿಗೆ ದತ್ತಿ-ದಾನ ನೀಡಿರಿವುದನ್ನು ನೋಡಿದರೆ ಅವರಿಗೆ ಉತ್ತಮ ಸ್ಥಾನಮಾನಗಳಿದ್ದವೆಂದು ತಿಳಿದು ಬರುತ್ತದೆ.

ಒಟ್ಟಿನಲ್ಲಿ ಜನಪದರ ಪಾರಂಪರಿಕ ಕಸಬುಗಳು ಜನತೆಯ ಗ್ರಂಥಸ್ಥವಲ್ಲದ ಸಂಪ್ರದಾಯದ ಮೊತ್ತ ಹಾಗೂ ಅದರ ಕುರಿತಾದ ಜ್ಞಾನ ಹಾಗೂ ವಿಜ್ಞಾನ ಎನ್ನಬಹುದು. ಕೇಳಿ ಅನುಕರಣೆ ಹಾಗೂ ನೋಡಿ ಅನುಕರಣೆಯ ಮೂಲಕ ಪಾರಂಪರಿಕ ಕಸಬುಗಳು ಬೆಳೆದು ಬಂದಿವೆ ಎನ್ನಬಹುದು. ಪಾರಂಪರಿಕ ಕಸಬುಗಳು ಅಲೆಮಾರಿಯಾಗಿದ್ದ ಮಾನವ ಒಂದೆಡೆ ನೆಲೆನಿಂತಂದಿನಿಂದ ಇಂದಿನವರೆಗೂ ಸಾಗುತ್ತಲೇ ಬಂದಿವೆ.

**ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳ ವಿಧಗಳು :**

ಎಲ್ಲ ಪರಿಸರಗಳಲ್ಲಿಯೂ ಕಂಡು ಬರುವಂತೆ ಕುಷ್ಟಗಿ ಪರಿಸರದಲ್ಲಿಯೂ ಅನೇಕ ಪಾರಂಪರಿಕ ಕಸಬುಗಳನ್ನು ಕಾಣಬಹುದಾಗಿದೆ. ಅವುಗಳ ಭೌಗೋಳಿಕ ಅಂಶ ಮತ್ತು ಪ್ರಾದೇಶಿಕ ಖ್ಯಾತಿ ಹಾಗೂ ಮಹತ್ವವನ್ನು ಆಧಾರವಾಗಿಟ್ಟುಕೊಂಡು ಪ್ರಮುಖವಾಗಿ ಎರಡು ವಿಧಗಳನ್ನಾಗಿ ವಿಂಗಡಿಸಬಹುದಾಗಿದೆ.

ಕುಷ್ಟಗಿ ಪರಿಸರದ ವಿಶಿಷ್ಟ ಪಾರಂಪರಿಕ ಕಸಬುಗಳಾದ ಇಳಕಲ್ಲ ಸೀರೆ ನೇಕಾರಿಕೆ, ಗುಳೇದಗುಡ್ಡದ ಖಣ ನೇಕಾರಿಕೆ, ಕಮತಗಿ ಪಟಗ ಮತ್ತು ರುಮಾಲು ನೇಕಾರಿಕೆ, ಅಮೀನಗಡದ ಕರದಂಟು ತಯಾರಿಕೆ, ರಾಜೂರ ಸುಣ್ಣ ತಯಾರಿಕೆ, ಭಾಗ್ಯನಗರದ ಕೇಶೋದ್ಯಮ, ಕಿನ್ನಾಳ ಕಿಟ್ಟದ ಗೊಂಬೆ ತಯಾರಿಕೆ, ಹನಮಸಾಗರ ಕೌದಿ ಹೊಲಿಗಾರಿಕೆ, ಕೊಪ್ಪಳ ಮಂಡಾಳು ತಯಾರಿಕೆ – ಇವುಗಳನ್ನೇ ಸಂಶೋಧನೆಗೆ ಮುಖ್ಯವಾಗಿಟ್ಟುಕೊಂಡು ಅವುಗಳು ಹುಟ್ಟಿದ ಬಗೆ, ಐತಿಹಾಸಿಕ ಬೆಳವಣಿಗೆ, ವಿಕಾಸದ ಹಾದಿ, ರೂಪಾಂತರದ ಸ್ಥಿತಿ–ಗತಿ, ಉತ್ಪಾದನಾ ವಸ್ತುಗಳ ಮಾರಾಟ ವ್ಯವಸ್ಥೆಗಳನ್ನು ವಿಶ್ಲೇಷಿಸಲಾಗಿದೆ.

ಕುಷ್ಟಗಿ ಪರಿಸರದ ಸಾಮಾನ್ಯ ಪಾರಂಪರಿಕ ಕಸಬುಗಳು ವಿಭಾಗದಲ್ಲಿ ಕುಂಬಾರಿಕೆ, ಕಮ್ಮಾರಿಕೆ, ಪತ್ತಾರಿಕೆ, ಬಡಗಿತನ, ಕೊರವರ ಕಸಬು, ಮೇದಾರಿಕೆ, ಚಿತ್ರಗಾರಿಕೆ, ಹೂಗಾರಿಕೆ, ಮಡಿವಾಳಿಕೆ, ಕ್ಷೌರಿಕ ಕಸಬು, ಬಯಲು ಕಮ್ಮಾರಿಕೆ, ಕಲ್ಲುಕುಟಿಗ ಕಸಬು, ಚಮ್ಮಾರಿಕೆ, ಶಿಲ್ಪಗಾರಿಕೆ, ನಾಲಗಾರಿಕೆ ಮುಂತಾದ ಪಾರಂಪರಿಕ ಕಸಬುದಾರರು ಎಲ್ಲ ಜನಪದ ಸಮಾಜದಲ್ಲಿ ಸಾಮಾನ್ಯವಾಗಿ ಕಂಡು ಬರುವುದರಿಂದ ಈ ಕಸಬುಗಳನ್ನು ವ್ಯಾಪಕವಾಗಿ ವಿಶ್ಲೇಷಿಸಲು ಹೋಗಲಾಗಿಲ್ಲ. ಅವರನ್ನು ಹೇಗೆಲ್ಲಾ ಕರೆಯುತ್ತಾರೆ, ಅವರ ಉತ್ಪಾದನೆಗಳೇನು ಮತ್ತು ಅವರ ಕಸಬಿಗಿರುವ ಆತಂಕ ಅಥವಾ ಊರ್ಧ್ವಮುಖವನ್ನು ತಿಳಿಸಲಾಗಿದೆ.

**೩.೫ ಕುಷ್ಟಗಿ ಪರಿಸರದ ವಿಶಿಷ್ಟ ಪಾರಂಪರಿಕ ಕಸಬುಗಳು :**

ವೃತ್ತಿ ಅಥವಾ ಕಸಬುಗಳನ್ನು ಅವುಗಳ ಹುಟ್ಟು ನೆಲೆಗಟ್ಟನ್ನೇ ಆಧಾರವಾಗಿಟ್ಟುಕೊಂಡು ವರ್ಗೀಕರಿಸಲೂ ಸಾಧ್ಯವಾಗುತ್ತಿಲ್ಲ. ಇತ್ತ ಪ್ರಾದೇಶಿಕ ನೆಲೆಯಿಂದಲೂ ವಿಂಗಡಿಲಾಗುತ್ತಿಲ್ಲ; ಅತ್ತ ಅವುಗಳ ಉಪಯೋಗಿ ನೆಲೆಯಿಂದ ವಿಂಗಡಿಸಲೂ ಆಗುತ್ತಿಲ್ಲ. ಅವುಗಳ ರಚನೆಯಲ್ಲಿ ಬಳಸುವ ಸಾಮಗ್ರಿಗಳ ನೆಲೆಯಲ್ಲಿ ವಿಂಗಡಿಸಲು, ಅವುಗಳ ಕ್ರಿಯಾತ್ಮಕ ನೆಲೆಯಿಂದ ವಿಂಗಡಿಸಲೂ ಪ್ರಯತ್ನ ನಡೆದಿದೆ. ಆದರೆ ಇಲ್ಲಿ ಪ್ರಾದೇಶಿಕ ವೈಶಿಷ್ಟ್ಯತೆಗಳ ನೆಲೆಗಟ್ಟಿನಲ್ಲಿ

ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳನ್ನು ಅಧ್ಯಯನ ಮಾಡಲು ಉದ್ದೇಶಿಸಲಾಗಿದೆ. ಏಕೆಂದರೆ ಅವು ತುಂಬಾ ವಿಶೇಷತೆಯಿಂದ ಕೂಡಿರುವುದರ ಜೊತೆಗೆ ಅನೇಕ ಜನರಿಗೆ ಉದ್ಯೋಗವನ್ನೂ ನೀಡುತ್ತವೆ. ಅಲ್ಲದೇ ಸ್ತ್ರೀ-ಪುರುಷರ ಆರ್ಥಿಕ ಸಬಲೀಕರಣಕ್ಕೆ ಕಾರಣವಾಗುತ್ತವೆ. ಸ್ತ್ರೀ ಸಬಲೀಕರಣಕ್ಕೂ, ಕುಟುಂಬದ ಮಕ್ಕಳು 'Earn while Learn' ಎಂಬ ಉಕ್ತಿಗೆ ತಕ್ಕಂತೆ ಕಲಿಯುವಾಗಲೇ ಗಳಿಸಿ, ಸ್ವಾವಲಂಬನೆಯ ಬದುಕು ಕಟ್ಟಿಕೊಳ್ಳಲು ತರಬೇತಿಯನ್ನೂ ನೀಡುತ್ತವೆ. ಕುಟುಂಬದ ತಲಾ ಆದಾಯವನ್ನು ಹೆಚ್ಚಿಸುವಲ್ಲಿಯೂ ಇವುಗಳ ಪಾತ್ರ ಹಿರಿದಾಗಿದೆ.

ಕುಷ್ಟಗಿ ಪರಿಸರದಲ್ಲಿರುವ ವಿಶಿಷ್ಟ ಪಾರಂಪರಿಕ ಕಸಬುಗಳಾದ ಇಳಕಲ್ ಸೀರೆ, ಗುಳೇದಗುಡ್ಡದ ಖಣ, ಕಮತಗಿ ಪಟಗ, ಅಮೀನಗಡದ ಕರದಂಟು, ರಾಜೂರ ಸುಣ್ಣ, ಭಾಗ್ಯನಗರದ ಕೇಶೋದ್ಯಮ, ಕಿನ್ನಾಳ ಕಿಟ್ಟದ ಗೊಂಬೆಗಳು, ಹನಮಸಾಗರ ಕೌದಿ, ಕೊಪ್ಪಳ ಮಂಡಾಳು – ಇವುಗಳನ್ನೇ ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

**೩.೫.೧ ಇಳಕಲ್ಲ ಸೀರೆ ನೇಕಾರಿಕೆ**

**ಇಳಕಲ್ಲ ಸೀರೆ ನೇಕಾರರ ಹಿನ್ನೆಲೆ ಮತ್ತು ಮೂಲ :**

ಇಳಕಲ್ಲಿಗೂ ಸೀರೆಗೂ ಅವಿನಾಭಾವ ಸಂಬಂಧವಿದೆ. "ಉಟ್ಟರೆ ಇಳಕಲ್ಲ ಸೀರೆ ಉಡಬೇಕು, ತೊಟ್ಟರೆ ಗುಳೇದಗುಡ್ಡದ ಖಣ ತೊಡಬೇಕು" ಎಂಬ ಗಾದೆಯ ಹುಟ್ಟಿಗೂ ಕಾರಣವಾಗಿರುವ ಸೀರೆಯನ್ನು "ಇಳಕಲ್ಲ ಸೀರೆ ಅಂದ್ರs ನೂಲಿನಲ್ಲಿ ನೆಯ್ದ ವರ್ಣಮಯ ಕಾವ್ಯವಿದ್ದಂತೆ" ಎಂದು ಬೆರಗಾಗಿ ಬಣ್ಣಿಸಿದವರೂ ಇದ್ದಾರೆ! ಬಹು ಸಂಸ್ಕೃತಿಯ ನಾಡಿನಲ್ಲಿ ಸೀರೆಯನ್ನು 'ಭಾರತೀಯ ಉಡುಗೆ, ನಮ್ಮ ಸಂಸ್ಕೃತಿ' ಎಂದು ಒ(ಅ)ಪ್ಪಿಕೊಂಡಿದ್ದೇವೆ. ಅದರಲ್ಲೂ ಇಳಕಲ್ಲ ಸೀರೆಯನ್ನು ಜಾನಪದ ಸೊಗಡಿನ ಸೀರೆ, ಮುತ್ತೈದೆಯ ಲಕ್ಷಣ, 'ಭಾರತೀಯ ಸಂಸ್ಕೃತಿ' ಎಂದು ಕುಷ್ಟಗಿ ಪರಿಸರವೂ ಒಳಗೊಂಡಂತೆ ಉತ್ತರ ಕರ್ನಾಟಕದ ಜನರು ಹಾಗೂ ಮಹಾರಾಷ್ಟ್ರದ ಕೆಲವು ಜನಾಂಗಗಳು ಒ(ಅ)ಪ್ಪಿಕೊಂಡಿದ್ದಾರೆಂದರೆ ಈ ಸೀರೆಯ ಮಹತ್ವ ಅರ್ಥವಾಗುತ್ತದೆ.

ಭಾರತೀಯ ಸಂಸ್ಕೃತಿಯಲ್ಲಿ ಹಲವಾರು ನಂಬಿಕೆಗಳಿವೆ. ಆ ನಂಬಿಕೆಗಳಿಗೆ ದೈವತ್ವದ ಲೇಪನವೂ ಇರುವುದರಿಂದ ಅವುಗಳು ಪಾವಿತ್ರತೆಯನ್ನು ಪಡೆದಿರುತ್ತವೆ. ಸುಮಂಗಲೆಯರು ಯಾವುದೇ ಧಾರ್ಮಿಕ ಕಾರ್ಯಗಳಲ್ಲಿ ಎರಡೂ ಕಡೆಗೂ ದಡಿ ಇರುವ, ಎರಡೂ ಕಡೆಗೂ

ಸೆರಗಿರುವ ಸೀರೆಗಳನ್ನೇ ಉಟ್ಟುಕೊಳ್ಳಬೇಕೆಂಬ ನಿಯಮವುಂಟು. ಇನ್ನೂ ಕೆಲವು ಮಹಿಳೆಯರು ಹೊಲಗದ್ದೆಗಳಲ್ಲಿ ಕೆಲಸ ಮಾಡುವಾಗ ಕಚ್ಚೆ ಹಾಕಿ ಸೀರೆ ಉಡುತ್ತಾರೆ.ಲ್ಲಿಂತಹ ಸಂದರ್ಭಗಳಲ್ಲಿ ಇಳಕಲ್ಲ ಸೀರೆಗಿಂತಲೂ ಸೂಕ್ತ ಸೀರೆ ಸಿಕ್ಕುವುದಿಲ್ಲ. ಅಲ್ಲದೇ ಇತ್ತೀಚಿಗೆ ಸೀರೆಯ ವಿನ್ಯಾಸವನ್ನು ಆಧುನಿಕ ಮಹಿಳೆಯ ಮನೋಭಿಲಾಷೆಗೆ ತಕ್ಕಂತೆ ನೇಯ್ಯುತ್ತಿದ್ದಾರೆ. ಅಂದರೆ ಆಕರ್ಷಕ ಬಣ್ಣ, ಶೈಲಿ, ಸೀರೆಗೊಪ್ಪುವ ಸೀರೆಯೊಂದಿಗೆ ಕುಪ್ಪಸ ನೀಡುವಲ್ಲಿ ನೇಕಾರರು ತಮ್ಮನ್ನು ತಾವು ಬದಲಾಯಿಸಿಕೊಂಡಿದ್ದಾರೆ. ಬಡವರಿಗೂ, ಶ್ರೀಮಂತರಿಗೂ; ಹಳೆಯ ಕಾಲದ ಮಹಿಳೆಯರಿಗೂ, ಆಧುನಿಕ ಮಹಿಳೆಯರಿಗೂ ಒಪ್ಪಿಗೆಯಾಗುವಂತಹ ಸೀರೆಗಳನ್ನು ನೇಯ್ಯುತ್ತಿದ್ದಾರೆ. ಹೀಗಾಗಿ ಇಳಕಲ್ಲ ಸೀರೆಗೆ ಈಗಲೂ ತುಂಬಾ ಬೇಡಿಕೆಯಿದೆ. ಸೀರೆಗಳ ಮಾರಾಟ ಸ್ಪರ್ಧೆಯಲ್ಲಿ ತುಂಬಾನೇ ಪೈಪೋಟಿ ನೀಡುತ್ತಿದೆ.

**ಇಳಕಲ್ಲ ಪಟ್ಟಣದ ಮಾಹಿತಿ :**

**ಇಲಕಲ್ಲ** ಅಥವಾ **ಇಳಕಲ್** ಎಂಬ ಪಟ್ಟಣವು ಇದೀಗ ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನಲ್ಲಿದೆ. ಕುಷ್ಟಗಿಯಿಂದ ರಾಷ್ಟ್ರೀಯ ಹೆದ್ದಾರಿ–೫೦ರಲ್ಲಿ ೨೪ ಕಿ.ಮೀ. ಪಯಣಿಸಿದರೆ ಸಿಕ್ಕುವ ಪಟ್ಟಣ. ಹಿರೇ(ಬಲಕುಂದಿ)ಹಳ್ಳ ಹಾಗೂ ಸುಡುಗಾಡಿಹಳ್ಳಗಳಿಂದ ಸುತ್ತುವರಿಯಲ್ಪಟ್ಟಿದೆ. ಈ ಹಳ್ಳಗಳ ನೀರಿಗೂ, ಇಳಕಲ್ಲ ಸೀರೆಯ ಬಣ್ಣಕ್ಕೂ ಸಂಬಂಧವಿರುವುದನ್ನು ಮುಂದೆ ತಿಳಿಸಲಾಗಿದೆ.

೨೦೧೧ರ ಜನಗಣತಿಯ ಪ್ರಕಾರ ೧೧೪೭೨ ಮನೆಗಳು, ೬೦೨೪೨ ಜನಸಂಖ್ಯೆಯನ್ನು ಹೊಂದಿರುವ ಈ ಪಟ್ಟಣದಲ್ಲಿ ೩೦೨೬೫ ಪುರುಷರು ಹಾಗೂ ೨೯೯೭೭ ಸ್ತ್ರೀಯರಿದ್ದಾರೆ. ೧/೩ ಭಾಗದಷ್ಟು ಅಂದರೆ ಸುಮಾರು ೨೩೪೯೭ ಜನರು ಸೀರೆ ಉದ್ದಿಮೆಯನ್ನೇ ನಂಬಿದ್ದಾರೆ. ಇದರಲ್ಲಿ ೧೬೭೪೦ ಪುರುಷರು ಹಾಗೂ ೭೧೫೭ ಮಹಿಳೆಯರೂ ನೇಕಾರಿಕೆಯಲ್ಲಿ ತೊಡಗಿದ್ದಾರೆ. ಹಿಂದಿನ ಅಂಕಿ–ಸಂಖ್ಯೆಯನ್ನು ಗಮನಿಸಿದರೆ ನೇಕಾರಿಕೆ ಹಾಗೂ ಮಗ್ಗಗಳ ಸಂಖ್ಯೆ ಕ್ರಮೇಣ ಕ್ಷೀಣಿಸಿದೆ. ಹೀಗಿದ್ದಾಗ್ಯೂ ಈ ಪಟ್ಟಣದಲ್ಲಿ ಸುಮಾರು ೨೫೦ಕ್ಕೂ ಹೆಚ್ಚು ಕೈಮಗ್ಗಗಳು, ೨೭೦೦ಕ್ಕೂ ಅಧಿಕ ವಿದ್ಯುತ್ ಮಗ್ಗಗಳಿದ್ದು ಇಂದಿಗೂ 'ಅಪ್ಪಟ ನೇಕಾರರ ಊರು' ಎಂಬ ಸ್ಥಾನವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ!

ಬಹುಶಃ ಇಲ್ಲಿನ ಗ್ರ್ಯಾನೈಟ್ ಕಲ್ಲಿನ ಉದ್ಯಮವನ್ನು ಗಮನಿಸಿದರೆ ಇಳೆ(ಯಲ್ಲಾ)+ಕಲ್ಲು=ಇಳಕಲ್ಲು ಆಗಿರಲಿಕ್ಕೂ ಸಾಧ್ಯವಿದೆ! ಇಲಿನ ಕೆಂಪು ಗ್ರ್ಯಾನೈಟ್ ಕಲ್ಲು ವಿಶ್ವದ ಮಾರುಕಟ್ಟೆಯಲ್ಲಿ ಬಹುಬೇಗನೇ ಜನಪ್ರಿಯವಾಗಿ 'ಇಳಕಲ್ಲ ಚಾಕಲೇಟ್' ಎಂದೇ ಪ್ರಸಿದ್ಧಿಪಡೆಯಿತು. ಅಂತೆಯೇ ಇಳಕಲ್ಲು ಇದೀಗ 'ಗ್ರ್ಯಾನೈಟ್ ಕಲ್ಲಿನ ವಾಣಿಜ್ಯ ನಗರಿ' ಎಂತಲೂ ಕರೆಯಿಸಿಕೊಳ್ಳುತ್ತದೆ. ಈ ಪಟ್ಟಣದಲ್ಲಿರುವ ಕಿಲ್ಲಾ ಭಾಗವೇ ಹಳೆಯ ಇಳಕಲ್ಲು ಎನ್ನುತ್ತಾರೆ. ಅಲ್ಲಿ ಬರೀ ಕೃಷಿಕರೇ ಹೆಚ್ಚಾಗಿರುವುದರಿಂದಲೂ, ನೇಕಾರರೆಲ್ಲಾ ಕಿಲ್ಲಾದ ಹೊರಗೆ (ಹೊಸ ಊರಿನಲ್ಲಿ) ಇರುವುದರಿಂದಲೂ ನೇಕಾರಿಕೆ ಇಲ್ಲಿ ವಲಸೆ ಬಂದವರಿಂದ ಆರಂಭಗೊಂಡಿರಬಹುದೆಂದು ಊಹಿಸಬಹುದಾಗಿದೆಯಾದರೂ ಎಲ್ಲಿಂದ ಬಂದರು ಮತ್ತು ಯಾವಾಗ ಬಂದರು ಎಂಬುದರ ಬಗ್ಗೆ ನಿಖರ ಮಾಹಿತಿಗಳಿಲ್ಲ. "ಬಹುಶಃ ೮ನೇ ಶತಮಾನದಿಂದಲೂ ಇಲ್ಲಿ ಸೀರೆ ತಯಾರಿಕೆ ಆರಂಭವಾಗಿರುವ ಕುರುಹುಗಳು ಸಿಗುತ್ತವೆ. ವಿಜಯನಗರ ಹಾಗೂ ಸುತ್ತಮುತ್ತಲ ಆಡಳಿತಗಾರ ಪ್ರೋತ್ಸಾಹ ಹಾಗೂ ಒಲವಿನಿಂದ ಇಲ್ಲಿ ಸೀರೆ ಉದ್ಯಮ ತನ್ನ ನೆಲೆಯನ್ನು ಕಂಡಿತು." ಎಂಬ ಮಾಹಿತಿಯನ್ನು ಅಂತರ್ಜಾಲ ನೀಡುತ್ತದೆ!

**ಕುಷ್ಟಗಿ ಪರಿಸರದಲ್ಲಿ ಇಳಕಲ್ಲ ಸೀರೆ ಉದ್ಯಮ :**

ಇಳಕಲ್ಲ ಸೀರೆ ಕೇವಲ ಇಳಕಲ್ಲಿನಲ್ಲಿ ಮಾತ್ರ ನೇಯಲ್ಪಡದೇ ಕುಷ್ಟಗಿ ತಾಲ್ಲೂಕಿನ ಹನಮಸಾಗರ, ದೋಟಿಹಾಲ-ಕೇಸೂರು, ತಾವರಗೆರೆಯಲ್ಲಿಯೂ ನೇಯಲ್ಪಡುತ್ತವೆ. ರೋಣ ತಾಲ್ಲೂಕಿನ ಗಜೇಂದ್ರಗಡ, ಕೊಪ್ಪಳ ತಾಲ್ಲೂಕಿನ ಕಿನ್ನಾಳ, ಭಾಗ್ಯನಗರ ಹಾಗೆಯೇ ಬಾಗಲಕೋಟೆ ಜಿಲ್ಲೆಯ ಅಮೀನಗಡ, ಸೂಳಿಕೇರಿ, ಕಮತಗಿ, ಗುಳೆದಗುಡ್ಡ, ಶಿರೂರಗಳಂತಹ ಅನೇಕ ಅನೇಕ ಊರುಗಳಲ್ಲಿಯೂ ತಯಾರಾಗುತ್ತವೆ.

**ಹನಮಸಾಗರ** :- ಅಭಿನವ ತಿರುಪತಿಯೆಂದು ಕರೆಯಲ್ಪಡುವ ಕುಷ್ಟಗಿ ತಾಲ್ಲೂಕಿನ ಹನಮಸಾಗರವು ಒಂದು ಹೋಬಳಿ ಕೇಂದ್ರವಾಗಿದೆ. ಹಾಗೆಯೇ ಇಳಕಲ್ಲ ಸೀರೆಗಳ ಉದ್ಯಮದ ಊರಾಗಿದೆ. ೨೦೧೧ರ ಜನಗಣತಿಯ ಪ್ರಕಾರ ೨೭೯೧ ಮನೆಗಳು, ೧೪೮೭೪ ಜನಸಂಖ್ಯೆಯನ್ನು ಹೊಂದಿರುವ ಈ ಪಟ್ಟಣದಲ್ಲಿ ೭೫೪೨ ಪುರುಷರು ಹಾಗೂ ೭೩೩೨ ಸ್ತ್ರೀಯರಿದ್ದಾರೆ. ಸುಮಾರು ೮೫ ಕುಟುಂಬಗಳ ೨೮೫ ಜನರು ಸೀರೆ ಉದ್ದಿಮೆಯನ್ನೇ ನಂಬಿದ್ದಾರೆ. ಇದರಲ್ಲಿ ೧೯೯ ಪುರುಷರು ಹಾಗೂ ೮೬ ಮಹಿಳೆಯರೂ ನೇಕಾರಿಕೆಯಲ್ಲಿ ತೊಡಗಿದ್ದಾರೆ. ಹಿಂದಿನ ಅಂಕಿ-ಸಂಖ್ಯೆಯನ್ನು ಗಮನಿಸಿದರೆ ನೇಕಾರಿಕೆ

ಹಾಗೂ ಮಗ್ಗಗಳ ಸಂಖ್ಯೆ ಕ್ರಮೇಣ ಕ್ಷೀಣಿಸಿದೆ. ಹೀಗಿದ್ದಾಗ್ಯೂ ಈ ಪಟ್ಟಣದಲ್ಲಿ ಸುಮಾರು ೩೫೫ಕ್ಕೂ ಹೆಚ್ಚು ಕೈಮಗ್ಗಗಳು, ೨೦ಕ್ಕೂ ಅಧಿಕ ವಿದ್ಯುತ್ ಮಗ್ಗಗಳಿದ್ದು ಇಂದಿಗೂ *'ನೇಕಾರಿಕೆ ಪರಂಪರೆಯ ಊರು'* ಎಂಬ ಸ್ಥಾನವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ! "ಇಲ್ಲಿರುವ ನೇಕಾರರ ಸಹಕಾರಿ ಸಂಘವು ಸದಸ್ಯರ ಹಿತರಕ್ಷಣೆಗೆ ಟೊಂಕಕಟ್ಟಿ ನಿಂತಿಲ್ಲ; ಅದು ಕೇವಲ ಪಡಿತರಕ್ಕೆ ಮೀಸಲಾದಂತಿದೆ" ಎಂದು ಬೇಸರ ವ್ಯಕ್ತಪಡಿಸುತ್ತಾರೆ ಹನಮಸಾಗರದ ಪತ್ರಕರ್ತ ಹಾಗೂ ನೇಕಾರ ಸಂಪದ ಪತ್ರಿಕೆಯ ಗೌರವ ಸಲಹೆಗಾರ ರಾಜೇಶ ಕಂಬದ.

**ದೋಟಿಹಾಳ-ಕೇಸೂರು** :- ಸುಖಮುನಿ ಮುತ್ಯಾನ ಸುಕ್ಷೇತ್ರವೆಂದು ಕರೆಯಲ್ಪಡುವ ಕುಷ್ಟಗಿ ತಾಲ್ಲೂಕಿನ ದೋಟಿಹಾಳ-ಕೇಸೂರುಗಳು ಅವಳಿ ಗ್ರಾಮಗಳಾಗಿವೆ. ಹಾಗೆಯೇ ಇಳಕಲ್ಲ ಸೀರೆಗಳ ಉದ್ಯಮದ ಊರಾಗಿದೆ. ೨೦೧೧ರ ಜನಗಣತಿಯ ಪ್ರಕಾರ ೮೬೯+೩೮೮ ಮನೆಗಳು, ೪೨೭೫+೨೧೨೧ ಜನಸಂಖ್ಯೆಯನ್ನು ಹೊಂದಿರುವ ಈ ಊರಿನಲ್ಲಿ ೨೨೦೬+೧೦೭೪ ಪುರುಷರು ಹಾಗೂ ೨೦೬೯+೧೦೪೭ ಸ್ತ್ರೀಯರಿದ್ದಾರೆ. ಸುಮಾರು ೪೫೫ ಜನರು ಸೀರೆ ಉದ್ದಿಮೆಯನ್ನೇ ನಂಬಿದ್ದಾರೆ. ಇದರಲ್ಲಿ ೧೨೫ಕ್ಕೂ ಹೆಚ್ಚು ಕುಟುಂಬಗಳು, ೩೦೫ ಪುರುಷರು ಹಾಗೂ ೧೫೦ ಮಹಿಳೆಯರೂ ನೇಕಾರಿಕೆಯಲ್ಲಿ ತೊಡಗಿದ್ದಾರೆ. ಹಿಂದಿನ ಅಂಕಿ-ಸಂಖ್ಯೆಯನ್ನು ಗಮನಿಸಿದರೆ ನೇಕಾರಿಕೆ ಹಾಗೂ ಮಗ್ಗಗಳ ಸಂಖ್ಯೆ ಕ್ರಮೇಣ ಕ್ಷೀಣಿಸಿದೆ. ಹೀಗಿದ್ದಾಗ್ಯೂ ಈ ಊರಿನಲ್ಲಿ ಸುಮಾರು ೨೦೦ಕ್ಕೂ ಹೆಚ್ಚು ಕೈಮಗ್ಗಗಳು, ೮ಕ್ಕೂ ಅಧಿಕ ವಿದ್ಯುತ್ ಮಗ್ಗಗಳಿದ್ದು ಇಂದಿಗೂ *'ನೇಕಾರಿಕೆ ಪರಂಪರೆಯ ಊರು'* ಆಗಿದೆ! "ಹೈದ್ರಾಬಾದ್ ಕರ್ನಾಟಕ ವಿಮೋಚನೆಯ ಹೋರಾಟಗಾರ ಶ್ರೀ ಮುರಡಿ ಭೀಮಜ್ಜನವರ ಮಾರ್ಗದರ್ಶನ.., ಪುಂಡಲೀಕಪ್ಪ ಜ್ಞಾನಮೋಟೆಯವರ ಪ್ರೇರಣೆಯಿಂದ ಶ್ರೀ ವಿಠ್ಠಪ್ಪ ಕಂಠ್ಲಿ, ಪಂಪನಗೌಡ ಮಾಳ್ಗಿ, ಮಲ್ಲನಗೌಡ ಬಿಜ್ಜಳ, ಪುಂಡಲೀಕಪ್ಪ ಅರಳೀಕಟ್ಟಿ ಹಾಗೂ ವೀರಪ್ಪ ಕೊಳ್ಳಿಯವರ ನೇತೃತ್ವದಾಗ ನಮ್ಮ ಸಂಘ ೨೮ನೇ ಅಗಸ್ಟ್ ೧೯೫೫ರಲ್ಲಿ ಹೈದ್ರಾಬಾದ್ ನಿಜಾಮರಿಂದ ನೋಂದಣಿಯಾದ ಸ್ಥಾಪನೆ ಆಯ್ತಿ. ಸಂಘವು ಸದಸ್ಯರ ಹಿತರಕ್ಷಣೆಗೆ ಟೊಂಕಕಟ್ಟಿ ನಿಂತು ಮೂರು ಸಲ ರಾಷ್ಟ್ರ ಪ್ರಶಸ್ತಿ ಪಡೆದುಕೊಂಡೈತಿ! ಇಷ್ಟs ಅಲ್ಲ ಇಡೀ ಕರ್ನಾಟಕದಾಗ ಸೂಳೀಭಾವಿ ಸಂಘ ಬಿಟ್ರ.. ನಮ್ಮ ಸಂಘ ಎರಡನೇ ಸ್ಥಾನದಾಗ ಐತ್ರಿ" ಎಂದು ನಿವೃತ್ತಿ ಅಂಚಿನಲ್ಲಿರುವ ಕೈಮಗ್ಗ ನೇಕಾರ ಸಹಕಾರ ಉತ್ಪಾದಕ ಮತ್ತು ಮಾರಾಟ ಸಂಘದ ಕಾರ್ಯದರ್ಶಿ ಪಂಪಾಪತಿ ಮಾಳಗಿಯವರು ಹೆಮ್ಮೆಯಿಂದ ಹೇಳುತ್ತಾರೆ.

**ತಾವರಗೇರ** :- ಎಲ್ಲ ಬಗೆಯ 'ವ್ಯಾಪಾರಿಗಳ ತವರು' ಎಂದು ಕರೆಯಲ್ಪಡುವ ಕುಷ್ಟಗಿ ತಾಲ್ಲೂಕಿನ ತಾವರಗೇರ ಹೋಬಳಿ ಕೇಂದ್ರವಾಗಿದೆ. ಹಾಗೆಯೇ ಇಳಕಲ್ಲ ಸೀರೆಗಳ ಉದ್ಯಮದ ಊರಾಗಿದೆ. ೨೦೧೧ರ ಜನಗಣತಿಯ ಪ್ರಕಾರ ೩೦೫೧ ಮನೆಗಳು, ೧೬೬೪೭ ಜನಸಂಖ್ಯೆಯನ್ನು ಹೊಂದಿರುವ ಈ ಊರಿನಲ್ಲಿ ೮೪೧೧ ಪುರುಷರು ಹಾಗೂ ೮೨೩೨ ಸ್ತ್ರೀಯರಿದ್ದಾರೆ. ಸುಮಾರು ೭೫ ಕುಟುಂಬಗಳ ೪೩೧ ಜನರು ಸೀರೆ ಉದ್ದಿಮೆಯನ್ನೇ ನಂಬಿದ್ದಾರೆ. ಇದರಲ್ಲಿ ೩೦೦ ಪುರುಷರು ಹಾಗೂ ೧೩೧ ಮಹಿಳೆಯರೂ ನೇಕಾರಿಕೆಯಲ್ಲಿ ತೊಡಗಿದ್ದಾರೆ. ಹಿಂದಿನ ಅಂಕಿ-ಸಂಖ್ಯೆಯನ್ನು ಗಮನಿಸಿದರೆ ನೇಕಾರಿಕೆ ಹಾಗೂ ಮಗ್ಗಗಳ ಸಂಖ್ಯೆ ಕ್ರಮೇಣ ಕ್ಷೀಣಿಸಿದೆ. ಹೀಗಿದ್ದಾಗ್ಯೂ ಈ ಊರಿನಲ್ಲಿ ಸುಮಾರು ೬೬ಕ್ಕೂ ಹೆಚ್ಚು ಕೈಮಗ್ಗಗಳು, ೧೦ಕ್ಕೂ ಅಧಿಕ ವಿದ್ಯುತ್ ಮಗ್ಗಗಳಿದ್ದು ಇಂದಿಗೂ *'ನೇಕಾರಿಕೆ ಪರಂಪರೆಯ ಊರು'* ಆಗಿದೆ! ಇಲ್ಲಿರುವ ಅನೇಕ ನೇಕಾರರು ಕಚ್ಚಾ ಮಾಲನ್ನು ಇಳಕಲ್ಲಿನಿಂದ ತಂದು, ಸೀರೆ ತಯಾರಿಸಿ ಇಳಕಲ್ಲ ಅಥವಾ ಸ್ಥಳೀಯ ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಾರೆ. ಈ ಗ್ರಾಮದಲ್ಲಿ ನೇಕಾರ ಸಮುದಾಯ ಮಾತ್ರವಲ್ಲ ಬಳಿಗಾರ ಸಮುದಾಯದವರೂ ನೇಕಾರಿಕೆಯನ್ನು ಪಾರಂಪರಿಕ ಕಸಬನ್ನಾಗಿ ಮಾಡಿಕೊಂಡಿದ್ದಾರೆ.

"ಒಂದs ಕಡೀಗ್ಯ ಕುಂತೂ ಕುಂತು ಬೆನ್ನು ನೋವು, ಮೊಣಕಾಲು ನೋವು ಬಂದಾವ್ರಿ, ಒಂದs ಕಡೀಕ ನೋಡಿ ನೋಡಿ ದೃಷ್ಟಿ ಮಂಜ್ ಆಗ್ಯಾವ್ರಿ. ಈ ನೇಕಾರಿಕಿ ಬಿಟ್ರ ಬ್ಯಾರೆ ದಗದ ಗೊತ್ತೇ ಇಲ್ರಿ, ಹೀಂಗಾಗಿ ನಮ್ಗ ಸೀರಿ ನೇಕಾರಿಕಿ ಬಿಡುಗಡಿ ಇಲ್ರಿ" ಎಂದು ಮಹಿಳಾ ನೇಕಾರತಿ ನಿರ್ಮಲಾ ಉಪ್ಪಳ ತಮ್ಮ ನೋವನ್ನು ತೋಡಿಕೊಳ್ಳುತ್ತಾಳೆ.

"ಬರೀ ಭಾಷಣದಾಗs ನೇಕಾರರಿಗೆ ಸೌಲಭ್ಯ ಸಿಗ್ತಾವ್ರಿ. ಆದ್ರ... ಖರೇ ಅಂದ್ರೂ ಹೇಳ್ತೀನ್ರಿ ಬ್ಯಾಂಕಿನ್ಯಾಗ ಸಾಲ ಕೇಳಿದ್ರೂ ನೇಕಾರರಿ ಸಾಲ ಕೊಡಾಕ ಹಿಂದ್ಮುಂದೂ ನೋಡ್ತಾರ್ರಿ, ಯಾಕಂದ್ರ... ನಮ್ಗ ಬರೋ ಕೂಲಿ ಅಷ್ಟಕ್ಕಷ್ಟs ಐತೆಲ್ರಿ, ಅದ್ಕs ನಮ್ಮಂಥವ್ರಿಗೆ ಸಾಲ ಕೊಡಾಂಗಿಲ್ರಿ, ನಮ್ಮ ಕಷ್ಟ ಯಾರಿಗೆ ಹೇಳೋಣ್ರಿ?" ತಮ್ಮ ಆರ್ಥಿಕ ಸಂಕಷ್ಟವನ್ನು ಹೇಳಿಕೊಂಡವರು ಬಸವರಾಜ ಕಳಕಪ್ಪ ಉಪ್ಪಳ.

ಹೀಗೆ ತಾವರಗೇರ ಗ್ರಾಮದ ನೇಕಾರರು ಹೇಳಿಕೆಯನ್ನು ಕೇಳಿದರೆ 'ಮಾನ ಮುಚ್ಚುವವರ ಬದುಕು ಬೆತ್ತಲೆ' ಎಂಬಂತಾಗಿರುವುದು ಕಂಡು ಬಂದಿತು.

**ನೇಕಾರರ ಮತ್ತು ನೇಕಾರಿಕೆಯ ಹಿನ್ನೆಲೆ ಮತ್ತು ಮೂಲ :**

ಆದಿಮಾನವನು ಬಿಸಿಲು, ಚಳಿ ಹಾಗೂ ಮಳೆಯಿಂದ ತನ್ನ ದೇಹವನ್ನು ರಕ್ಷಿಸಿಕೊಳ್ಳಲು ಎಲೆ, ಮರದ ತೊಗಟೆ ಇಲ್ಲವೇ ಪ್ರಾಣಿಗಳ ಚರ್ಮವನ್ನೇ ಬಳಸುತ್ತಿದ್ದ ವಿಷಯವನ್ನು ಇತಿಹಾಸದಿಂದ ತಿಳಿಯಬಹುದು. ಹಾಗೆಯೇ ಕ್ರಮೇಣ ಮೂಡಿದ ಸೌಂದರ್ಯದ ಕಲ್ಪನೆಯಿಂದಾಗಿ ಮಾನವ ತನ್ನ ಮಾನವ, ಗುಪ್ತಾಂಗಗಳ ಅರಿವು ಉಂಟಾದ ಮೇಲೆ ಅವುಗಳ ರಕ್ಷಣೆಗಾಗಿ ಉಡುಪು ತೊಡುವ ಕೌಶಲ ಮೂಡಿರಬಹುದು. ಆದರೆ.. ಇಂದು ನಂಬಲಸಾಧ್ಯವೆನಿಸುವಂತೆ ವಸನದ ವ್ಯಸನಿಯಾಗಿದ್ದಾನೆ! ಅಂದು.. ಮಾನವನನ್ನು ದೇವರು ಸೃಷ್ಟಿಸಿದರೆ, ಇಂದು.. ಸುಂದರ ಮಾನವನನ್ನು ಉಡುಪುಗಳು ಸೃಷ್ಟಿಸುತ್ತಿವೆ!!

**ನೇಕಾರಿಕೆಯ ಐತಿಹಾಸಿಕ ಹಿನ್ನೆಲೆ :**

ಹಳೆ ಶಿಲಾಯುಗದಲ್ಲಿ ಚರ್ಮದಿಂದ ಉಡುಗೆ ತಯಾರಿಸುವ ಕಲೆ ಉತ್ತರ ಯೂರೋಪಿನಲ್ಲಿ ಪ್ರಾರಂಭವಾಯಿತೆಂದು ತಜ್ಞರ ಅಭಿಪ್ರಾಯವಾಗಿದೆ. ಭಾರತದಲ್ಲಿ ನೇಕಾರಿಕೆಯ ಕಲೆಯು ಅತ್ಯಂತ ಪ್ರಾಚೀನವಾದುದು ಎಂಬುದಕ್ಕೆ ಹರಪ್ಪ ಮಹಂಜೋದಾರೊದಲ್ಲಿ ದೊರೆತ ಅವಶೇಷಗಳೇ ಸಾಕ್ಷಿಯಾಗಿವೆ. ಕ್ರಿ.ಪೂ. ೨೮೦೦–೧೮೦೦ರ ಸಿಂಧೂ ಬಯಲಿನ ನಾಗರೀಕತೆಯ ಕಾಲದಲ್ಲಿಯೇ ತಕಲಿಯಂತಹ ಉಪಕರಣ ದೊರೆತಿವೆ.

"ಭಾರತದ ಬಟ್ಟೆ ಈಜಿಪ್ಟಿನ ಮಮ್ಮಿಗಳ ಸಿಂಗಾರಕ್ಕೆ ಬಳಕೆಯಾದ ಬಗ್ಗೆ ವರದಿಗಳಿವೆ."[೧೭] "ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲ್ಲೂಕಿನ ತೆಕ್ಕಲಕೋಟೆಯ ಉತ್ಖನನದಲ್ಲಿ ಚಕ್ರದಂತೆ ದುಂಡನೆಯ, ನಡುವೆ ತೂತು ಕೊರೆದ ಮಡಕೆಯ ತುಂಡುಗಳು ದೊರೆತಿವೆ. ಬಹುಶಃ ಅವುಗಳನ್ನು ನೂಲು ತೆಗೆಯುವ 'ತಕಲಿ'ಗಳನ್ನಾಗಿ ಬಳಸಿರಬಹುದು." [೧೮] ಎಂದರೆ ನೂಲು ಮತ್ತು ನೆಯ್ಗೆ ಅಂದಿನ ಜನರಿಗೆ ತಿಳಿದಿತ್ತೆಂದು ಹೇಳಬಹುದಾಗಿದೆ.

ಅಸ್ಪೃಶ್ಯತೆಯನ್ನು ಪ್ರತಿಭಟಿಸಿದ ಪ್ರಥಮ ಸುಧಾರಕ; ಕನ್ನಡದ ಆದಿ ವಚನಕಾರ ನೇಕಾರ ದೇವರ(ಜೇಡರ) ದಾಸಿಮಯ್ಯ ಹಾಗೂ ತಮಿಳಿನ ನೇಕಾರ ಸಂತ ತಿರುವಳ್ಳರ್‌ರವರ ಭಾವನಾತ್ಮಕ ಹೇಳಿಕೆಗಳು ಇಂದಿಗೂ ನೇಕಾರರಲ್ಲಿವೆ. ಇವರೀರ್ವರೂ ನೇಕಾರ ಕುಲದವರೆಂಬು ಇಲ್ಲಿ ಮಹತ್ವವನ್ನು ಪಡೆದುಕೊಂಡಿದೆ.

'ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎಂದು ಕನಕದಾಸರು ಹೇಳಿದಂತೆ ಹೊಟ್ಟೆಗಾಗಿ ಅನ್ನ-ನೀರು(ರೈತ) ಇದು ನಿಸರ್ಗದ ಕೊಡುಗೆಯೇ ಸರಿ! ಆದರೆ ಬಟ್ಟೆಯನ್ನು ಮನುಷ್ಯನೇ(ನೇಕಾರ) ನಿರ್ಮಿಸಲು ಸಾಧ್ಯ! 'ಮೇಟಿಯಿಂದ ಅನ್ನ, ರಾಟಿಯಿಂದ ವಸ್ತ್ರ' ಅಥವಾ 'ಲಾಳಿ-ಮೇಳಿ ಸಮ ಇದ್ರೆ ನಾಡು' ಸುಭಿಕ್ಷವಾಗಿರುತ್ತದೆ.

"ಗ್ರೀಕ್ ಇತಿಹಾಸಕಾರ ಹೆರಡೊಟಸ್‌ನು ಭಾರತೀಯ ಯೋಧರು ಯುದ್ಧ ಸಮಯದಲ್ಲಿ ಅರಳೆ(ಹತ್ತಿ)ಬಟ್ಟೆ ಧರಿಸುತ್ತಿದ್ದುದನ್ನು ಹೇಳುತ್ತಾನೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ನೇಯ್ಗೆ ಉದ್ಯಮದ ಪ್ರಸ್ತಾಪವಿದೆ. ಮೆಗಾಸ್ತನೀಸನು ಇಂಡಿಕಾ ಗ್ರಂಥದಲ್ಲಿ ಭಾರತೀಯರು ಧರಿಸುತ್ತಿದ್ದ ಹೂ ನಕ್ಷೆಯ ಮಕಮಲ್ಲಿನ ಉಡುಗೆಗಳ ಬಗ್ಗೆ ಹೇಳುತ್ತಾನೆ."[೧೯] ಮೊಟ್ಟಮೊದಲು ಕುರಿಗಳ ರೋಮದಿಂದ ತಯಾರಿಸಿದ ಕೈಮಗ್ಗದ ಬಟ್ಟೆ ಚಾಲನೆಗೆ ಬಂತು. ನಂತರ ಆಫ್ರಿಕಾ ಖಂಡದಲ್ಲಿ ಸಿಕ್ಕ ಹತ್ತಿಯ ಗಿಡದಿಂದ ನೂಲು ತೆಗೆಯಲು ಕಲಿತಾಗ ಇಡೀ ಜಗತ್ತಿನಲ್ಲಿ ಹತ್ತಿ ವ್ಯಾಪಿಸಿಕೊಂಡು ನೂಲಿನಿಂದ ಮಾಡಿದ ಬಟ್ಟೆ ಚಾಲ್ತಿಗೆ ಬಂತು. ಕೈಮಗ್ಗ ಕ್ಷೇತ್ರದಲ್ಲಿ ಭಾರತ ತಯಾರಿಸಿದ ವಸ್ತುಗಳಿಗೆ ವಿಶೇಷ ಬೇಡಿಕೆಯಿತ್ತು. ಹತ್ತಿಯ ಜೊತೆಗೆ ರೇಷ್ಮೆ ಬಟ್ಟೆಯನ್ನು ನೇಯ್ದು ಕಲೆಗಾರಿಕೆಯನ್ನು ಕರಗತ ಮಾಡಿಕೊಂಡ ಭಾರತಿಯರು ಇದನ್ನು ಸಪ್ತ ಸಮುದ್ರಾಚೆ ಅರಬ್, ಯೂರೋಪ್ ಹಾಗೂ ಪರ್ಶಿಯಾ ದೇಶಗಳಿಗೆ ರಫ್ತು ಮಾಡುತ್ತಿದ್ದರು. ಬಿದಿರಿನಿಂದ ತಯಾರಿಸಿದ ಸೂಕ್ಷ್ಮ ನೂಲನ್ನು ನೇಯುವ ಕೈಮಗ್ಗಗಳು ನವಿರಾದ ಬಟ್ಟೆಗಳನ್ನು ತಯಾರಿಸಿ ವಿಶ್ವದಲ್ಲೇ 'ಮಸ್ಲಿನ್' ಬಟ್ಟೆಯ ಖ್ಯಾತಿ ಪಡೆದಿದ್ದವು. ಈ ಖ್ಯಾತಿಯು ನೈಲನ್ ಬಟ್ಟೆಗಳ ಯುಗದ ಆರಂಭದವರೆಗೂ ಹಾಗೆಯೇ ಇತ್ತೆಂಬುದನ್ನು ಇತಿಹಾಸ ಹೇಳುತ್ತದೆ.

**ಸೀರೆಯ ಪೌರಾಣಿಕ, ಐತಿಹಾಸಿಕ ಹಾಗೂ ಜನಪದ ಹಿನ್ನೆಲೆ :**

**ಪೌರಾಣಿಕ:**

ನೇಕಾರಿಕೆ ವಿಶ್ವವ್ಯಾಪಿಯಾದ ವೃತ್ತಿ ಎಂದು ಹೇಳಬಹುದು. ನೇಕಾರರ ಮೂಲಪುರುಷ ದೇವಾಂಗ ದೇವತೆಗಳಾದ ಲಕ್ಷ್ಮಿಗೆ ಶುಭ್ರಾಂಬರ, ಭೂದೇವಿಗೆ ರಕ್ತಾಂಬರ, ಸರಸ್ವತಿಗೆ ಧವಳಾಂಬರ ಸೀರೆ ನೇಯ್ದುಕೊಟ್ಟಿದ್ದು ಸ್ಕಂದ ಪುರಾಣದಲ್ಲಿ ಹೇಳಲಾಗಿದೆ. ಮಹಾಭಾರತದಲ್ಲಿ ಶ್ರೀಕೃಷ್ಣನು ಗೋಪಿಕಾ ಸ್ತ್ರೀಯರ ಸೀರೆಯನ್ನು ಕದಿಯುವ ಹಾಗೂ

ದ್ರೌಪದಿಯ ವಸ್ತ್ರಾಪಹರಣ ಸಂದರ್ಭಗಳೆಲ್ಲಾ ಸೀರೆಯ ಪ್ರಾಚೀನತೆಯನ್ನು ಸಾಕ್ಷೀಕರಿಸುತ್ತವೆ.

**ಐತಿಹಾಸಿಕ :**

ತಮಿಳಿನ ಶಿಲಪ್ಪಧಿಕಾರಂ, ಬಾಣಭಟ್ಟನ ಕಾದಂಬರಿ ಹಾಗೂ ಗಂಗೈಕೊಂಡಚೋಳನ ಚೋಳಪುರಂ ಶಿಲಾಶಾಸನದಲ್ಲಿ ಸೀರೆಯ ಉಲ್ಲೇಖವಿದೆ. ಕ್ರಿ.ಶ. ೧–೬ರಲ್ಲಿನ ಗಾಂಧಾರ, ಮಥುರಾ ಮತ್ತು ಗುಪ್ತರ ಶಿಲ್ಪಕಲೆಯಲ್ಲಿ ಸೀರೆಯನ್ನೂ ಕಾಣಬಹುದು. ರಾಜಾರವಿವರ್ಮನ ಕುಂಚಕಲೆಯಲ್ಲೂ ಸೀರೆಯುಟ್ಟ ನೀರೆಯನ್ನು ನೋಡಬಹುದು. ಚೈನಾ ಶಿಲ್ಕು ಭಾರತಕ್ಕೆ ಬಂದು ಸೀರೆಯಾದ ದಂತಕತೆಗಳಿವೆ. ಅಲ್ಲದೇ ಚೀನಾದ ಯಾತ್ರಿಕರಾದ ಫಾಯಿಯಾನ ಹಾಗೂ ಹ್ಯೂ–ಯೆನ್–ತ್ಸಾಯಾಂಗ್‌ರವರು ಭಾರತದ ಸೀರೆ ನೇಕಾರಿಕೆಯನ್ನು ತಮ್ಮ ಪ್ರವಾಸ ಕಥನದಲ್ಲಿ ಉಲ್ಲೇಖಿಸಿದ್ದನ್ನು ಅಲ್ಲಗಳೆಯುವಂತಿಲ್ಲ. ನೇಪಾಳದ ದೊರೆ ಮನೆತನದವರು ಪ್ರತಿ ವರ್ಷ ದಸರಾ ಹಬ್ಬದಲ್ಲಿ ಮಾತ್ರ ಈಗಲೂ ಸಾಂಪ್ರದಾಯಿಕವಾಗಿ ಸೀರೆ ನೇಯುವುದರಿಂದ ಬಹುಶಃ ಅವರೂ ಮೂಲತಃ ನೇಕಾರರಿರಬಹುದೆಂದು ಹೇಳಿಕೊಳ್ಳಲಾಗುತ್ತಿದೆ!

**ಜನಪದ ಸಾಹಿತ್ಯ :**

➢ " ಗೀತೆ ಎಳ್ಳು ಹೂವಿನ ಸೀರೆ ಬೆಳ್ಳಿ ಕಾಲುಂಗುರ
ಹಳ್ಳದ ನೀರು ತರತಾಳ । ನನ ಗೆಳತಿ
ಹಳ್ಳಿ ಗೌಡರ ಹಿರಿ ಮಗಳು ॥

➢ ಬಾಳಿಪಟ್ಟಿ ಸೀರೆ ನಾನುಟ್ಟು ಬರುವಾಗ
ಬಹಳ ದುಃಖ್ಯಾಕ ಹಡದವ್ವ । ನಿನಮನಿಯಾಗ
ಗಂಡಮಗನೇನು ನಾ ಇರಲಾಕ॥

➢ ತೊಟ್ಟಿಲ ಹೊತ್ಕೊಂಡು ತೌರ್ಬಣ್ಣ ಉಟ್ಕೊಂಡು
ಅಪ್ಪ ಕೊಟ್ಟೆಮ್ಮಿ ಹೊಡಕೊಂಡು। ತೌರೂರ
ತಿಟ್ಟತ್ತಿ ತಿರುಗಿ ನೋಡ್ಯಾಳ॥" [೨೦]

ಹೀಗೆ ಜನಪದರ ಸಂಸ್ಕೃತಿ, ಆಚಾರ–ವಿಚಾರ, ಕಲೆ, ಅಭಿರುಚಿ, ಆಸಕ್ತಿಗಳನ್ನು ಅಭಿವ್ಯಕ್ತಪಡಿಸುವ ಅನೇಕ ವಿಷಯಗಳಲ್ಲಿ ಈ ಸೀರೆಯ ಸಾಂಸ್ಕೃತಿಕ ಪರಂಪರೆ ಹಾಸುಹೊಕ್ಕಾಗಿದೆ.

**ನೇಕಾರರಲ್ಲಿ ಜಾತಿ–ಉಪಜಾತಿಗಳು :**

ನೇಕಾರರಲ್ಲಿ ಪ್ರಮುಖವಾಗಿ ದೇವಾಂಗ, ಪಟ್ಟಸಾಲಿ, ಪದ್ಮಶಾಲಿ, ಸ್ವಕುಳಸಾಳಿ, ತೊಗಟವೀರ, ಕುರುಹಿನಶೆಟ್ಟಿ ಹಾಗೂ ಹಟಗಾರ ಎಂಬ ೭ ಪಂಗಡಗಳನ್ನು ಕಾಣಬಹುದು. ಕರ್ನಾಟಕದಲ್ಲಿ ನೇಯ್ಗೆ ವೃತ್ತಿಯಲ್ಲಿ ತೊಡಗಿದ ಸುಮಾರು ೨೬ ಜಾತಿ–ಉಪಜಾತಿಗಳಿವೆ. ಅದರಲ್ಲಿ ಪ್ರಮುಖವಾಗಿ ನೇಕಾರ, ಜಾಡ(ಜೇಡ), ದೇವಾಂಗ, ಹಟಗಾರ, ದೇವಸಾಲಿ, ಚೆಟ್ಟಿಯಾರ್, ಕುರುಹಿನಶೆಟ್ಟಿ, ಕರಿ ಕುರುಹಿನಶೆಟ್ಟಿ, ಹಿರೆ ಕುರುಹಿನಶೆಟ್ಟಿ, ಲಿಂಗಾಯತ ಕುರುಹಿನಶೆಟ್ಟಿ, ಲಿಂಗಾಯತ ನೇಯ್ಗಿ, ಲಿಂಗಾಯತ ನೇಕಾರ, ಹಿಂದೂ ಲಿಂಗವಂತ ಜೇಡ, ಲಿಂಗಾಯತ ವೀರಶೈವ ಹಟಗಾರ, ನಾಥ ನೇಕಾರ, ನೇಯ್ಕಾರ್, ಪದ್ಮಶಾಲಿ, ಪದ್ಮಶಾಲೆ, ಪಟ್ಟಸಾಲೆ, ಪಟ್ಟಸಾಲಿ, ಸಾಲೆ(ಸಾಳೆ), ಸಾಳೇರ, ಶೆಟ್ಟಿಗಾರ, ಶಿವಸಮಾಸಾಲಿ ಶಿವಧ್ವಜ, ಸ್ವಕುಳಸಾಳಿ, ತೊಗಟ, ತೊಗಟವೀರ, ತೊಗಟವೀರಕ್ಷತ್ರಿಯ, ತೊಗಟವೀರಶೆಟ್ಟಿ ಹಾಗೂ ವಿಂಕಾರ ಎಂದು ಗುರುತಿಸಲಾಗಿದೆ.

ದೇವಾಂಗ ಹಾಗೂ ಪಟ್ಟಸಾಲಿಯವರಿಗೆ ಸಾಲೇಶ್ವರ, ಪದ್ಮಶಾಲಿಯವರಿಗೆ ಮಾರ್ಕಂಡೇಶ್ವರ, ಸ್ವಕುಳಸಾಳಿ[ಸ್ವಂತ+ಕುಲ+ಸಾಲಿಕ–ಸ್ವಂತ ಕುಲಕ್ಕೆ ಸಾಲಿಕ(ಪೀತಾಂಬರ ನೆಯ್ದು ಸಹಾಯಮಾಡುವವ)] ಯವರಿಗೆ ದತ್ತಾತ್ರೇಯ(ಜಿಹ್ವೇಶ್ವರ) ಹಾಗೂ ಬನಶಂಕರಿದೇವಿ ಆರಾಧ್ಯದೈವರಾಗಿದ್ದಾರೆ. ಇವುಗಳಲ್ಲಿಯೇ ಕೆಲವು ಉಪಜಾತಿಗಳಿದ್ದು ಅರಿಷಿಣ ಪತ್ತಲ–ಬಿಳಿ ಪತ್ತಲ, ಇವರು ಪಕ್ಕಾ ಸಸ್ಯಾಹಾರಿಗಳು. ಜಾಡರು ಮತ್ತು ಕುರುಹಿನಶೆಟ್ಟಿಯವರಿಗೆ ನೀಲಕಂಠೇಶ್ವರ ಆರಾಧ್ಯದೈವರಾಗಿದ್ದಾರೆ. ಕೆಲವರು ಮಾಂಸಾಹಾರಿಗಳಾಗಿದ್ದಾರೆ. ಹಿರೇ ಕುರುಣಿ (ಸಸ್ಯಾಹಾರಿ)–ಚಿಕ್ಕ ಕುರುಣಿ (ಮಾಂಸಹಾರಿ), ಕರಿ ಜಾಡರು–ಬಿಳಿ ಜಾಡರು ಉಪಪಂಗಡಗಳಿವೆ. ಸ್ತ್ರೀಯರ ಸೀರೆಗಳನ್ನು ಸಾಮಾನ್ಯವಾಗಿ ಕಪ್ಪು/ಕರಿ ನೂಲಿನಿಂದ ನೇಯುವುದರಿಂದ ಇವರನ್ನು ಕರಿಜಾಡರೆಂದೂ, ಪುರುಷರ ಧೋತಿ ಮತ್ತು ಅಂಗಿ ಬಟ್ಟೆಯನ್ನು ಬಿಳಿ ನೂಲಿನಿಂದ ನೇಯುವುದರಿಂದ ಇವರನ್ನು ಬಿಳಿಜಾಡರೆಂದೂ ಕರೆಯುವುದುಂಟು.

ಆದರೆ... ಕುಲಕಸಬಿನಲ್ಲಿ ಬದಲಾವಣೆಯಾದಂತೆ ಸೀರೆ ನೇಯ್ಗೆಯ ವೃತ್ತಿ ಯಾವುದೇ ಒಂದು ಜಾತಿಗೆ ಮೀಸಲಾಗಿರದೇ ಬಹುತೇಕ ಲಿಂಗಾಯತರು, ಪಟೇಗಾರರು, ಉಪ್ಪಾರರು, ವಾಲ್ಮೀಕಿ, ಹರಿಜನ, ಕುರುಬರು ಮುಂತಾದ ಜಾತಿಗಳವರು ಹಾಗೂ ಮುಸ್ಲಿಂ ಧರ್ಮೀಯರು ನೇಕಾರಿಕೆ ವೃತ್ತಿಯಲ್ಲಿ ತೊಡಗಿಕೊಂಡಿದ್ದಾರೆ!

“ಇಳಕಲ್ಲ ಸೀರೆ ತಯಾರಾಗುವ ವಿಧಾನ :

ನೇಯ್ಗೆಯಲ್ಲಿ ಸಾಮಾನ್ಯವಾಗಿ ಮೂರು ಹಂತಗಳಿವೆ.

೧ ಪೂರ್ವ ತಯಾರಿ ಹಂತ

- ನೂಲಿಗೆ ಬಣ್ಣ ಹಾಕುವುದು (ಡೈಯಿಂಗ್)

  ಓರಣಗೊಳಿಸುವುದು * ಮಾರಾಟ ಹಂತ
- ನೂಲು ಸಡಿಲಿಸುವುದು ( ಲೂಸ್‌ನಿಂಗ್)
- ಹಾಸು ತಯಾರಿಸುವುದು (ವಾರ್ಫಿಂಗ್)
- ಅಂಟು ಹಾಕುವುದು (ಸೀಜಿಂಗ್)
- ವಂಕಿ ಹೊಯ್ಯುವುದು
- ಟಾಣ / ಕೊಂಡಿ ಹಾಕುವುದು
- ಹಣಗಿ ಕೆಚ್ಚುವುದು (ಪೀಸಿಂಗ್)
- ಮಡಕಿ / ಮಗ್ಗಕ್ಕೆ ಕಟ್ಟುವುದು

೨ ನೇಯುವ ಹಂತ

೩ ನೇಯ್ಗೆಯ ನಂತರದ ಹಚಿತ

* ಓರಣಗೊಳಿಸುವುದು

* ಮಾರಾಟ ಹಂತ ” [೨೧]

**ವಿಧಾನ :** ಹತ್ತಿಯನ್ನು ಹಿಂಜುವ ಮೂಲಕ ಬೀಜವನ್ನು ತೆಗೆದಾಗ ಅರಳಿಯಾಗುತ್ತದೆ. ಅರಳಿ ಹಿಂಜಲ್ಪಟ್ಟು ಹಂಜಿಯಾಗಿ; ಹಂಜಿ ನೂಲಾಗಿ ರೂಪುಗೊಳ್ಳುತ್ತದೆ. ಹಾಗೆಯೇ ರೇಷ್ಮೆ ಕೂಡಾ ನೂಲಾಗುತ್ತದೆ, ಆರ್ಟ ಸಿಲ್ಕು(ಚಮಕಾ)ಕೂಡಾ ನೂಲಾಗುತ್ತದೆ. ಈ ನೂಲನ್ನು ಬಯಸಿದಂತಹ ಬಣ್ಣ ಬಣ್ಣದ ಟಬ್ಬುಗಳಿಗೆ ತೋಡಿ, ನಂತರ ಮೀನಿನ ಸರಿಯಲ್ಲಿ ಮಿಶ್ರಣ ಮಾಡಿ, ಹಿಂಡಿ, ಒಣಗಿದ ನಂತರ ಎಳೆಗಳನ್ನು ಬಿಡಿಸಿ ಲಡಿಗೆ ತೋಡುತ್ತಾರೆ. ಇದಕ್ಕೆ ‘ಜಾಳಿಸುವುದು’ ಎಂದು ಹೆಸರು. ಬಣ್ಣ ಪಡೆದ ಒಡ್ಲದ ಒಂದೊಂದು ಎಳೆಗಳಿಗೆ ಸೆರಗಿನ ಎಳೆಗಳನ್ನು ಕೂಡಿಸುವುದಕ್ಕೆ ‘ಠಾಣ’ ಎನ್ನುತ್ತಾರೆ. ಆಮೇಲೆ ಸೆರಗಿನ ಎಳೆಗಳನ್ನು ‘ಹಣಗಿ’ ಎಳೆಗಳಿಗೆ ಕೂಡಿಸುತ್ತಾರೆದಿದಕ್ಕೆ ‘ಹಣಗಿ ಕೆಚ್ಚುವುದು’ ಎನ್ನುತ್ತಾರೆ. ಈ ಎಳೆಗಳು ಸರಳವಾಗಿ

ಬಿಡುವಂತಾಗಲು ಸುತ್ತುವುದನ್ನು 'ಹೈಟ'ಗೆ ತೋಡುವುದು ಎನ್ನುತ್ತಾರೆ. ಹೀಗೆ ತೋಡಿದ ಹೈಟಗೆ ಚೆನ್ನಾಗಿ ತಣ್ಣೀರು ಬಡಿದು, ಕೈ ರಾಟಿಯ ಮುಖಾಂತರ ಕಂಡಕಿಗೆ ಸುತ್ತುತ್ತಾರೆ. ನಂತರ ಕಂಡಕಿಗಳನ್ನು ಬುಟ್ಟಿಯಲ್ಲಿ ಹಾಕಿ ಬಿಸಿನಲ್ಲಿ ಒಣಗಿಸುತ್ತಾರೆ. ಬಣ್ಣ ಬಣ್ಣದ ನೂಲನ್ನು ಸೀರೆಯ ರೂಪಕ್ಕೆ ತಕ್ಕಂತೆ ಹಾಸು ಹೊಯ್ಯುತ್ತಾರೆ. ಇದೇ ಹಾಸನ್ನು ಹಣಿಗೆ ಕೆಚ್ಚಿ, ಕಾಂಡಕಿ ಲಾಳಿ ಸುತ್ತಿ ಮಗ್ಗಕ್ಕೆ ಅಣಿಗೊಳಿಸುತ್ತಾರೆ. ಮಗ್ಗದ ತೆಗ್ಗಿನಲ್ಲಿಯೇ ಅರ್ಧ ದೇಹ ಇಳಿಬಿಟ್ಟ ಜಾಡ(ನೇಕಾರ) ಹಾಸಿನ ಅಣಿ ಎತ್ತುವ ಮೂಲಕ , ಚುಂಗಿ ಕಟ್ಟಿದ ಮೇಲೆ ಸೀರೆಯ ಹೊಟ್ಟೆಯ ನೂಲಿನ ಮಧ್ಯದಲ್ಲಿ ಲಾಳಿ ಓಡಿಸುತ್ತಾ ನೂಲು ಬಿಟ್ಟು ನೇಯುತ್ತಾನೆ. ಸೆರಗನ್ನು ಸಿದ್ಧಗೊಳಿಸಲು ಇಬ್ಬರಾದರೆ ಬೇಸರವಾಗದಂತೆ, ಬೇಗನೇ ಮಾಡಬಹುದು. ಹೀಗೆ ಸಿದ್ಧವಾದ ಸೀರೆಯನ್ನು ವ್ಯಾಪಾರಸ್ಥನಿಗೆ ನೀಡಿ ಮಜೂರಿ ಪಡೆಯುತ್ತಾನೆ.

ಸೀರೆ ನೇಕಾರಿಕೆ ತುಂಬಾ ಸೂಕ್ಷ್ಮವಾದ ಕೆಲಸವಾಗಿದ್ದು, ಒಂದು ಎಳೆ(ಅಣಿ) ಆಚೆ-ಈಚೆಯಾದರೂ ಮುಗೀತು, ಸೀರೆಯ ಆಯ ತಪ್ಪಿದಂತೆ! ಅಂತೆಯೇ 'ಒಂದು ಅಣಿ ತಪ್ಪಿದರೆ ಸಾವಿರ ಅಣಿ ತಪ್ಪುತ್ತದೆ' ಎಂಬ ಗಾದೆಯ ಉಗಮಕ್ಕೆ ಕಾರಣವಾಗಿದೆ. *"ಈ ಕಸಬಿನ್ಯಾಗ ಮೈಯೆಲ್ಲಾ ಕಣ್ಣಾಗಿರಬೇಕ್ರಿ. ಇಲ್ಲಿ ಶಕ್ತಿಗಿಂತ ಯುಕ್ತಿನs ಮೇಲು. ನೇಕಾರನ ಜೀವನ (ಮೈ-ಮನಸ್ಸು) ನೂಲಿನ್ಹಾಂಗ ಸಣ್ಣಗಾದಾಗ ಮಾತ್ರ.. ಸೀರಿ ತಯಾರಾಗುತ್ತ"* ಎಂದು ಇಳಕಲ್ಲಿನ ಅನುಭವಿ ನೇಕಾರ ನರಸಪ್ಪ ಭಂಡಾರಿ ಹೇಳುತ್ತಾನೆ.

**ಸೀರೆ ನೇಕಾರಿಕೆಯಿಂದ ಸೃಷ್ಟಿಯಾಗುವ ವಿವಿಧ ಉದ್ಯೋಗಗಳು ಮತ್ತು ಮಜೂರಿ :**

ಇಳಕಲ್ಲ ಸೀರೆಯ ನೇಕಾರ ವೃತ್ತಿಯ ವಿಶೇಷತೆಯೆಂದರೆ ಎಲ್ಲ ವಯೋಮಾನದವರಿಗೂ ಇದು ಕೆಲಸಕೊಡುತ್ತದೆ. ನೂಲುವುದರಿಂದ ಹಿಡಿದು ಸಿದ್ಧವಾದ ಸೀರೆಗಳನ್ನು ವ್ಯಾಪಾರಸ್ಥರಿಗೆ ತಲುಪಿಸುವತನಕ ಮನೆಮಂದಿಯೆಲ್ಲ ತಮ್ಮನ್ನು ಸೀರೆ ಉದ್ಯಮದಲ್ಲಿ ತೊಡಗಿಸಿಕೊಳ್ಳುತ್ತಾರೆ. 'ನೇಕಾರನ ಮನೆಯಲ್ಲಿ ದೆವ್ವಕ್ಕೂ ಕೆಲಸ' ಎಂಬ ಗಾದೆ ಹುಟ್ಟಿಕೊಳ್ಳುವಷ್ಟು ಕೆಲಸ ಇಲ್ಲಿದೆ! ಆದ್ದರಿಂದ ಇದನ್ನು ಕೌಟುಂಬಿಕ ವೃತ್ತಿ ಮತ್ತು ಗೃಹ(ಗುಡಿ) ಕೈಗಾರಿಕೆ ಎಂತಲೂ ಕರೆಯುತ್ತಾರೆ. ಗಾಂಧೀಜಿಯವರು ಪ್ರಚಾರ ಮಾಡಿದ ಸ್ವದೇಶಿ ಉಡುಪಿನ ಚಳುವಳಿಯ ಹಿನ್ನೆಲೆ ಮತ್ತು ಗ್ರಾಮೋದ್ಯೋಗ ಕೇಂದ್ರಗಳ ಪ್ರಭಾವದಿಂದಲೋ ಎಂಬಂತೆ ವಿದ್ಯುತ್ ಮಗ್ಗದಿಂದ ತಯಾರಾದ ಸೀರೆಗಳಿಗಿಂತಲೂ

ಕೈಮಗ್ಗದಲ್ಲಿ ನೇಯ್ದ ಸೀರೆಗಳಿಗೆ ತುಂಬಾ ಬೇಡಿಕೆಯಿದೆ. ಇದು ಅನೇಕ ಉದ್ಯೋಗಗಳಿಗೆ ಅವಕಾಶ ಮಾಡಿಕೊಟ್ಟಿದೆ. ಉದ್ಯೋಗಕ್ಕೆ ತಕ್ಕಂತೆ ಮಜೂರಿ(ಪಗಾರ) ಸಿಗುತ್ತದೆ.

**ನೇಕಾರಿಕೆ** (Weaving) :

ಇಳಕಲ್ಲ ಸೀರೆಗಳು ಅನೇಕ ಬಡನೇಕಾರರಿಗೆ ಕೆಲಸ ಕೊಟ್ಟಿವೆ. ಸಾವಿರಾರು ಕುಟುಂಬಗಳಿಗೆ ವರಪ್ರಸಾದವಾಗಿವೆ. ಕೇವಲ ಹತ್ತಿಬಟ್ಟೆಯಿಂದ ಮಾತ್ರವಲ್ಲದೇ ಪಕ್ಕಾ ರೇಷ್ಮೆ ಹಾಗೂ ಹತ್ತಿ–ರೇಷ್ಮೆ ಬೆರೆತ ಚಮಕಾ ದಿಂದಲೂ ಸೀರೆಗಳೂ ತಯಾರಾಗುತ್ತವೆ. ವಿವಿಧ ರೀತಿಯ ಸೀರೆಗಳಿಗೆ ವಿವಿಧ ರೀತಿಯ ಮಜೂರಿ ಇರುತ್ತದೆ! ಇಲ್ಲಿರುವ ಆರ್ಥಿಕ ನೆ(ಸೆ)ಲೆ ಎಂದರೆ ಸೀರೆಗೆ ತಕ್ಕ ಮಜೂರಿ! ಕೈಮಗ್ಗದ ಸೀರೆ (Hand Loom), ನೇಕಾರನಿಗೆ ಮತ್ತು ವಿದ್ಯುತ್ ಮಗ್ಗದ ಸೀರೆ (Power Loom) ನೇಕಾರನಿಗೂ ಮಜೂರಿಯಲ್ಲಿ ವ್ಯತ್ಯಾಸವಿದೆ! ವಿದ್ಯುತ್ ಹಾಗೂ ಕೈಮಗ್ಗದ ಚಮಕಾ ಸೀರೆ ನೇಕಾರನಿಗೆ ಒಂದು ಸೀರೆಗೆ ೧೮೦–೨೦೦ ರೂಪಾಯಿ ಮಜೂರಿ, ಸಹಕಾರಿ ಸಂಘಕ್ಕೆ ಕೊಟ್ಟರೆ ೪೫೦ ರೂಪಾಯಿ, ವಿದ್ಯುತ್ ಮಗ್ಗದ ರೇಷ್ಮೆ ಸೀರೆಗೆ ೨೫೦ ರೂಪಾಯಿ ಹಾಗೆಯೇ ಕೈಮಗ್ಗದ ಸಾದಾ ಸೆರಗಿನ ರೇಷ್ಮೆ ಸೀರೆ ನೇಕಾರನಿಗೆ ಒಂದು ಸೀರೆಗೆ ೨೦೦೦ ರೂಪಾಯಿ ಮತ್ತು ಇಳಕಲ್ಲ ಸೆರಗಿಗೆ ೩೦೦೦ ರೂಪಾಯಿ ಮಜೂರಿ, ವಿದ್ಯುತ್ ಮಗ್ಗ(ಜೈನ್ ಜಕಾಡ್) ದ ರೇಷ್ಮೆ ಸೀರೆಗೆ ೫೦೦೦ ರೂಪಾಯಿ ಮಜೂರಿ ಸಿಕ್ಕತ್ತದೆ.

**ಬಣ್ಣಗಾರಿಕೆ** (Dyeing) :

ಇಳಕಲ್ಲ ಸೀರೆಯ ವಿಶೇಷವೆಂದರೆ ಅದರ ಬಣ್ಣದ ಗುಣ. ಹೀಗಾಗಿಯೇ ಜಾನಪದದಲ್ಲಿ 'ತೌರ್ಬಣ್ಣ' ಎನಿಸಿಕೊಂಡಿದೆ! ನೂಲಿಗೆ ಬಣ್ಣ ಹಾಕುವ ಮನೆಗೆ 'ಕೇಲ'ಮನೆ ಎನ್ನುತ್ತಾರೆ. ನೂಲಿಗೆ ಬಣ್ಣ ಹಾಕುವ ವೃತ್ತಿಯಲ್ಲಿ ಕೇವಲ ಕರಿ(ಕಪ್ಪು) ಬಣ್ಣ ಹಾಕುವವರನ್ನು ನೀಲಗಾರರೆಂದೂ, ಕಪ್ಪನ್ನು ಹೊರತುಪಡಿಸಿ ಉಳಿದೆಲ್ಲಾ ಬಣ್ಣಗಳನ್ನು ಹಾಕುವವರನ್ನು ಬಣಗಾರರು ಎನ್ನುತ್ತಾರೆ. ಇಳಕಲ್ ಸೀರೆ ಹರಿದ್ರೂ, ಸವೆದ್ರೂ ಬಣ್ಣ ಮಾಸುವುದಿಲ್ಲ ಎಂಬ ನಂಬಿಕೆಗೆ ಈ ಎರಿ ಮತ್ತು ಮಸಾರಿ ಮಣ್ಣಲ್ಲಿ ಹರಿದುಬರುವ ಹಳ್ಳದ ನೀರಿನಲ್ಲಿರುವ ಲವಣಾಂಶಗಳು ಕಾರಣವೆಂಬುದು ಸಂಶೋಧನೆಯಿಂದ ದೃಢಪಟ್ಟಿದೆಯಂತೆ! ಹೀಗಾಗಿ ಹಳ್ಳವನ್ನು 'ನೇಕಾರಿಕೆ ಉದ್ಯಮದ ಜೀವಸೆಲೆ' ಎಂತಲೂ ಭಾವಿಸಿರುವುದರಲ್ಲಿ ತಪ್ಪಿಲ್ಲ!

೧ ) **ನೈಸರ್ಗಿಕ ಬಣ್ಣ :**

"ಭಾರತದಲ್ಲಿ ಬೇರೆ ಬೇರೆ ಬಣ್ಣಗಳನ್ನು ನೀಡುವ ಸುಮಾರು ೩೦೦ರಷ್ಟು ಗಿಡಗಳಿವೆ ಎಂದು ಅಂದಾಜು ಮಾಡಲಾಗಿದೆ! ಅವು ತಮ್ಮ ಬೇರು, ಕಾಂಡ, ಚಿಗುರು, ಎಲೆ, ಹೂವು, ಕಾಯಿ ಹಣ್ಣುಗಳಲ್ಲಿ ಬಗೆ ಬಗೆಯ ಬಣ್ಣಗಳನ್ನು ಹೊಂದಿವೆ. ಬಟ್ಟೆಗಳಿಗೆ ಕುಂಕುಮ, ಅರಿಷಿನ, ನೀಲಿ ಬಣ್ಣಗಳನ್ನು ಕಟ್ಟಲು ಬೇಕಾದ ಮೂಲ ಸಾಮಗ್ರಿಗಳನ್ನು ಪ್ರಕೃತಿಯ ವಿವಿಧ ಕ್ರಿಮಿಕೀಟಗಳಿಂದ ಪಡೆಯಲಾಗುತ್ತಿತ್ತು. ಕಬ್ಬಿಣದ ಲವಣವನ್ನು ನೇರಳೆ, ನೀಲಿ, ಹಸಿರು ಬಣ್ಣಗಳನ್ನು ಪಡೆಯಲು ಮಧ್ಯವರ್ತಿ ವಸ್ತುವನ್ನಾಗಿ ಬಳಸಲಾಗುತ್ತಿತ್ತು. ಭಾರತದಲ್ಲಿ ಇಂತಹ ಬಣ್ಣ ಕಟ್ಟುವ ಕಲೆ ಇಂದಿಗೂ ರೂಢಿಯಲ್ಲಿದೆ." [೨೨]

ಇಳಕಲ್ಲ ಸೀರೆಗೆ ಬಣ್ಣ ಹಾಕುವ ಕೆಲಸದಲ್ಲೂ ಇದೇ ವೃತ್ತಿ ಗೌಪ್ಯತೆ ಇದೆಯಂತೆ! ಯಾಂತ್ರೀಕರಣದಿಂದಾಗಿ ಈಗ ರಾಸಾಯನಿಕ ಬಣ್ಣಗಳಿಗೆ ಮರುಳಾಗಿದೆ ಇಳಕಲ್ಲ ಸೀರೆಯ ಉದ್ಯಮ! ಏಕೆಂದರೆ.. ಕಾಂಕ್ರೀಟ್ ಕಾಡಿನಲ್ಲಿ ಪ್ರಾಕೃತಿಕ ಬಣ್ಣಗಳ ತಯಾರಿಕೆ ಅಷ್ಟೊಂದು ಸುಲಭದ ಮಾತಲ್ಲ. ರಾಸಾಯನಿಕ ಬಣ್ಣಗಳು ಸುಲಭವಾಗಿ ಸಿ(ದ)ಕ್ಕುತ್ತವೆ ಮತ್ತು ತುಂಬಾ ಆಕರ್ಷಕವಾಗಿರುವ ಜೊತೆಗೆ ಬಣ್ಣಗಳ ಮಿಶ್ರಣಕ್ಕೂ ತುಂಬಾ ಅನುಕೂಲವಂತೆ!

ಅಂದು ಸಸ್ಯಜನ್ಯ – ಇಂಡಿಗೋ ಬಣ್ಣಗಾರಿಕೆ, ಹಾಗೂ ಪ್ರಾಣಿಜನ್ಯ– ಕಾನಿಕಲ್ ಬಣ್ಣಗಾರಿಕೆ ಬಳಸುತ್ತಿದ್ದರು. ಇದೀಗ ಈ ಬಳಕೆ ನೇಪಥ್ಯಕ್ಕೆ ಸರಿದಿದೆ.

"**ಹತ್ತಿ ನೂಲಿಗೆ** (ಇಂಡಿಗೊ) 'ಕಪ್ಪುನೀಲಿ ಬಣ್ಣ' ತಯಾರಿಸಲು – ಇಂಡಿಗೋ ಗಿಡದ ಎಲೆಯ ರಸ + ಸವಳು + ಸುಟ್ಟ ಸುಣ್ಣ + ಪಟಕ + ಕುಸುಬಿ / ಶೇಂಗಾ ಎಣ್ಣೆ ಬೆರೆಸುತ್ತಿದ್ದರು.

ಅದೇ 'ಕೆಂಪು ಹಳದಿ ಬಣ್ಣ' ತಯಾರಿಸಲು – ಮಡ್ಡಿ ಬೇರಿನ ತೊಗಟೆ + ಸವಳು + ಬಾಳೆ ಗಿಡದ ಬಸ್ಮ ಬೆರೆಸುತ್ತಿದ್ದರು.

'ಕಾನಿಕಲ್ ಕೆಂಪು ಬಣ್ಣ' ತಯಾರಿಸಲು – ಕಾಕಿ ನೀಲ ಹೆಣ್ಣು ಕೀಟ ಒಣಗಿಸಿದ ಪುಡಿ + ಪಟಕ + ಕುಸುಬಿ / ಶೇಂಗಾ ಎಣ್ಣೆ ಬೆರೆಸುತ್ತಿದ್ದರು.

**ರೇಷ್ಮೆ ನೂಲಿಗೆ :** 'ಹಳದಿ ಬಣ್ಣ' ತಯಾರಿಸಲು – ಕಪಿಲಿ ಬೀಜ + ಅಂಟೊಳ್ಳಿಕಾಯಿ + ಸವಳು + ಪಟಕ + ಮೀನಸರಿ ಬೆರೆಸುತ್ತಿದ್ದರು.

'ಕೆಂಪು ಬಣ್ಣ' ತಯಾರಿಸಲು – ಧಾಣಿ + ಪಿಸ್ತಾಪೂರ + ಅಳ್ಳಿಕಾಯಿ + ಕಾಕಡಿಸಿ + $O_2O$ + ಅಂಟೊಳ್ಳಿಕಾಯಿ + ಸವಳು + ಮೀನಸರಿ + ಪಟಕ ಬೆರೆಸುತ್ತಿದ್ದರು.

**ರಾಸಾಯನಿಕ ಬಣ್ಣ :**

ರಾಸಾಯನಿಕ **'ಕಪ್ಪು ಬಣ್ಣ'** ತಯಾರಿಸಲು ಸೋಡಿಯಂ ಪ್ಲೆಕ್ಸ್ + ಸೋಡಿಯಂ ಪುಡಿಯನ್ನು ನೀರಿನಲ್ಲಿ ಕುದಿಸಬೇಕು.

**'ಕೆಂಪು(ಲಾಲ್)ಬಣ್ಣ'** ತಯಾರಿಸಲು ಕಾಸ್ಟಿಕ್ ಸೋಡಾ+AS+BS(ಖಾರ–ಸೋಡಿಯಂ ಹೈಡ್ರಾಕ್ಸೈಡ್‌ನಲ್ಲಿ ಕರಗಿಸಿದ ನೆಫ್ಥಾಲ್ ದ್ರಾವಣ)ವನ್ನು ತಣ್ಣೀರಿನಲ್ಲಿ ಕಲಸಬೇಕು.

ಹಾಗೆಯೇ **'ರೆಡ್–ಬಿ ಬಣ್ಣ'** ತಯಾರಿಸಲು ಸೋಡಿಯಮ್ ನೈಟ್ರೇಟ್($NaNO_2$) + ಹೈಡ್ರೋಕ್ಲೋರಿಕ್ ಆಸಿಡ್(HCl)$32^0$TW + ಅಲ್ಯುಮಿನಿಯಮ್ ಸಲ್ಫೇಟ್ [$Al_2(SO_{4)3}$] ಅನ್ನು ತಣ್ಣೀರಿನಲ್ಲಿ ಕಲಸಬೇಕು. ಟಬ್ಬು ಅಥವಾ ಗ್ವಾಲ್ಮಿಯಲ್ಲಿರುವ ಬಣ್ಣದಲ್ಲಿ ಲಡಿ(ನೂಲು) ಅದ್ದಿ, ದ್ರವ ಬಣ್ಣವನ್ನು ಹಿಂಡಿ, ಒಣಗಿಸುತ್ತಾರೆ.

**ಬಳಸಬೇಕಾದ ಪರಿಸರ ಸ್ನೇಹಿ ರಾಸಾಯನಿಕಗಳು**

**ಬಳಕೆಯಲ್ಲಿರುವ ರಾಸಾಯನಿಕಗಳು :**

೧)ಕ್ಲೋರಿನ್ ಬ್ಲೀಚಿಂಗ್

೨)ಬೆಂಜಿಂಡಿನ್ ಬಣ್ಣ

೩)ಅಸಿಟಿಕ್ ಆಮ್ಲ

೪)ಫಾರ್ಮಾಲ್ ಡಿ ಹೈಡ್

೫)ಸೋಡಿಯಂ ಸಲ್ಫೇಟ್

೬)ಪೆಂಟಾಕ್ಲೋರೋ ಫಿನಾಲ್

**ಬಳಸಲು ಸೂಚಿತ ಸ್ನೇಹಿ ರಾಸಾಯನಿಕಗಳು :**

೧)ಪೆರಾಕ್ಸೈಡ್ ಬ್ಲೀಚಿಂಗ್

೨)ನೈಸರ್ಗಿಕ ಬಣ್ಣ

೩)ಫಾರ್ಮಿಕ್ ಆಮ್ಲ

೪)ಪಾಲಿಕಾ ಬೋಕ್ಸಾಲಿಕ್ ಆ್ಯಸಿಡ್

೫)ಗ್ಲುಕೋಜ್ ಅಪಕರ್ಷಣಕಾರಿಗಳು

೬)ಬೆಂಜೋಥೈಯಾ ಜೋಲ್

**ನಿಷೇಧಿತ ಬಣ್ಣಗಳು :**

೧)ಫಾಸ್ಟ್ ಬ್ಲೂ. ಬಿ. ಬೇಸ್

೨)ಫಾಸ್ಟ್ ಕೋರಂಥ್ ಬಿ. ಬೇಸ್

೩)ಕಾಂಗೋ ರೆಡ್

೪)ರೆಡ್ ೧೦ ಬಿ

೫)೩ ಬಿ.ಎನ್.

೬)ವಯೋಲೆಟ್ ೪ ಬಿ

೭)ಅರೋಮೈನ್ ೦" [೨೩]

**ಮಜೂರಿ :** ಇಲ್ಲಿನ ಬಣ್ಣಗಾರರಿಗೆ ಕಾಂಟ್ರ್ಯಾಕ್ಟ್ ಬೇಸಿಸ್ ಪಗಾರ ಇರುತ್ತದೆ. ಇನ್ನೂ ಕೆಲವು ಕಡೆಗಳಲ್ಲಿ ದಿನಗೂಲಿಯೂ ಉಂಟು. ಆದರೆ ಬಹುತೇಕ ನೇಕಾರರು ಕೇಲ ಮನೆಗಳಲ್ಲಿಯೇ ಬಣ್ಣ ಹಾಕಿಸಿದರೆ, ಇನ್ನೂ ಕೆಲವರು ಸ್ವತಃ ತಾವೇ ಬಣ್ಣಗಾರಿಕೆ ಮಾಡಿಕೊಳ್ಳುತ್ತಾರೆ.

**ನೂಲು ತೋಡುವುದು** (Yarn Winding) : ರಾಟ್ಯಾಳಕ್ಕೆ ತೊಡೆಯ ಮೇಲಿಟ್ಟು ನೂಲು ತೋಡುವ ಕೆಲಸ ಈಗೀಗ ಕಡಿಮೆಯಾಗುತ್ತಿದೆ. ರಾಟ್ಯಾಳಕ್ಕೆ ತೊಡೆಯ ಮೇಲಿಟ್ಟು ನೂಲು ತೋಡುವಾಗ ತೊಡೆಯ ಚರ್ಮ ಸುಕ್ಕುಗಟ್ಟಿ ಕಲೆ ಬೀಳುತ್ತಿತ್ತು. ಅದಕ್ಕೂ ಈಗ ವೈಂಡರ್ ಎಂಬ ಯಂತ್ರ ಬಂದಿದೆ. ಡಬ್ಬಿ ವೈಂಡಿಂಗ್ ಮತ್ತು ರೀಲ್ ವೈಂಡಿಂಗ್ ಎಂಬ ಎರಡು ರೀತಿಯಲ್ಲಿ ನೂಲನ್ನು ವಿದ್ಯುತ್ ಮಗ್ಗಕ್ಕೆ ನೂಲು ತೋಡಬೇಕಾಗುತ್ತದೆ. ಹೆಚ್ಚು ಶ್ರಮವಹಿಸದ ವಯೋವೃದ್ಧರು ಹಾಗೂ ಮಕ್ಕಳು ಈ ಕೆಲಸವನ್ನು ನಿರ್ವಹಿಸುತ್ತಾರೆ.

**ಟಾಣ ಹಾಕುವುದು :** ಟಾಣಾ ಹಾಕುವ ಕೆಲಸ ತುಂಬಾ ನೈಪುಣ್ಯತೆಯ ಕೆಲಸವಾಗಿದ್ದು, ಎಳೆಗುಂಟ ಸಾಗಲೇ ಬೇಕು ಕೈ ಹಾಗೂ ಕಣ್ಣುಗಳು! ಚಮಕಾ ಹಾಗೂ ರೇಷ್ಮೆ ನೂಲು ತುಂಬಾ ಮೃದುವಾಗಿದ್ದು ಟಾಣಾ ಹಾಕುವ ಕೆಲಸವೇ ಪ್ರಧಾನವಾಗಿರುತ್ತದೆ. ಹೀಗಾಗಿ "ಈಗಿನವರಿಗೆ ಸರಿಯಾಗಿ ಟಣಾ ಹಾಕಾಕ ಬರಾಂಗಿಲ್ಲ ಮತ್ತ.. ಕೊಯ್ಯಾಕೂ

ಬರಾಂಗಿಲ್ಲರಿ" ಎನ್ನುತ್ತಾರೆ ತಾವರಗೇರಿಯ *ಮಹಾಂತಪ್ಪ ತಳುಗೇರಿ.* ಒಂದಕ್ಕೆ ೩೦ ರೂಪಾಯಿ ಮಜೂರಿ ಸಿಕ್ಕುತ್ತದೆ. ರೇಷ್ಮೆ ಕೆಲಸಕ್ಕೆ ೫೦ ರೂಪಾಯಿ ಕೂಲಿ ಕೊಡುತ್ತಾರೆ.

**ಹಣಗಿ ಕೆಚ್ಚುವುದು** : ಕೊಯ್ದ ಸೀರೆಯ ನೂಲುಗಳಿಗೆ ಹೊಸದಾಗಿ ಎಳೆಗಳನ್ನು ಜೋಡಿಸುವ ಕ್ರಿಯೆಯೇ ಹಣಗಿ ಕೆಚ್ಚುವುದು. ಇದೂ ಕೂಡಾ ಅತ್ಯಂತ ಸೂಕ್ಷ್ಮವಾದ ಕೆಲಸವಾಗಿದ್ದು ತುಂಬಾ ತಾಳ್ಮೆ ಬೇಕಾಗುತ್ತದೆ. ಸಾದಾ ಸೀರೆಗೆ ೩೦-೩೫ ರೂಪಾಯಿ ಮತ್ತು ರೇಷ್ಮೆ ಸೀರೆಗೆ ೬೦ ರಿಂದ ೭೦ ರೂಪಾಯಿ ಸಿಕ್ಕುತ್ತದೆ.

**ಕಂಡಕಿ ಸುತ್ತೋದು** : ಲಾಳಿಯ ಒಳಗೆ ದಾರ ಇರುವುದಕ್ಕೆ ಈ ಕಂಡಿಕೆಗಳೇ ಕಾರಣ. ಮೊದಲು ಕಟ್ಟಿಗೆಯ ಗಣಿ ಇದ್ದವು ಈಗೀಗ ಅವುಗಳ ಬದಲಾಗಿ ಪ್ಲಾಸ್ಟಿಕ್ ಹಾಗೂ ನೈಲಾನ್ ಗಣಿಗಳು ಬಂದಿವೆ. ಇವುಳನ್ನು ಚರಕಕ್ಕೆ ಜೋಡಿಸಿ ಡಬ್ಬಿಯಿಂದ ನೂಲನ್ನು ಸುತ್ತಿದಾಗ ಕಂಡಿಕೆಯಾಗುತ್ತದೆ. ರೀಲ್ ವೈಂಡಿಂಗ್ ಎಂಬ ಯಂತ್ರ ಬಂದಿದ್ದು ತಿರುವುವ ಕೆಲಸ ಹಗುರಾಗಿದೆ. ಹಳ್ಳಿಗಳಲ್ಲಿ ಬಹುಕಾಲ ವಿದ್ಯುತ್ ಇಲ್ಲದಿರುವ ಪ್ರಯುಕ್ತ ರಾಟೆ ಅಥವಾ ಚಕ್ರವೇ ಗತಿ. ಒಂದು ಡಬ್ಬಿ (೮ ಕಂಡಿಕೆಗಳಿಗೆ)ತೋಡೋದಕ್ಕೆ ೬ ರೂಪಾಯಿ.

**ಭೀಮ್ ಸುತ್ತೋದು** : ಪವರ್ ಲೂಮ್‌ಗೆ ನೂಲು ಹಾಸನ್ನು ಭೀಮ್ ಒದಗಿಸುತ್ತದೆ. ಈ ಭೀಮ್‌ಗೆ ಸುಮಾರು ೫೬ ಸೀರೆಗಳಿಗಾಗುವಷ್ಟು ನೂಲನ್ನು ಸುತ್ತಲಾಗುತ್ತದೆ. ಇದನ್ನೇ ಭೀಮ್ ಕೆಚ್ಚೋದು ಎಂತಲೂ ಕರೆಯುತ್ತಾರೆ. ಒಂದು ಭೀಮ್ ಕೆಚ್ಚೋದಕ್ಕೆ ೧೨೦ ರೂಪಾಯಿ ಮಜೂರಿ ಸಿಕ್ಕುತ್ತದೆ. ಈಗೀಗ ಯಂತ್ರಗಳ ಮೂಲಕ ಈ ಕೆಲಸ ಸರಳೀಕರಣಗೊಂಡಿದೆ.

**ಗೊಂಡೆ ಕಟ್ಟುವುದು** : ಸೆರಗಿನಲ್ಲಿ ಕೊನೆಗೆ ಇರುವ ಎಳೆಗಳನ್ನು ಕ್ರಾಸ್ ಮಾಡಿ ಮೇಲಕ್ಕೆ ಕಟ್ಟುವುದಕ್ಕೆ ಗೊಂಡೆ ಕಟ್ಟುವುದು ಎನ್ನುತ್ತಾರೆ. ಇದಕ್ಕೆ ಕರಿ ಕಟ್ಟುವುದು ಎಂತಲೂ ಹೆಸರು. ಇದರ ಮಜೂರಿ ಗಂಟು ಹಾಕುವುದರ ಮೇಲೆ ನಿರ್ಧಾರವಾಗುತ್ತದೆ. ಸಾಮಾನ್ಯವಾಗಿ ಒಂದು ಸೆರಗಿಗೆ ೪-೫ ರೂಪಾಯಿ ಕೊಡುತ್ತಾರೆ.

**ಕಸೂತಿ ಹಾಕುವುದು** : ಬೆಲೆಬಾಳುವ ರೇಷ್ಮೆ ಸೀರೆಗಳ ಮೇಲೆ ವಿವಿಧ ವಿನ್ಯಾಸದ ಕಸೂತಿ ಕಲೆಯನ್ನು ಹಾಕಿಸುವುದುಂಟು. ಗ್ರಾಹಕರಿಗೆ ಬೇಕಾದ ವಿನ್ಯಾಸದ ಕಸೂತಿ ಹಾಕಿಕೊಡುವ ಕೆಲಸಕ್ಕೂ ಇಳಕಲ್ಲ ಸೀರೆ ಉದ್ಯಮ ಇಂಬು ನೀಡಿದೆ. ವಿನ್ಯಾಸದ ಆಧಾರಿತ ದರ ನಿರ್ಧಾರವಾಗುತ್ತದೆ.

**ಡ್ರೆಸ್ಸಿಂಗ್ ಮಟೀರಿಯಲ್ಸ್** : ಇಳಕಲ್ಲ ಸೀರೆಯ ಉದ್ಯಮವೀಗ ಫ್ಯಾಷನ್ ಲೋಕಕ್ಕೂ ಲಗ್ಗೆಯಿಟ್ಟಿದೆ. ಇದರಲ್ಲಿಯೇ ಚೂಡಿದಾರದ ಪೀಸುಗಳು, ಲಂಗಾ–ಧಾವಣಿ ಪೀಸುಗಳು, ಭರತನಾಟ್ಯದ ಧಿರಿಸು, ಸೆಲ್ವಾರ್ ಕಮೀಜ್ ಪೀಸುಗಳೂ ಲಭ್ಯವಿದ್ದು, ಅವುಗಳಿಗೆ ವಿಭಿನ್ನ ಶೈಲಿಯ ವಿನ್ಯಾಸಕ್ಕಾಗಿ ಫ್ಯಾಷನ್ ಡಿಸೈನರ್ ಗಳಿಗೂ ಕೆಲಸ ನೀಡಿದೆ. ವಿನ್ಯಾಸದ ಆಧಾರಿತ ದರ ನಿರ್ಧಾರವಾಗುತ್ತದೆ.

**ವಸ್ತುಗಳ ಬಗೆಗಿನ ನಂಬಿಕೆ :**

ನೇಕಾರಿಕೆಯ ಪ್ರತಿಯೊಂದು ಹಂತದಲ್ಲಿಯೂ ಬಳಸಲ್ಪಡು ವಸ್ತುಗಳಲ್ಲೂ ದೇವರನ್ನು ಕಾಣುತ್ತಾರೆ! ಹೀಗಾಗಿ ಕೈಮಗ್ಗ, ವಿದ್ಯುತ್ ಮಗ್ಗ, ಲಾಳಿ, ಚರಕ, ಎಲ್ಲದರಲ್ಲೂ ದೇವರನ್ನೇ ಕಾಣುವ ನೇಕಾರರು ಹೀಗಾಗಿ ಅಮವಾಸೆ, ದೀಪಾವಳಿ, ಮಹಾನವಮಿಯಂದು ಪೂಜೆ ಮಾಡಿ ರಜೆ ಪಡೆಯುವುದುಂಟು.

"I believe that where there is pure and active love for the poor there is God also. I see God in every thread that I draw on the spinning wheel." *( GANDHIJI- Young India, ೨೦–೫–೧೯೨೬)* ಹೀಗೆ ಸ್ವತಃ ರಾಷ್ಟ್ರಪಿತ ಗಾಂಧೀಜಿಯವರಿಗೂ ನೂಲು ಹಾಗೂ ಚರಕದ ಬಗ್ಗೆ ಗೌರವ ಇರುವುದನ್ನು ತಮ್ಮ 'ಯಂಗ್ ಇಂಡಿಯಾ'ದಲ್ಲಿ ಹೇಳಿಕೊಂಡಿದ್ದಾರೆ!

**ಇಳಕಲ್ಲ ಸೀರೆಯ ವೈಶಿಷ್ಟ್ಯ ಹಾಗೂ ವಿಧಗಳು :**

ಇಳಕಲ್ಲ ಸೀರೆಯ ವೈಶಿಷ್ಟ್ಯವೆಂದರೆ ಅದರ ಆಕರ್ಷಕ ಮತ್ತು ಮಾಸದಬಣ್ಣ. ಸಾಂಪ್ರದಾಯಿಕ ಸೀರೆಗಳ ಬಣ್ಣ ಸಾಮಾನ್ಯವಾಗಿ ಕೆಂಪು, ಮರೂನ್, ದಾಳಿಂಬೆ ಕೆಂಪು, ಉಜ್ವಲ ನವಿಲು ಹಸಿರು, ಗಿಳಿ ಹಸಿರು ಬಣ್ಣಗಳಲ್ಲಿ ತಯಾರಾಗುತ್ತವೆ.

ಇಳಕಲ್ಲ ಸೀರೆಯ ಇನ್ನೊಂದು ವೈಶಿಷ್ಟ್ಯವೆಂದರೆ ಅವುಗಳ ಆಕರ್ಷಕ ದಡಿ(Border), ಮನಸೂರೆಗೊಳ್ಳುವ ಒಡ್ಲು(ಗರ್ಭ), ಮುತ್ತೈದೆತನದ ಸಂಕೇತದಂತಿರುವ ಸೆರಗು (ಪಲ್ಲು)ಗಳ ವಿನ್ಯಾಸ! ದಡಿ ಮತ್ತು ಸೆರಗಿಗೆ ಕಚ್ಚಾ ರೇಷ್ಮೆ(ಚಮಕಾ) ಬಳಸುತ್ತಾರೆ. ಕೆಲವೊಮ್ಮೆ ಪಕ್ಕಾ ರೇಷ್ಮೆಯನ್ನೂ ಬಳಸುತ್ತಾರೆ.

ಕಾಲಕ್ಕೆ ತಕ್ಕಂತೆ ಇವುಗಳ ವಿನ್ಯಾಸವೂ ಬದಲಾಗಿದೆ. ಪ್ರಯೋಗಶೀಲ ಮನಸ್ಸಿನ ನೇಕಾರರೇ ಹೊಸ ವಿನ್ಯಾಸದ ಆವಿಷ್ಕಾರಕ್ಕೆ ದಿಟ್ಟಹೆಜ್ಜೆ ಇಡುತ್ತಾರೆ. ಅವಶ್ಯಕತೆಯೇ ಸಂಶೋಧನೆಗೆ ದಾರಿ ಮಾಡಿಕೊಟ್ಟರೆ ಮಹತ್ವಾಕಾಂಕ್ಷೆಯು ಹೊಸತನದ ಸೃಷ್ಟಿಗೆ ಕಾರಣವಾಗುತ್ತದೆ. ವಿದ್ಯುತ್ ಮಗ್ಗಗಳಲ್ಲಿ ವಿನ್ಯಾಸ ಬದಲಿಸಲು ಕಷ್ಟವಾಗುವುದಿಲ್ಲ. ಆದರೆ.. ಕೈಮಗ್ಗದಲ್ಲಿ ಇದಕ್ಕೆ ಅವಕಾಶವಿರುವುದಿಲ್ಲ.

**ದಡಿ(Border) ಆಧಾರಿತ ಸೀರೆಗಳು :**

'ಗಿಡಿ ಗಟ್ಟಿ ಇದ್ರ ನಾಡು, ದಡಿ ಗಟ್ಟಿ ಇದ್ರ ಸೀರೆ' ಎಂಬ ಮಾತಿದೆ. ಇಳಕಲ್ಲ ಸೀರೆಯ ದಡಿ ಗಟ್ಟಿ ಹಾಗೂ ವಿಶೇಷವಾಗಿ ಇರೋದ್ರಿಂದಲೇ ಇದಕ್ಕೊಂದು ನೆ(ಬೆ)ಲೆ ಸಿ(ದ)ಕ್ಕಿದೆ. ಈ ಶತಮಾನದ ಆದಿಯಲ್ಲಿ ಗಚ್ಚಿದಡಿ ಸೀರೆಗಳಿಗೆ ಬೇಡಿಕೆಯಿತ್ತು, ಈಗೀಗ ಗೋಧಿ ಕಾಳುಗಳನ್ನು ಸಾಲಾಗಿ ಜೋಡಿಸಿಟ್ಟಂತೆ ಇರುವ ಗೋಮಿದಡಿ ಸೀರೆಗಳೇ ಸ್ತ್ರೀಯರ ಮನಸೂರೆಗೊಂಡಿವೆ. ಏಕೆಂದರೆ ಆಕರ್ಷಕ ಬಣ್ಣದ ಜೊತೆಗೆ ಗೋಧೀ ತೆನೆಯಂತಹ ವಿನ್ಯಾಸ ತುಂಬಾ ಆಕರ್ಷಕವೆನಿಸುತ್ತದೆ. ಗೋಮಿದಡಿ ಸೀರೆಗಳು **ಇಳಕಲ್ಲದಡಿ** ಸೀರೆಗಳೆಂದೇ ಪ್ರಸಿದ್ಧಿಯಾಗಿ, ಹಳ್ಳಿಯಿಂದ ಬೃಹತ್ ನಗರದವರೆಗೂ ಹೆಚ್ಚಿನ ಬೇಡಿಕೆ ಪಡೆದಿವೆ. ಚಿಕ್ಕಿ ಹಾಗೂ ಬುಗುಡಿ ಪರಾಸ್ ಪೇಟ್ (ಚಿಕ್ಕ ಪರಾಸ್, ದೊಡ್ಡ ಪರಾಸ್) ಗಟ್ಟಿದಡಿ, ಗಾಡಿದಡಿ, ದೊಡ್ಡದಡಿ, ಸಾಟಿದಡಿ, ಜರಿದಡಿ, ರುದ್ರಾಕ್ಷಿದಡಿ, ಆದರೆ ಸಾಟಿದಡಿ ಸೀರೆ ನಾರಿಯರನ್ನು ಆಕರ್ಷಿಸಲಿಲ್ಲ. ಸಾಮಾನ್ಯವಾಗಿ ಅಂಚು ೪ ರಿಂದ ೬ ಇಂಚು ಅಗಲವಿರುತ್ತದೆ. ಹೊಸ ವಿನ್ಯಾಸದ ಗಾಯತ್ರಿ ಸೀರೆಯ ಅಂಚು ೨.೫ ರಿಂದ ೪ ಇಂಚು ಅಗಲವಿದ್ದು, ಕೆಂಪು ಅಥವಾ ಮರೂನ್ ಬಣ್ಣದಿಂದ ಕೂಡಿರುತ್ತದೆ.

**ಸೆರಗು (ಪಲ್ಲು) ಆಧಾರಿತ ಸೀರೆಗಳು :**

ಮೊದಲಿದ್ದ ಸಾದಾ ಮತ್ತು ನಾಗಮುರಿ ಸೆರಗುಗಳು ಹೆಂಗೆಳೆಯರ ಮನಸ್ಸನ್ನು ಗೆಲ್ಲುವಲ್ಲಿ ವಿಫಲವಾದ ನಂತರ ತೋಪುತೆನಿ, ಬುಗುಡಿ ಪರಾಸ್‌ಪೇಟ ಸೆರಗಿನ ಸೀರೆಗಳು ಜನ್ಮತಾಳಿದವು. ಇಳಕಲ್ಲ ಸೆರಗಿನ ಸೀರೆಗಳೆಂದು ಮಾರುಕಟ್ಟೆಯಲ್ಲಿ ಸ್ತ್ರೀಯರ ಮನಸೂರೆಗೊಳ್ಳುತ್ತಿರುವ ಸೀರೆಗಳೇ ತೋಪುತೆನಿ ಸೆರಗಿನ ಸೀರೆಗಳು! ತೋಪುತೆನಿಯಲ್ಲಿ ಮೂರು ಕೆಂಪು ಬಣ್ಣದ ಭಾಗಗಳ ಮಧ್ಯದಲ್ಲಿ ಎರಡು ಬಿಳಿ ಬಣ್ಣದ ಪಟ್ಟಿಗಳು ಚಿತ್ತಾಕರ್ಷಕವಾಗಿರುತ್ತವೆ. ಗಾಯತ್ರಿ ಸೀರೆಯ ಸೆರಗು ದೇವಸ್ಥಾನದ ಗೋಪುರ ವಿನ್ಯಾಸದಲ್ಲಿ ಮೂಡಿ ಬಂದಿದ್ದು ಕೆಂಪು ಬಣ್ಣದ ರೇಷ್ಮೆ ದಾರದಿಂದ ನೇಯಲ್ಪಟ್ಟಿದ್ದು

ಅದಕ್ಕೊಪ್ಪುವಂತೆ ಬಿಳಿ ರೇಷ್ಮೆ ದಾರದ ಚಿತ್ರಾಲಂಕಾರದಿಂದ ಕೂಡಿದ್ದು ಇಳಕಲ್ಲ ಸೀರೆಯ ಸೊಬಗನ್ನು ಇನ್ನಷ್ಟು ಹೆಚ್ಚಿಸಿವೆ. ಈ ಹಿಂದೆ ಹೆಸರುವಾಸಿಯಾಗಿದ್ದ ಇಳಕಲ್ಲಿನ 'ಚಂದ್ರಕಾಳಿ' ಸೀರೆಯ ಎರಡೂವರೆ ಮೊಳ ಸೆರಗಿನಲ್ಲಿ ಬಿಳಿ ಮತ್ತು ಕೆಂಪು ರೇಶ್ಮೆ ಎಳೆಗಳಿಂದ ಹಾಕಲ್ಪಟ್ಟ ಹೂವಿನ ಸಾಲು, ಗೋಡಂಬಿಯ ಪಟ್ಟಿ, ಗೋಪುರ, ಗಿಳಿ, ಇತ್ಯಾದಿ ಕಸೂತಿಯ ಕಲೆಯನ್ನು ಕಾಣಬಹುದು. ಇಳಕಲ್ಲ ಸೀರೆಯ ಕೆಂಪು ಸೆರಗಿನಿಂದ ಪುರುಷರಿಗೆ ಪ್ರೀತಿಯ ಭಾವನೆ ಮೂಡುತ್ತದೆ ಎಂಬ ನಂಬಿಕೆ ಹಲವರಲ್ಲಿದೆ.

**ಒಡ್ಲು(ಗರ್ಭ) ಆಧಾರಿತ ಸೀರೆಗಳು :**

ಈ ದಡಿಗೆ ತಕ್ಕಂತೆ ಸೀರೆಯ ಒಡಲಲ್ಲಿ ಚೌಕಾನಿ(Check)ಸೀರೆ, ರಾಸ್ತಾಕರಿ, ಕೊಂಡಿಚಿಕ್ಕಿ, ಕೊಂಡಿಚಿಕ್ಕಿ, ಫ್ಲೇನ್(Plain), ಪಂಚರಂಗಿ ಕಡ್ಡಿ ಸೀರೆ, ಮದೂಪಕಡ್ಡಿ, ಎಳ್ಳು ಹೂವ್ವಿನ ಸೀರೆ, ಗಾಯತ್ರಿ(ರೂಫಿಲ್)ಸೀರೆ, ಜಬ್ಬರ್, ರಾಸ್ತಾಕರಿ, ದಪ್ಪಳ ಸೀರೆ, ರಾಗಾವಳಿ ಸೀರೆ, ಚಂದ್ರಕಾಳಿ ಸೀರೆ ಇತ್ಯಾದಿ ಬಗೆಗಳಿವೆ. ಹದಿನೆಂಟು ಮೊಳದ ಇಳಕಲ್ಲಿನ 'ಚಂದ್ರಕಾಳಿ' ಸೀರೆಯ ಒಡಲಲ್ಲಿ ಬಿಳಿ ರೇಶ್ಮೆ ಎಳೆಗಳಿಂದ ಹಾಕಿದ ಕಸೂತಿ ಕಲೆಗಳು ಕಡುಗಪ್ಪು ಆಕಾಶದಲ್ಲಿ ಮಿನುಗುತ್ತಿರುವ ನಕ್ಷತ್ರಗಳಂತೆ ಭಾಸವಾಗಿ ನಾರಿಯರ ಮನಸೂರೆಗೊಳ್ಳುತ್ತವೆ. "ಇತ್ತೀಚಿಗೆ ಫ್ಲೆಯ್ನ್ 'ಚಂದ್ರಕಾಳಿ' ಸೀರೆಗಳನ್ನೂ ನೇಯಲಾಗುತ್ತಿದೆ. ಆದರೆ..ಇಂದು ಈ ಸೀರೆಗಳು ಉಡು(ಕೊಳ್ಳು)ವವರಿಲ್ಲದೆ, ತಯಾರಿಕೆಯೇ ಅಪರೂಪವಾಗುತಿದೆ. ಆರ್ಡರ್ ಕೊಟ್ರೆ ಮಾತ್ರ ನೇಯ್ಸಿ ಕೊಡ್ತೀವ್ರಿ" ಎಂದು ಆತಂಕ ವ್ಯಕ್ತಪಡಿಸುತ್ತಿದ್ದಾರೆ ಇಳಕಲ್ಲಿನ ಎಸ್.ಪಿ.ಸರೋದೆ ಸಿಲ್ಕ್ ಹೌಸ್‌ನ ಮಾಲೀಕ ನಾಗರಾಜ ಸರೋದೆ. ಮದುವೆ ಹಾಗೂ ಇತರೆ ಧಾರ್ಮಿಕ ಕಾರ್ಯಗಳಲ್ಲಿ ಹಸಿರು ಒಡ್ಲ ಸೀರೆಯೇ ಸ್ತ್ರೀಯರ ಮೊದಲ ಆಯ್ಕೆ. ಇದು ಸಮೃದ್ಧಿಯ ಸಂಕೇತವೂ ಹೌದು.

**ಬಟ್ಟೆ ಆಧಾರಿತ ಸೀರೆಗಳು :**

ಸೀರೆಯ ಒಡಲು, ಅಂಚು ಹಾಗೂ ಸೆರಗನ್ನು ಯಾವ ಯಾವ ಬಟ್ಟೆಯಿಂದ ತಯಾರಿಸಲಾಗುತ್ತದೆ ಎಂಬುದನ್ನು ಆಧರಿಸಿ ೩ ನಮೂನೆಯ ಸೀರೆಗಳನ್ನಾಗಿ ವಿಭಜಿಸಲಾಗಿದೆ.

- **ಪಕ್ಕಾ ಹತ್ತಿ ಸೀರೆ – ಹತ್ತಿ + ಹತ್ತಿ**

- **ಪಕ್ಕಾ ರೇಷ್ಮೆ ಸೀರೆ – ರೇಷ್ಮೆ + ರೇಷ್ಮೆ**

- **ಚಮಕಾ ಸೀರೆ – ಹತ್ತಿ + ಕಚ್ಚಾರೇಷ್ಮೆ(ಚಮಕಾ)**

**ಉದ್ದ ಆಧಾರಿತ ಸೀರೆಗಳು :**

ಸೀರೆಯ ಉದ್ದಕ್ಕನುಗುಣವಾಗಿ ಪ್ರಮುಖವಾಗಿ ೩ ಪ್ರಕಾರಗಳನ್ನಾಗಿ ವಿಂಗಡಿಸಲಾಗಿದೆ. ಅಗಲವು ಸಾಮಾನ್ಯವಾಗಿ ೪೮ ಇಂಚು ಇರುತ್ತದೆ.

೧)**ಸಾವಾರಿ** (೬ ಗಜ ಉದ್ದದ ಸೀರೆ / ೧೨ ವಾರಿನ ಸೀರೆ – ೫.೪ ಮೀಟರ್)

೨)**ಅಠ್‌ವಾರಿ** (೮ ಗಜ ಉದ್ದದ ಸೀರೆ / ೧೬ ವಾರಿನ ಸೀರೆ – ೭.೨ ಮೀಟರ್)

೩)**ನೌವಾರಿ** (೯ ಗಜ ಉದ್ದದ ಸೀರೆ / ೧೮ ವಾರಿನ ಸೀರೆ – ೮.೧ ಮೀಟರ್)

"ಒಂದೊಂದು ಪ್ರದೇಶದ ಒಂದೊಂದು ಜನಾಂಗದ ಸ್ತ್ರೀಯರು ಒಂದೊಂದು ನಮೂನೆಯ ಸೀರೆಗಳನ್ನು ಉಡುತ್ತಾರೆ. ಉದಾ :– ಕಚ್ಚೆಗೌಳಿಗ ಸ್ತ್ರೀಯರು ಕಚ್ಚೆ ಹಾಕಿ ಉಡುವ ಸೀರೆಯು ಹದಿನೆಂಟು ಮೊಳದ್ದಾಗಿದ್ದು ಸೊಂಟಕ್ಕೆ ಸುತ್ತಿಕೊಳ್ಳತ್ತಾರೆ. ತಮಿಳುನಾಡಿನಲ್ಲಿ ೭ ರಿಂದ ೧೦ ಗಜದ ಸೀರೆ ಇರುತ್ತದೆ. ವಿಶೇಷ ಸಂದರ್ಭಗಳಲ್ಲಿ ೯ ಗಜದ ಸೀರೆ 'ಪುರವೈ' ಉಡುತ್ತಾರೆ. ಮಹಾರಾಷ್ಟ್ರದಲ್ಲಿ 'ಕಸ್ಯಾಚೆ ನೇಸ್ಥಣ' ಎಂದು ಕರೆಯಲ್ಪಡುವ ವಿಶಿಷ್ಟ ರೀತಿಯಲ್ಲಿ ಕಚ್ಚೆ ಹಾಕುವ ಸೀರೆಯು ಹದಿನೆಂಟು ಮೊಳದ್ದಾಗಿದ್ದು ಇದು, ೯ನೇ ಶತಮಾನದ ನಂತರ ಕಾಣಿಸಿತು." [೨೪] ನಮ್ಮ ರಾಜ್ಯದಲ್ಲಿ ಈಗ ಹೊಸ ವಿನ್ಯಾಸದ ೬.೨೦ ಮೀಟರ್ ಇಳಕಲ್ಲ ಸೀರೆಗೆ ಭಾರಿ ಬೇಡಿಕೆಯಿದ್ದು, ಇದರಲ್ಲಿ ೫.೩೦ ಮೀಟರ್ ಸೀರೆ + ೭೦ ಸೆಂ.ಮೀ. ರವಿಕೆಯ ಬಟ್ಟೆ ಇರುತ್ತದೆ.

**ಇಲಕಲ್ಲ ಸೀರೆ ಬಳಕೆಯ ಸಂದರ್ಭಗಳು :**

ಇಳಕಲ್ಲ ಸೀರೆ ಉತ್ತರ ಕರ್ನಾಟಕದ ಹಾಗೂ ಮಹಾರಾಷ್ಟ್ರದಲ್ಲಿ ನಿತ್ಯ ಉಡುಗೆಯಾಗಿದೆ. ಏಕೆಂದರೆ ಮಹಾರಾಷ್ಟ್ರದಲ್ಲಿ ಉಚ್ಚವರ್ಗದ ಸ್ತ್ರೀಯರು ೯ ಗಜದ ಸೀರೆಯನ್ನು ಕಚ್ಚೆ ಹಾಕಿ ಉಡುವ 'ಕಸ್ಯಾಚೆ ನೇಸ್ಟಣ' ಸಂಪ್ರದಾಯವಿದೆ. ಅಲ್ಲದೇ ವಿಶೇಷ

ಸಂದರ್ಭಗಳಲ್ಲಿ ಬೇರೆ ಬೇರೆ ರಾಜ್ಯಗಳಲ್ಲೂ ಖುಷಿಗಾಗಿ ಇದರ ಬಳಕೆ ಮಾಡಲಾಗುತ್ತಿದೆ. ಇತ್ತೀಚೆಗೆ ಟಿ.ವಿ. ಧಾರಾವಾಹಿಗಳಲ್ಲಿ, ಸಿನೆಮಾಗಳಲ್ಲಿ, ಫ್ಯಾಶನ್ ಷೋ ಹಾಗೂ ಲೈವ್ ಷೋಗಳಲ್ಲಿಯೂ ಯಥೇಚ್ಛ ಬಳಕೆಯಾಗುತ್ತಿರುವುದು ಇಳಕಲ್ಲ ಸೀರೆಗೆ ಶುಕ್ರದೆಸೆ ತಿರುಗಿದಂತಿದೆ!

- **ದಟ್ಟಿ ಸೀರೆ** :- ಹೆಣ್ಣು ಮಗುವಿನ ಐದನೇ ವರ್ಷದ ಹುಟ್ಟು ಹಬ್ಬವನ್ನು ಕೊಂಚ ವಿಶೇಷವಾಗಿ ಮಾಡುತ್ತಾರೆ. ಮಗುವಿನ ತಾಯಿಯ ತೌರಿನವರು ಉಂಡಿ, ಕರ್ಚಿಕಾಯಿಯಂತಹ ಸಿಹಿ-ತಿಂಡಿಯೊಂದಿಗೆ ಆ ಮಗುವಿಗೆ ತರುವ ಸಣ್ಣ ಗಾತ್ರದ ಸೀರೆಯೇ ದಟ್ಟಿಸೀರೆ. ೫ ಮೀಟರ್ ಉದ್ದ ಹಾಗೂ ೩೮ ಇಂಚು ಅಗಲವಿರುವ ಈ ಸೀರೆಯನ್ನು ಇತ್ತೀಚೆಗೆ ಹೇಳಿ ನೇಯಿಸಿದರೆ ಮಾತ್ರ ನೇಯುತ್ತಾರೆ. ಇಲ್ಲದಿದ್ದಲ್ಲಿ ದೊಡ್ಡಸೀರೆಯನ್ನು ತಂದು ಉಡಿಸುತ್ತಾರೆ. ಹುಟ್ಟುಹಬ್ಬದ ಆ ಒಂದು ದಿವಸ ಮಾತ್ರ ದಟ್ಟಿ ಸೀರೆಯಾಗಿದ್ದು, ಮುಂದಿನ ದಿನಗಳಲ್ಲಿ ಅದನ್ನು ಮಗುವಿನ ತಾಯಿಯೇ ಉಡುತ್ತಾಳೆ! ಇದಕ್ಕೆ ಹುಟ್ಟು ದಟ್ಟಿ ಸೀರೆ, ನಾರಿದಟ್ಟಿ ಸೀರೆಯಂತಲೂ ಕರೆಯುತ್ತಾರೆ.

- **ಋತುಮತಿಯಾದಾಗಿನ ಸೀರೆ** :- ಮೈನೆರೆದ ಹುಡುಗಿ ಕನ್ಯೆಯ ಸ್ಥಾನಕ್ಕೇರುವ ೫ನೇ ದಿನ, ೧೧ನೇ ದಿನ, ೨೧ನೇ ದಿನದಂದು ಹುಡುಗಿಯ ತಾಯಿಯ ತೌರಿನವರು ವಿಶೇಷವಾಗಿ ಇಳಕಲ್ಲ ರೇಷ್ಮೆ ಸೀರೆ ಉಡಿಸಿ, ಆರತಿ ಎತ್ತುತ್ತಾರೆ.

- **ನಿಶ್ಚಿತಾರ್ಥದ ಸೀರೆ** :- ಮದುವೆಗಾಗಿ ನಿಶ್ಚಯ ಮಾಡಿಕೊಂಡ ಕನ್ಯೆಗೆ ಗಂಡಿನ ಕಡೆಯವರು ತಂದುಡಿಸುವ ಸೀರೆ. ಇದಕ್ಕೆ 'ಇಳೆ ಸೀರೆ' ಎನ್ನುತ್ತಾರೆ.

- **ದಂಡಿ ಕುಬುಸದ ಸೀರೆ** :- ಮದುವೆಗಾಗಿ ನಿಶ್ಚಯ ಮಾಡಿಕೊಂಡ ಕನ್ಯೆಗೆ ಗಂಡಿನ ಕಡೆಯವರು ನಾಗರ ಪಂಚಮಿಯಲ್ಲಿ ಐದು ವಿಧದ ಉಂಡಿ ಎಂಬ ಸಿಹಿ ತಿಂಡಿ, ಕೊಬ್ಬರಿ ಗಿಟುಕಗಳೊಂದಿಗೆ ತಂದುಡಿಸುವ ಸೀರೆ.

- **ಸಕ್ಕರೆ ಆರತಿ ಸೀರೆ** :- ಮದುವೆಗಾಗಿ ನಿಶ್ಚಯ ಮಾಡಿಕೊಂಡ ಕನ್ಯೆಗೆ ಗಂಡಿನ ಕಡೆಯವರು ಗೌರಿ ಹುಣ್ಣಿಮೆ, ಶೀಗಿ ಹುಣ್ಣಿಮೆ ಅಥವಾ ದೀಪಾವಳಿಯಲ್ಲಿ ಐದು ವಿಧದ ಉಂಡಿ ಎಂಬ ಸಿಹಿ ತಿಂಡಿ, ಕೊಬ್ಬರಿ ಗಿಟುಕಗಳೊಂದಿಗೆ ತಂದುಡಿಸುವ ಸೀರೆ.

- **ಮದುವೆ ಸೀರೆ** :- ಮದುವೆಯ ದಿನ ಮಾಂಗಲ್ಯ ಧಾರಣೆಯ ಸಂದರ್ಭದಲ್ಲಿ ಗಂಡಿನ ಕಡೆಯವರು ತಂದುಡಿಸುವ ಬೆಲೆಬಾಳುವ ರೇಷ್ಮೆಸೀರೆ.

• **ಧಾರೆ ಸೀರೆ** :- ಮದುವೆಯ ದಿನ ಧಾರೆ ಮುಹೂರ್ತದ ಸಮಯದಲ್ಲಿ ತೌರಿನ ಕಡೆಯವರು ತಂದುಡಿಸುವ ಬೆಲೆಬಾಳುವ ಸೀರೆ.

• **ಉಡಿ ಅಕ್ಕಿ ಸೀರೆ** :- ಮದುವೆಯ ನಂತರ ಗಂಡನಮನೆಗೆ ಬೀಳ್ಕೊಡುವಾಗ ಉಡಿ(ಮಡಿಲು) ಯಲ್ಲಿ ೫ ತರಹದ ಕಾಳುಗಳನ್ನು ಹಾಕುವವ ಸಂದರ್ಭದಲ್ಲಿ ತೌರಿನ ಕಡೆಯವರು ತಂದುಡಿಸುವ ಬೆಲೆಬಾಳುವ ಮುತ್ತೈದೆ ಸೀರೆ.

• **ತಾಯಿ ಸೀರೆ** :- ಮದುವೆಯ ಸಂದರ್ಭದಲ್ಲಿ ಹಡೆದ ತಾಯಿ ಹೊಟ್ಟೆ ತಣ್ಣಗಿರಲಿ ಎಂದು ಗಂಡಿನ ಕಡೆಯವರು ಕನ್ಯೆಯ ತಾಯಿಗೆ ತಂದು ಕೊಡುವ ಕಿಮ್ಮತ್ತಿನ ಸೀರೆ.

• **ಸೀಮಂತ ಕಾರ್ಯದ ಸೀರೆ** :- ಮೊದಲ ಸಲ ತಾಯಿಯಾಗು ಭಾಗ್ಯ ಒದಗಿದಾಗ ಹೆಣ್ಣಿನ ಕಡೆಯವರು ೫ ಇಲ್ಲವೇ ೭ ತಿಂಗಳಿನಲ್ಲಿ ಬಯಕೆಯುಡುಗೆಯೊಂದಿಗೆ ಸೀಮಂತ ಕಾರ್ಯ ನಡೆಯುತ್ತದೆ. ಈಸಂದರ್ಭದಲ್ಲಿ ತೌರಿನ ಕಡೆಯವರು ತಂದುಡಿಸುವ ಬೆಲೆಬಾಳುವ ಮುತ್ತೈದೆ ಸೀರೆ.

ನೇಕಾರ ಮೊದಲು ನೇಯ್ದ ಸೀರೆಯನ್ನು ದೇವರಿಗೆ ಅರ್ಪಿಸುತ್ತಾನೆ. ಗಂಡ ಸತ್ತ ಮಗಳಿಗೆ ತೌರಿನವರು ತರುವ ರಂಡೆ ಸೀರೆ, ಹೀಗೆ ಅನೇಕ ಸಂದರ್ಭಗಳಲ್ಲಿ ಉತ್ತರಕರ್ನಾಟಕದಲ್ಲಿ ಇಳಕಲ್ಲ ಸೀರೆಯನ್ನು ಬಳಸುತ್ತಾರೆ.

**ಇಳಕಲ್ಲ ಸೀರೆ ಉತ್ಪಾದಿಸುವ ಆರ್ಥಿಕ ವಿಧಾನ :**

ಸೀರೆ ಉತ್ಪಾದಿಸುವ ವಿಧಾನ/ಕ್ರಮದಲ್ಲಿ ಕೂಲಿ ನೇಕಾರ, ಸ್ವಂತ ನೇಕಾರ ಹಾಗೂ ವರ್ತಕ(ಸಾಹುಕಾರ/ಧಣಿ)ರ ನಡುವಿನ ಕೊಡುಕೊಳ್ಳುವಲ್ಲಿ ಮುಂಗಡ, ಸಟ್ಟಾ, ರೋಖಡಾ ಹಾಗೂ ಕೂಲಿ ಎಂಬ ನಾಲ್ಕು ಪದ್ಧತಿಗಳಿವೆ.

➢ **ಮುಂಗಡ** :- ಸುಮಾರು ಹನ್ನೊಂದು ಸೀರೆಗಾಗುವಷ್ಟು ಬಣ್ಣ ಹಾಕಿದ ನೂಲು, ರೇಷ್ಮೆ, ಚಮಕಾ ಇತ್ಯಾದಿ ಕಚ್ಚಾ ಮಾಲನ್ನು ಹಾಗೂ ಸ್ವಲ್ಪ ಖರ್ಚಿಗೆ ಹಣವನ್ನು ಪಡೆದುಕೊಂಡು ಹೋಗುತ್ತಾನೆ. ನಂತರ ಹತ್ತು ಸೀರೆಗಳನ್ನು ಸಿದ್ಧಪಡಿಸಿಕೊಂಡು ಮುಂಗಡ ನೀಡಿದ ಉದ್ದಿಮೆದಾರನಿಗೆ ಕೊಟ್ಟು ಹತ್ತು ಸೀರೆಗಳ ಮಜೂರಿ(ಕೂಲಿ) ಪಡೆಯುತ್ತಾನೆ. ಇನ್ನೂ ಉಳಿದ ಕಚ್ಚಾಮಾಲಿನಲ್ಲಿ ಹನ್ನೊಂದನೆಯ ಸೀರೆ ನೆಯ್ದುಕೊಳ್ಳುತ್ತಾನೆ. ಇದು ನೇಕಾರನಿಗೆ ಸಿಕ್ಕುವ ಬೋನಸ್ ಆಗಿರುತ್ತದೆ!

➢ **ಸಟ್ಟಾ** :- ಪ್ರಚಲಿತ ದರದಲ್ಲಿ ಉದ್ದಿಮೆದಾರನಿಂದ ಕಚ್ಚಾ ಮಾಲು ಪಡೆದು, ಸೀರೆಯನ್ನು ಸಿದ್ಧಪಡಿಸಿ, ಪ್ರಚಲಿತ ದರಕ್ಕೇ ಆ ಸೀರೆಯನ್ನು ಅದೇ ಉದ್ದಮೆದಾರನಿಗೆ ಮಾರುತ್ತಾನೆ. ಈ ವಿಧದಲ್ಲಿ ಮಾರುಕಟ್ಟೆಯ ಏರಿಳಿತದಿಂದಾಗಿ ಒಮ್ಮೊಮ್ಮೆ 'ಜಾಡನ ಹೆಂಡತಿ ಬೆತ್ತಲೆ', 'ಮಗ್ಗವಲ್ಲ ಕೊರಳಿಗೆ ಹಗ್ಗ' ಎಂಬುದನ್ನು ದೃಢಪಡಿಸಿಬಿಡುತ್ತದೆ.

➢ **ರೋಖಡಾ** :- ಇಲ್ಲಿ ನೇಕಾರ ತನಗೆ ಬೇಕಾದ ಕಚ್ಚಾ ಮಾಲನ್ನು ಯಾವುದೇ ಅಂಗಡಿ ಅಥವಾ ನೇಕಾರರ ಸಂಘ ಅಥವಾ ಸಂಸ್ಥೆಗಳಲ್ಲಿ ಕೊಂಡುಕೊಳ್ಳಬಹುದು. ನೆಯ್ದ ಸೀರೆಯನ್ನು ಯಾರಿಗಾದರೂ ಮಾರಾಟ ಮಾಡಬಹುದು.

➢ **ಕೂಲಿ** :- ಇಲ್ಲಿ ನೇಕಾರ ಸಾಹುಕಾರ ಉದ್ದಿಮೆದಾರನ ಕೈಮಗ್ಗ ಅಥವಾ ವಿದ್ಯುತ್ ಮಗ್ಗಗಳಿರುವಲ್ಲಿಗೇ ಹೋಗಿ ಅವರದೇ ಕಚ್ಚಾಮಾಲು, ಅವರದೇ ಮಗ್ಗಗಳಲ್ಲಿ ತನಗೆ ಸಾಧ್ಯವಾದಷ್ಟು ಸಮಯ ನೇಯ್ದು ಒಂದು ಸೀರೆಗೆ ಇಂತಿಷ್ಟೆಂದು ಕೂಲಿ ಪಡೆಯುತ್ತಾನೆ. ಇಲ್ಲಿ ವ್ಯಕ್ತಿ ಸ್ವಾತಂತ್ರ್ಯವಿದ್ದರೂ ಮುಂಗಡ ಅಥವಾ ಸಾಲ ಮಾಡಿದ ನೇಕಾರ *'ಧಣಿ ಸಂಸ್ಕೃತಿಗೆ ಮಣಿಯಲೇಬೇಕಾಗುತ್ತದೆ'.* ಒಟ್ಟಿನಲ್ಲಿ The master weavers are exploiting the ignorance of the poor weavers ಎಂಬಂತಾಗಿದೆ.

➢ **ಇಳಕಲ್ಲ ಸೀರೆ ತಯಾರಿಕೆಯಿಂದ ಆರೋಗ್ಯದ ಮೇಲಾಗುವ ದುಷ್ಪರಿಣಾಮಗಳು** :

ಯಾವುದೇ ಕೆಲಸದ ಧನಾತ್ಮಕ ಹಾಗೂ ಋಣಾತ್ಮಕ ಅಂಶಗಳಿರುವಂತೆ ಇಳಕಲ್ಲ ಸೀರೆ ಉದ್ಯಮದಲ್ಲಿ ವಿವಿಧ ಉದ್ಯೋಗ ಮಾಡುವವರಿಗೆ ವಿವಿಧ ರೋಗ-ರುಜಿನಗಳು ಬರುವುದುಂಟು. ನೂಲಿಗೆ ರಾಸಾಯನಿಕ ಬಣ್ಣ ಹಾಕುವ ಬಣ್ಣದ ಬದುಕು ಕೂಡಾ ತುಂಬಾ ಅಪಾಯದಲ್ಲಿದೆ! ಕೈಗೆ ಗ್ಲೋವ್ಸ್ ಹಾಕಿಕೊಳ್ಳುತ್ತಾರಾದರೂ ಕಣ್ಣು ಮತ್ತು ಮೂಗಿಗೆ ಯಾವುದೇ ರಕ್ಷಾಕವಚ ಧರಿಸದಿರುವವರೇ ಹೆಚ್ಚು.

"ಈ ಬಣ್ಣದ ವಾಸನೆ, ಘಾಟು ಹಾಗೂ ವಿಷಯುಕ್ತ ರಸಾಯನಿಕ ಪದಾರ್ಥಗಳು ಡೈಯಿಂಗ್(Dyeing) ಕಾರ್ಮಿಕರ (ಬಣಗಾರ ಹಾಗೂ ನೀಲಗಾರರ) ಆರೋಗ್ಯದ ಮೇಲೆ ತುಂಬಾ ದುಷ್ಪರಿಣಾಮ ಬೀರುತ್ತದೆ. ಚರ್ಮರೋಗ(ಅಲರ್ಜಿ), ಕ್ಷಯರೋಗ, ಕೆಮ್ಮು, ಶ್ವಾಸಕೋಶದ ಅಲರ್ಜಿಯಂತಹ ಅನಾರೋಗ್ಯಕ್ಕೆ ತುತ್ತಾಗಬಹುದು. ಈ

ಅಪಾಯದಿಂದ ನಮ್ಮನ್ನ ರಕ್ಷಣೆ ಮಾಡೋರ್ಯಾರು?" ಎಂದು ಗೋಳು ತೋಡಿಕೊಂಡವರು ಇಲಕಲ್ಲಿನ ಡೈಯಿಂಗ್ ಕಾರ್ಮಿಕ **ಹನಮಪ್ಪ ಬಾಳಪ್ಪ ತಳವಾರ**.

ನೇಕಾರರಿಗೆ, ಹೆಣಗಿ ಕೆಚ್ಚುವವರಿಗೆ, ಟಾಣ ಹಾಕುವವರಿಗೆ, ಕಂಡಿಕಿ ಸುತ್ತುವವರಿಗೆ ಸಾಮಾನ್ಯವಾಗಿ ಬೆನ್ನು ಹಾಗೂ ಸೊಂಟ ನೋವು, ಕೈ ಕಾಲು ನೋವು, ಕಾವು, ಕಣ್ಣಿನ ದೃಷ್ಟಿ ಕ್ರಮೇಣ ಕಡಿಮೆಯಾಗುವುದು. ಆದರೆ.. ಬಹಳಷ್ಟು ಜನ ದುಷ್ಪರಿಣಾಮಗಳೇನೂ ಇಲ್ಲ ಬದಲಾಗಿ ವ್ಯಾಯಾಮ ಆಗುವುದಾಗಿ ಅಭಿಪ್ರಾಯ ವ್ಯಕ್ತಪಡಿಸಿದರು!

**ನೇಕಾರಿಕೆಗೆ ಸಂಬಂಧಿಸಿದ ಗಾದೆಗಳು :**

- ಅಜ್ಜಿ ನೂಲುವುದು ಅಜ್ಜನ ಉಡುದಾರಕ್ಕೆ ಸಾಲದು
- ನೇಯುವವನಿಗೆ ಲಂಗೋಟಿಗೂ ಬರ
- ಗಡಿ ಗಟ್ಟಿ ಇದ್ರ ನಾಡು, ದಡಿ ಗಟ್ಟಿ ಇದ್ರ ಸೀರೆ
- ನಡಬರಕ ಹರಿದ(ಇಳಕಲ್ಲ)ಸೀರಿ ಉಡಲಾಸಲ್ಲ; ನಡಬರಕ ಬಂದ ಶ್ರೀಮಂತಿಕಿ ನೋಡಲಾಸಲ್ಲ!
- ನೇಕಾರನ ಹೆಂಡತಿ ಬತ್ತಲೆ
- ಜಾಡನ್ನ ಬಿಟ್ಟು ನೋಡು, ಮಂಗನ್ನ ಕಟ್ಟಿ ನೋಡು.
- ಲಾಳಿ ಮ್ಯಾಲೆ ಲಾಳಿ ಒಗೆದ್ರೆ ಬ್ಯಾಳಿ ರೊಟ್ಟಿಗೆ ಬರ ಇಲ್ಲ.
- ತಾಯಿಯಂತೆ ಮಗಳು ನೂಲಿನಂತೆ ಸೀರೆ.
- ಕುಣಿಯಲ್ಲಿ ಕೂತವ ಹೆಣ ಅಲ್ಲ , ಬಟ್ಟೆ ಹರಿಯುವವ ಹುಚ್ಚನಲ್ಲ.
- ನೇಯ್ಗೆಯವನ ಮಟ್ಟ ಕಟ್ಟುವವ ಬಲ್ಲ
- ನೇಯುವವನ ಕೈ ಓದುವವನ ಬಾಯಿ ಚುರುಕಾಗಿರಬೇಕು.
- ನೇಯ್ಗೆ ನಯವಿದ್ದರೆ ನಾಣ್ಯ ಸಿಕ್ಕೀತು.
- ನೇಕಾರನ ಮನೆಯಲ್ಲಿ ದೆವ್ವಕ್ಕೂ ಕೆಲಸ

*

### ೩.೫.೨ ಗುಳೇದಗುಡ್ಡದ ಖಣ ನೇಕಾರಿಕೆ

**ಗುಳೇದಗುಡ್ಡದ ಖಣದ ನೇಕಾರರ ಹಿನ್ನೆಲೆ ಮತ್ತು ಮೂಲ :**

ಗುಳೇದಗುಡ್ಡಕ್ಕೂ ಖಣಕ್ಕೂ ಪಾರಂಪರಿಕ ಕಸಬಿನ ಅವಿನಾಭಾವ ಸಂಬಂಧವಿದೆ. "ಇಲ್ಲಿನ ಖಣಗಳ ಖ್ಯಾತಿಗೆ ಐದು ಶತಮಾನಗಳಿಗೂ ಹೆಚ್ಚು ವರ್ಷಗಳ ಇತಿಹಾಸ, ಪರಂಪರೆ ಇದೆ."[೨೫]

"ಉಟ್ಟರೆ ಇಳಕಲ್ಲ ಸೀರೆ ಉಡಬೇಕು, ತೊಟ್ಟರೆ ಗುಳೇದಗುಡ್ಡದ ಖಣ ತೊಡಬೇಕು" ಎಂಬ ಗಾದೆಯ ಹುಟ್ಟಿಗೂ ಕಾರಣವಾಗಿರುವ ಖಣ(ಕುಪ್ಪಸ)ವನ್ನು "ಗುಳೇದಗುಡ್ಡದ ಖಣ ಅಂದ್ರs ನೂಲಿನಲ್ಲಿ ನೆಯ್ದು ವರ್ಣಮಯ ಕಾವ್ಯವಿದ್ದಂತೆ" ಎಂದು ಬೆರಗಾಗಿ ಬಣ್ಣಿಸಿದವರೂ ಇದ್ದಾರೆ! "ಗುಳೇದಗುಡ್ಡಕ್ಕೊಮ್ಮೆ ಅಕ್ಕವ್ವ ನೀಬಾರ, ಬರುವಾಗ ಖಣಗಳಿಗೆ ರೂಪಾಯಿ ನೀ ತಾರ." ಎಂಬ ಕವಿವಾಣಿ ಇಲ್ಲಿನ ನೇಕಾರರ ಬದುಕಿಗೆ ಹಿಡಿದ ಕೈಗನ್ನಡಿಯಾಗಿದೆ. ಬಹು ಸಂಸ್ಕೃತಿಯ ನಾಡಿನಲ್ಲಿ ಸೀರೆಯಲ್ಲಿ ಕುಪ್ಪಸವನ್ನು 'ಭಾರತೀಯ ತೊಡುಗೆ, ನಮ್ಮ ಸಂಸ್ಕೃತಿ' ಎಂದು ಒ(ಅ)ಪ್ಪಿಕೊಂಡಿದ್ದೇವೆ. ಅದರಲ್ಲೂ ಇಳಕಲ್ಲ ಸೀರೆ ಮಹಿಳೆಯರ ಮಾನವಾದರೆ, ಗುಳೇದಗುಡ್ಡದ ಖಣ ನಾರಿಯರ ಪ್ರಾಣವಾಗಿವೆ. ಇವುಗಳನ್ನು ಜಾನಪದ ಸೊಗಡಿನ ಸೀರೆ-ಕುಪ್ಪಸವೆಂದೂ, ಮುತ್ತೈದೆಯ ಲಕ್ಷಣವೆಂದೂ, 'ಭಾರತೀಯ ಸಂಸ್ಕೃತಿ' ಎಂದೂ ಕುಷ್ಟಗಿ ಪರಿಸರವೂ ಒಳಗೊಂಡಂತೆ ಉತ್ತರ ಕರ್ನಾಟಕದ ಜನರು ಹಾಗೂ ಮಹಾರಾಷ್ಟ್ರದ ಕೆಲವು ಜನಾಂಗಗಳು ಒ(ಅ)ಪ್ಪಿಕೊಂಡಿದ್ದಾರೆಂದರೆ ಈ ನಾರಿಯರ ಎದೆಗಪ್ಪುವ, ಒಪ್ಪುವ ಚಿತ್ತಾಪಹಾರಿ ಚಿತ್ತಾರದ ಖಣಗಳ ಮಹತ್ವ ಅರಿವಾಗುತ್ತದೆ.

ನಗರ ಪ್ರದೇಶದಲ್ಲಿರುವ ಹೆಣ್ಣುಮಕ್ಕಳು ಅಪ್ಪಟ ದೇಸಿ ಉಡುಗೆ ತೊಟ್ಟು ಹಬ್ಬ ತೊಟ್ಟು ಹಬ್ಬಾಚರಿಸಲು ಬೆಂಗಳೂರಿನ ಜಯನಗರದಲ್ಲಿ 'ಗ್ರಾಮೀಣ ಅಂಗಡಿ'ಯು ಈ ಸಲ "ಬಾ ತಂಗಿ ಎಳ್ಳು ಬೆಲ್ಲ ಬೀರೋಣ, ಜರತಾರಿ ಸೀರೆ ಜರತಾರಿ ಕುಪ್ಪಸ ತೊಟ್ಟು ಬಾ" ಎಂಬ ಘೋಷವಾಕ್ಯದೊಂದಿಗೆ ಕೈಮಗ್ಗ ಮತ್ತು ಖಾದಿ ಗ್ರಾಮೋದ್ಯೋಗ ವಸ್ತುಗಳ ಪ್ರದರ್ಶನ ಮತ್ತು ಮಾರಾಟ ಏರ್ಪಡಿಸಿದ್ದರು. ಇದರಲ್ಲಿ ಕುಷ್ಟಗಿ ಪರಿಸರದಲ್ಲಿ ಉತ್ಪಾದಿಸಲ್ಪಡುವ ಇಳಕಲ್ಲ ಸೀರೆ, ಗುಳೇದಗುಡ್ಡದ ಖಣಗಳದ್ದೇ ಪ್ರಮುಖ ಪಾತ್ರವಾಗಿತ್ತೆಂಬು ವಿಶೇಷ!

**ಗುಳೇದಗುಡ್ಡ ಪಟ್ಟಣದ ಮಾಹಿತಿ :**

ಗುಳೇದಗುಡ್ಡ ಪಟ್ಟಣವು ಇದೀಗ ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನಲ್ಲಿದೆ. ಕುಷ್ಟಗಿಯಿಂದ ರಾಷ್ಟ್ರೀಯ ಹೆದ್ದಾರಿ-೫೦ರಲ್ಲಿ ೩೪ ಕಿ.ಮೀ. ಪಯಣಿಸಿದರೆ ಸಿಕ್ಕುವ ಹುನಗುಂದ ನಗರದಿಂದ ಬಾಗಲಕೋಟ ರಸ್ತೆಯಲ್ಲಿ ೨೨ ಕಿ.ಮೀ ಸಾಗಿ ಮಲಪ್ರಭಾ ನದಿಯ ಪಕ್ಕದಲ್ಲಿರುವ ಕಮತಗಿ ಕ್ರಾಸ್‌ನಿಂದ ಕೇವಲ ೧೦ಕಿ.ಮೀ ಬಾದಾಮಿ ರಸ್ತೆಯಲ್ಲಿ ಚಲಿಸಿದರೆ ಸಿಕ್ಕುವ ಅಪ್ಪಟ ನೇಕಾರರ ಊರು. ಬಾದಾಮಿಯಿಂದ ಈಶಾನ್ಯಕ್ಕೆ ೧೫ ಕಿ.ಮೀ ದೂರದಲ್ಲಿದೆ.

೨೦೧೧ರ ಜನಗಣತಿಯ ಪ್ರಕಾರ ೩೩೩೮೭ ಜನಸಂಖ್ಯೆಯನ್ನು ಹೊಂದಿರುವ ಈ ಪಟ್ಟಣದಲ್ಲಿ ೧೬೬೩೧ ಪುರುಷರು ಹಾಗೂ ೧೬೭೫೧ ಸ್ತ್ರೀಯರಿದ್ದಾರೆ. ಇದರಲ್ಲಿ ಹಿಂದೂ-೮೫.೦೨%, ಮುಸ್ಲಿಂ-೧೨.೯%, ಕ್ರೈಸ್ತರು-೧.೫೧%, ಜೈನರು-೦.೦೯%, ಸಿಖ್-೦.೦೧%ರಷ್ಟು ಧರ್ಮವಾರು ಜನಸಂಖ್ಯೆ ಇದೆ. ಸುಮಾರು ೨/೩ ಭಾಗದಷ್ಟು ಅಂದರೆ ೨೨ ಸಾವಿರ ಜನರು ಖಣದ ಉದ್ದಿಮೆಯನ್ನೇ ನಂಬಿದ್ದಾರೆ. ಹಿಂದಿನ ಅಂಕಿ-ಸಂಖ್ಯೆಯನ್ನು ಗಮನಿಸಿದರೆ ನೇಕಾರಿಕೆ ಹಾಗೂ ಮಗ್ಗಗಳ ಸಂಖ್ಯೆ ಕ್ರಮೇಣ ಕ್ಷೀಣಿಸಿದೆ. ಏಕೆಂದರೆ ಆಧುನಿಕತೆಗೆ ತಕ್ಕಂತೆ ವಿನ್ಯಾಸವನ್ನು ಬದಲಿಸಿಕೊಳ್ಳದ ಗುಳೇದಗುಡ್ಡದ ಖಣಕ್ಕೆ ಬೇಡಿಕೆ ಕಡಿಮೆಯಾಯಿತು, ಹೆಚ್ಚು ಶ್ರಮಕ್ಕೆ ಕಡಿಮೆ ಕೂಲಿ ಸಿಗುವಂತಾಗಿದ್ದರಿಂದ ಸಾವಿರಾರು ಜನರು ಉದ್ಯೋಗ ಅರಸಿಕೊಂಡು ಬೆಂಗಳೂರು ನಗರಕ್ಕೆ ಗುಳೇ ಹೋಗಿದ್ದ ಕಾಮಾಕ್ಷಿಪಾಳ್ಯ, ಮಹಾಲಕ್ಷ್ಮೀ ಲೇಔಟ್, ಕಬ್ಬನ್‌ಪೇಟೆಗಳಲ್ಲಿ ನೆಲೆಸಿದ್ದಾರೆ. ಅವರಿಗೆ ನೇಕಾರಿಕೆಯನ್ನು ಬಿಟ್ಟರೆ ಬೇರೆ ಕೆಲಸ ಬಾರದ ಅಥವಾ ಮಾಡಲು ಕಷ್ಟವಾಗುವುದರಿಂದ ಇಷ್ಟವಿಲ್ಲದ ಪ್ರಯುಕ್ತ ಖಣ ನೇಕಾರಿಕೆಯನ್ನು ಹೊರತುಪಡಿಸಿ ಸೀರೆ, ಧೋತಿ, ಲುಂಗಿ ಮುಂತಾದವುಗಳನ್ನು ನೇಯುತ್ತಾ ಅಲ್ಲಿಯೂ ಕೆಲವರು ನೇಕಾರಿಕೆಯನ್ನೇ ಮುಂದುವರಿಸಿದ್ದಾರೆ! ಹೀಗಿದ್ದಾಗ್ಯೂ ಈ ಪಟ್ಟಣದಲ್ಲಿ ಸುಮಾರು ೪೦೦೦ಕ್ಕೂ ಹೆಚ್ಚು ಕೈಮಗ್ಗಗಳು, ೫೫೦೦ಕ್ಕೂ ಅಧಿಕ ವಿದ್ಯುತ್ ಮಗ್ಗಗಳಿದ್ದು ಇಂದಿಗೂ 'ಅಪ್ಪಟ ನೇಕಾರರ ಊರು' ಎಂಬ ಸ್ಥಾನವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ!

**ಗುಳೇದಗುಡ್ಡದ ಇತಿಹಾಸ :**

ಗುಳೇದಗುಡ್ಡ ಪಟ್ಟಣವು ಹಿಂದೆ ಇಲ್ಲಿನ 'ಗುಡ್ಡ'ದ ಮೇಲಿದ್ದ ಬಗ್ಗೆ ಈಗಲೂ ಅವಶೇಷಗಳಿವೆ. ೧೫೮೦ರಲ್ಲಿ ಬಿಜಾಪುರದ ಎರಡನೆಯ ಇಬ್ರಾಹಿಂ ಆದಿಲ್‌ಶಹ ಇಲ್ಲಿ

ಕೋಟೆಯೊಂದನ್ನು ಕಟ್ಟಿಸಿದನು. ೧೭೦೬ರಲ್ಲಿ ಮಲಪ್ರಭಾ ನದಿಯ ಜಲಾಶಯದ ದಂಡೆಯ ಮೇಲೆ ಈ ಪಟ್ಟಣ ಸ್ಥಾಪನೆಯಾಯಿತು. ೧೭೫೦ರಲ್ಲಿ ಈ ಪಟ್ಟಣ ಲೂಟಿಗೆ ಒಳಗಾಯಿತು. ೧೭೮೭ರಲ್ಲಿ ಮೈಸೂರಿನ ಹುಲಿ ಟಿಪ್ಪುವಿನ ಅಧೀನಕ್ಕೊಳಪಟ್ಟ ನಂತರ ಮರಾಠರಿಂದ ಲೂಟಿಗೊಳಗಾಯಿತು. ಹೆದರಿದ ಇಲ್ಲಿಯ ನಿವಾಸಿಗಳು ಊರು ಬಿಟ್ಟು 'ಗುಳೇ'(ಹೊಟ್ಟೆಪಾಡಿಗಾಗಿ ಗಂಟು-ಮೂಟೆಯೊಂದಿಗೆ ಕುಟುಂಬ ಸಮೇತ ಊರು ತೊರೆಯುವುದು) ಹೋದರು! ಇಲ್ಲಿ ಕೋಟೆಕಲ್ಲು ದೇಸಾಯಿ ಮನೆತನದ ಪ್ರಭಾವದಿಂದಾಗಿ ಪುನಃ ಪಟ್ಟಣಕ್ಕೆ ಮರಳಿದರು. ನರಸಿಂಹನೆಂಬವನು ಮತ್ತೇ ಲೂಟಿ ಮಾಡಿದನು. ಜನ ಪುನಃ ಗುಳೇ ಹೋದರು! ೧೮೧೮ರಲ್ಲಿ ದೇಸಾಯಿ ಕುಟುಂಬವು ಒತ್ತಾಯದೊಂದಿಗೆ, ಬ್ರಿಟಿಷ್ ಅಧಿಕಾರಿ ಜನರಲ್ ಮನ್ರೋ ಸಹಯೋಗದೊಂದಿಗೆ ಪುನಃ ಅಲ್ಲಿನ ನಿವಾಸಿಗಳನ್ನು ಕರೆತಂದು ವಾಸ ಮಾಡಲು ನೇಕಾರಿಕೆಯ ಅನುಕೂಲ ಮಾಡಿಕೊಟ್ಟಿತು!! ಅದುವೇ ಖಣದ ನೇಕಾರಿಕೆ!!!

ಹೀಗೆ "ಗುಡ್ಡದ ಮೇಲಿದ್ದ ಊರಿನ ಜನರು ಗುಳೇ ಇಳಿದಿರುವುದರಿಂದ ಅಥವಾ ಪದೇ ಪದೇ ಗುಳೇ ಹೋಗುತ್ತಿದ್ದುದರಿಂದ ಈ ಪಟ್ಟಣವನ್ನು ಗುಳೇದಗುಡ್ಡ ಎಂದು ಕರೆದಿರಬಹುದು." ಹೀಗೆಂದು ಈ ಗ್ರಾಮದ ಶಿಕ್ಷಕ ಹಾಗೂ ನೇಕಾರ ಸಂಗಪ್ಪ ಧೂಪದ ಅಭಿಪ್ರಾಯಪಡುತ್ತಾರೆ.

ಗುಳೇದಗುಡ್ಡ ತನ್ನ ಮೂಲ ಉದ್ಯಮ ಕೈಮಗ್ಗದ ಖಣ (Hand Loom), ಉತ್ಪಾದನೆಯ ಜೊತೆ ಜೊತೆಗೆ ವಿದ್ಯುತ್ ಮಗ್ಗದ ಖಣ (Power Loom) ಉತ್ಪಾದಕರೊಂದಿಗೆ ಪೈಪೋಟಿಯತ್ತ ವಾಲುತ್ತಿರುವುದು ಅನಿವಾರ್ಯವಾಗಿದೆ. ಈ ಹಿನ್ನೆಲೆಯಲ್ಲಿ ಗುಳೇದಗುಡ್ಡದ ಖಣ ಉದ್ಯಮದ ಹಿನ್ನೆಲೆ, ಏಳು-ಬೀಳು, ಇಂದಿನ ಸ್ಥಿತಿ-ಗತಿಯನ್ನು ಅವಲೋಕಿಸಿ ಅನೇಕರಿಗೆ ಉದ್ಯೋಗ ನೀಡುವ ಕೈಮಗ್ಗ ನೇಕಾರಿಕೆಯನ್ನು ಬಲಗೊಳಿಸಬೇಕಿದೆ.

ಗುಳೇದಗುಡ್ಡದ ಖಣಗಳು ಕೇವಲ ಗುಳೇದಗುಡ್ಡದಲ್ಲಿ ಮಾತ್ರ ನೇಯಲ್ಪಡದೇ ಗಜೇಂದ್ರಗಡ, ಕಮತಗಿ, ಅಮೀನಗಡ, ಸೂಳೇಬಾವಿ, ಗುಡೂರ, ಇಳಕಲ್ಲ, ಶಿರೂರ, ಬೀಳಗಿ, ರಬಕವಿ, ಬನಹಟ್ಟಿ, ತೇರದಾಳ, ಮಹಲಿಂಗಪೂರಗಳಂತಹ ಅನೇಕ ಊರುಗಳಲ್ಲಿಯೂ ತಯಾರಾಗುತ್ತವೆ.

**ಜನಪದ ಸಾಹಿತ್ಯದಲ್ಲಿ ಕುಪ್ಪಸದ ಖಣಗಳು :**

➢ "ಬಸಿರ ಬಯಕೆ ಚಂದ ಹಸಿರು ಕುಪ್ಪಸ ಚೆಂದ

ನಸುಗೆಂಪಿನವಳ ನಗೆ ಚೆಂದ । ನನ ಮಗಳು

ಬಸುರಾದರೆ ಚೆಂದ ಬಳಗಕ್ಕೆ ॥ – ಎಂದು ತಾಯಿ ಹಂಬಲಿಸುವಳು.

➢ ಸೊಲ್ಲಾಪುರದಣ್ಣಗ ನಿಲ್ಲದಲೆ ಬರಹೇಳು

ಸೀರೊಲ್ಲೆ ಅವನ ಕುಬಸೊಲ್ಲೆ । ಅಣ್ಣನ

ಮಾರಿ ನೋಡಂತ ಮನವಾಗಿ । – ತಂಗಿಗೆ ಅಣ್ಣನ ಬರುವಿಕೆಯೇ ಸ್ವರ್ಗ.

➢ ತೊಟ್ಟ ಕುಪ್ಪಸ ಮೈಬೆವೆರಿದೆ ಬಿಗುವೇರೆ

ಸರದ ಭಾರಕೆ ಬಳುಕುತ । ಹರಿವದವೆ

ಹಿಟ್ಟು ಕಟ್ಟಿದರೆ ವನಿತೆಯರು।

– ತೊಟ್ಟ ಕುಪ್ಪಸ ಮೈಬೆವರಿದರೂ ತವರಿನ ಸರ ಬೇಕು."[೨೬]

ಹೀಗೆ ಜನಪದ ಹಾಡಿನಲ್ಲಿ ಕುಪ್ಪಸ ಹಾಸುಹೊಕ್ಕಾಗಿದ್ದು ಈ ಪರಿಸರದ ಮಹಿಳೆಯರ ಸಾಂಪ್ರದಾಯಿಕ ತೊಡುಗೆಯಾಗಿದೆ. ಜಾನಪದ ಆಚರಣೆಗಳಲ್ಲಿಯೂ ಕುಪ್ಪಸ ಪ್ರಮುಖ ಪಾತ್ರ ವಹಿಸುತ್ತದೆ. ಹಿರಿಯರ ಹಬ್ಬದಲ್ಲಿ ಸೀರೆ, ಖಣವನ್ನು ಇಟ್ಟು ಪೂಜಿಸುವುದುಂಟು. ನಾಗರ ಪಂಚಮಿಯಲ್ಲಿ ತಮ್ಮವಳಾಗಲಿರುವ ಕನ್ಯೆಗೆ 'ದಂಡಿ ಕುಬುಸದ ಸೀರೆ' ಕೊಡುವುದುಂಟು. ಮನೆಗೆ ಬಂದ ಮಹಿಳೆಗೆ ಸೀರೆ ಉಡುಗೊರೆ ಕೊಡಲಾಗದಿದ್ದಾಗ ಕನಿಷ್ಠ ಒಂದು ಖಣವನ್ನಾದರೂ ಕೊಡುವ ಸಂಪ್ರದಾಯ ಈಗಲೂ ಇದೆ. ಹೀಗೆ ಜನಪದರ ಸಂಸ್ಕೃತಿ, ಆಚಾರ-ವಿಚಾರ, ಕಲೆ, ಅಭಿರುಚಿ, ಆಸಕ್ತಿಗಳನ್ನು ಅಭಿವ್ಯಕ್ತಪಡಿಸುವ ಅನೇಕ ವಿಷಯಗಳಲ್ಲಿ ಈ ಕುಪ್ಪಸದ ಸಾಂಸ್ಕೃತಿಕ ಪರಂಪರೆ ಹಾಸುಹೊಕ್ಕಾಗಿದೆ.

**ಖಣ ನೇಕಾರರಲ್ಲಿ ಧರ್ಮ – ಜಾತಿ-ಉಪಜಾತಿಗಳು :**

ಗುಳೇದಗುಡ್ಡದ ಖಣ ನೇಕಾರರಲ್ಲಿ ಪ್ರಮುಖವಾಗಿ ಹಿಂದೂ-೮೫.೦೨%, ಮುಸ್ಲಿಂ-೧೨.೭೯%, ಕ್ರೈಸ್ತರು-೧.೫೧%, ಜೈನರು-೦.೦೯%, ಸಿಖ್-೦.೦೧%ರಷ್ಟು ಧರ್ಮದವರಿದ್ದಾರೆ. ಪ್ರಮುಖವಾಗಿ ಹಿಂದೂಗಳಲ್ಲಿನ ದೇವಾಂಗ, ಪಟ್ಟಸಾಲಿ, ಪದ್ಮಶಾಲಿ, ಸ್ವಕುಳಸಾಳಿ, ತೊಗಟವೀರ, ಕುರುಹಿನಶೆಟ್ಟಿ ಹಾಗೂ ಹಟಗಾರ ಎಂಬ ೭ ಪಂಗಡಗಳನ್ನು

ಕಾಣಬಹುದು. ಕರ್ನಾಟಕದಲ್ಲಿ ನೇಯ್ಗೆ ವೃತ್ತಿಯಲ್ಲಿ ತೊಡಗಿದ ಸುಮಾರು ೨೬ ಜಾತಿ-ಉಪಜಾತಿಗಳಿವೆ. ಅದರಲ್ಲಿ ಪ್ರಮುಖವಾಗಿ ನೇಕಾರ, ಜಾಡ(ಜೇಡ), ದೇವಾಂಗ, ಹಟಗಾರ, ದೇವಸಾಲಿ, ಚೆಟ್ಟಿಯಾರ್, ಕುರುಹಿನಶೆಟ್ಟಿ, ಕರಿ ಕುರುಹಿನಶೆಟ್ಟಿ, ಹಿರೆ ಕುರುಹಿನಶೆಟ್ಟಿ, ಲಿಂಗಾಯತ ಕುರುಹಿನಶೆಟ್ಟಿ, ಲಿಂಗಾಯತ ನೇಯ್ಗಿ, ಲಿಂಗಾಯತ ನೇಕಾರ, ಹಿಂದೂ ಲಿಂಗವಂತ ಜೇಡ, ಲಿಂಗಾಯತ ವೀರಶೈವ ಹಟಗಾರ, ನಾಥ ನೇಕಾರ, ನೇಯ್ಕಾರ್, ಪದ್ಮಶಾಲಿ, ಪದ್ಮಶಾಲೆ, ಪಟ್ಟಸಾಲೆ, ಪಟ್ಟಸಾಲಿ, ಸಾಲೆ(ಸಾಳೆ), ಸಾಳೇರ, ಶೆಟ್ಟಿಗಾರ, ಶಿವಸಮಾಸಾಲಿ ಶಿವಧ್ವಜ, ಸ್ವಕುಳಸಾಳಿ, ತೊಗಟ, ತೊಗಟವೀರ, ತೊಗಟವೀರಕ್ಷತ್ರಿಯ, ತೊಗಟವೀರಶೆಟ್ಟಿ ಹಾಗೂ ವಿಂಕಾರ ಎಂದು ಗುರುತಿಸಲಾಗಿದೆ.

ಆದರೆ... ಕುಲಕಸಬಿನಲ್ಲಿ ಬದಲಾವಣೆಯಾದಂತೆ ಸೀರೆ ನೇಯ್ಗೆಯ ವೃತ್ತಿ ಯಾವುದೇ ಒಂದು ಜಾತಿಗೆ ಮೀಸಲಾಗಿರದೇ ಬಹುತೇಕ ಲಿಂಗಾಯತರು, ಪಟೇಗಾರರು, ಉಪ್ಪಾರರು, ವಾಲ್ಮೀಕಿ, ಹರಿಜನ, ಕುರುಬರು ಮುಂತಾದ ಜಾತಿಗಳವರು ಹಾಗೂ ಮುಸ್ಲಿಂ ಧರ್ಮೀಯರು ನೇಕಾರಿಕೆ ವೃತ್ತಿಯಲ್ಲಿ ತೊಡಗಿಕೊಂಡಿದ್ದಾರೆ!

**ಖಣ ನೇಕಾರರಲ್ಲಿ ವಿಶಿಷ್ಟ ಜಾನಪದ ಆಚರಣೆ – ನೇಯು ಕಾಮ :**

"ಹೋಳಿ ಹಬ್ಬ ಬಾಗಲಕೋಟೆ ಜಿಲ್ಲೆಯಲ್ಲಿ ತುಂಬಾ ವಿಜೃಂಭಣೆಯಿಂದ ಆಚರಿಸಲ್ಪಡುತ್ತದೆ. ಕಾಮನ ಹಬ್ಬದಲ್ಲಿ ಊರಿನ ನೇಕಾರರು ರಚಿಸುವ ಕಾಮಣ್ಣಮೂರ್ತಿ. ಗುಳೇದಗುಡ್ಡ ಹಾಗೂ ಸುತ್ತಮುತ್ತಲಿನ ಭಾಗಗಳಲ್ಲಿ ನೋಡಬಹುದು. ಬಯಲು ಪ್ರದೇಶದಲ್ಲಿ ಒಂದು ಖಣದ ಮಗ್ಗದಲ್ಲಿ ನೇಕಾರ ದಂಪತಿಗಳು ನೇಯುವುದರಲ್ಲಿ ಮಗ್ನನಾಗಿರುತ್ತಾರೆ. ಪ್ರಾರಂಭದಲ್ಲಿ ತಮಾಷೆ ಸಹಿತ ನೇಕಾರನ ಸುಂದರ ಬದುಕಿನ ಸಂಕೇತವಾಗಿ ಈ ನೇಯು ಕಾಮಣ್ಣ ಕಂಡು ಬರುತ್ತದೆ. ಪುರುಷನೇ ಇಲ್ಲಿ ನೇಕಾರನ ಮಡದಿಯ ಪಾತ್ರವನ್ನು ಹಾಕಿಕೊಂಡಿರುತ್ತಾನೆ.

ಮಗ್ಗಕ್ಕಾಗಿ ಸಾಲ ನೀಡಿದ ಸಾಹುಕಾರ ನೇಕಾರ ದಂಪತಿಗಳನ್ನು ಸಾಲ ಕೊಡೆಂದು ಪೀಡಿಸುವ ರೀತಿ ನೆರೆದ ಜನರನ್ನು ನಕ್ಕು ನಲಿಸುತ್ತದೆ. ಒಂದು ಕಡೆ ಮನರಂಜನೆಯಾದರೂ ಅದರ ಒಡಲಲ್ಲಿ ನೇಕಾರನ ಕಷ್ಟದ ಬದುಕಿದೆ, ಸಾಲಗಾರರ

ಕಾಟದ ಮಜಲುಗಳಿವೆ ಎನ್ನುವುದನ್ನು ಕಾಮಣ್ಣ ಎಳೆ ಎಳೆಯಾಗಿ ಜನರ ಮುಂದೆ ತೆರೆದು ತೋರುತ್ತಾನೆ."[೩೩]

**ಖಣ ಪದದ ಅರ್ಥ ವಿವೇಚನೆ :**

**ಅರ್ಥ** :- ಸುಮಾರು ೨೦ ಇಂಚು ಉದ್ದ ಹಾಗೂ ಒಂದು ಮೀಟರ್ ಅಗಲವಿರುವ ಯಾವುದೇ ಹೊಲಿಗೆಯಿಲ್ಲದ ವಿವಿಧ ಬಣ್ಣಗಳು, ವಿನ್ಯಾಸಗಳು, ಕಲಾತ್ಮಕ ಕಸೂತಿಗಳು, ಅಂಚು ಇರುವ ವಿಶಿಷ್ಟ ಬಟ್ಟೆಯೇ ಖಣ. ದಪ್ಪವಿರುವವರು ಮತ್ತು ಇತ್ತೀಚಿನ ಮಹಿಳೆಯರು ೮೦ ಸೆಂಟಿ ಮೀಟರಿಗಿಂತಲೂ ಹೆಚ್ಚಿನ ಬಟ್ಟೆಯನ್ನು ತೆಗೆದುಕೊಳ್ಳುತ್ತಾರೆ. ಇದೀಗ ಭಾರತದ ಸ್ತ್ರೀಯರ ಸಾಂಸ್ಕೃತಿಕ ಉಡುಗೆಯಾಗಿರುವ ಸೀರೆಯೊಂದಿಗಿನ 'ರವಿಕೆ' ಅಥವಾ 'ಕುಪ್ಪಸ' ಜನಪದರ ಭಾಷೆಯಲ್ಲಿ 'ಕುಬುಸ'ವನ್ನು ಹೊಲಿಸಲು ಇರುವ ಬಟ್ಟೆ, ಖಣ ಆಗಿದೆಯೇ ಹೊರತು ಖಣವೇ ಕುಪ್ಪಸವಲ್ಲ! ಅದನ್ನು ತೊಡುಗೆಯಾಗಿ ಹೊಲಿ(ಸಿ)ದಾಗ ಮಾತ್ರ ಕುಪ್ಪಸವಾಗುತ್ತದೆ!!

**ಗುಳೇದಗುಡ್ಡದ ಖಣ ತಯಾರಾಗುವ ವಿಧಾನ :**

ಸೀ(ನೀ)ರೆಯ ಅಂದವನ್ನು ಹೆಚ್ಚಿಸುವಲ್ಲಿ ಖಣದ ಪಾತ್ರವೂ ಬಹುಮುಖ್ಯ! ಈ ಖಣವನ್ನು ತಯಾರಿಸುವ ವಿಧಾನವೂ ಅಷ್ಟೇ ಕುತೂಹಲಕಾರಿಯಾಗಿದೆ. ಹತ್ತಿಯನ್ನು ಹಿಂಜುವ ಮೂಲಕ ಬೀಜವನ್ನು ತೆಗೆದಾಗ ಅರಳಿಯಾಗುತ್ತದೆ. ಅರಳಿ ಹಿಂಜಲ್ಪಟ್ಟು ಹಂಜಿಯಾಗಿ; ಹಂಜಿ ನೂಲಾಗಿ ರೂಪುಗೊಳ್ಳುತ್ತದೆ. ಹಾಗೆಯೇ ರೇಷ್ಮೆ ಕೂಡಾ ನೂಲಾಗುತ್ತದೆ, ಆರ್ಟ ಸಿಲ್ಕು(ಚಮಕಾ)ಕೂಡಾ ನೂಲಾಗುತ್ತದೆ. ಈ ನೂಲನ್ನು ಬಯಸಿದಂತಹ ಬಣ್ಣ ಬಣ್ಣದ ಟಬ್ಬುಗಳಿಗೆ ತೋಡಿ, ನಂತರ ಮೀನಿನ ಸರಿಯಲ್ಲಿ ಮಿಶ್ರಣ ಮಾಡಿ, ಹಿಂಡಿ, ಒಣಗಿದ ನಂತರ ಎಳೆಗಳನ್ನು ಬಿಡಿಸಿ ಲಡಿಗೆ ತೋಡುತ್ತಾರೆ. ಇದಕ್ಕೆ 'ಜಾಳಿಸುವುದು' ಎಂದು ಹೆಸರು. ಬಣ್ಣ ಪಡೆದ ಖಣದ ಒಡ್ಲದಲ್ಲಿನ ಒಂದೊಂದು ಎಳೆಗಳಿಗೆ ಕೊಯ್ದು ಖಣದ ಎಳೆಗಳನ್ನು ಕೂಡಿಸುವುದಕ್ಕೆ 'ಠಾಣ' ಎನ್ನುತ್ತಾರೆ. ಆಮೇಲೆ ಖಣದ ಒಡ್ಲದಲ್ಲಿನ ಎಳೆಗಳನ್ನು 'ಹಣಗಿ' ಎಳೆಗಳಿಗೆ ಕೂಡಿಸುತ್ತಾರೆದಿದಕ್ಕೆ 'ಹಣಗಿ ಕೆಚ್ಚುವುದು' ಎನ್ನುತ್ತಾರೆ. ಈ ಎಳೆಗಳು ಸರಳವಾಗಿ ಬಿಡುವಂತಾಗಲು ಸುತ್ತುವುದನ್ನು 'ಹೈಟ'ಗೆ ತೋಡುವುದು ಎನ್ನುತ್ತಾರೆ. ಹೀಗೆ ತೋಡಿದ ಹೈಟಗೆ ಚೆನ್ನಾಗಿ ತಣ್ಣೀರು ಬಡಿದು, ಕೈ ರಾಟಿಯ ಮುಖಾಂತರ ಕಂಡಕಿಗೆ ಸುತ್ತುತ್ತಾರೆ. ನಂತರ ಕಂಡಕಿಗಳನ್ನು ಬುಟ್ಟಿಯಲ್ಲಿ ಹಾಕಿ ಬಿಸಿಲಿನಲ್ಲಿ ಒಣಗಿಸುತ್ತಾರೆ. ಬಣ್ಣ ಬಣ್ಣದ ನೂಲನ್ನು ಕುಪ್ಪಸದ ರೂಪಕ್ಕೆ ತಕ್ಕಂತೆ

ಹಾಸು ಹೊಯ್ಯುತ್ತಾರೆ. ಇದೇ ಹಾಸನ್ನು ಹಣಿಗೆ ಕೆಚ್ಚಿ, ಕಾಂಡಕಿ ಲಾಳಿ ಸುತ್ತಿ ಮಗ್ಗಕ್ಕೆ ಅಣಿಗೊಳಿಸುತ್ತಾರೆ. ಮಗ್ಗದ ತೆಗ್ಗಿನಲ್ಲಿಯೇ ಅರ್ಧ ದೇಹ ಇಳಿಬಿಟ್ಟ ಜಾಡ(ನೇಕಾರ) ಹಾಸಿನ ಅಣಿ ಎತ್ತುವ ಮೂಲಕ, ಚುಂಗಿ ಕಟ್ಟಿದ ಮೇಲೆ ಖಣದ ಹೊಟ್ಟೆಯ ನೂಲಿನ ಮಧ್ಯದಲ್ಲಿ ಲಾಳಿ ಓಡಿಸುತ್ತಾ ನೂಲು ಬಿಟ್ಟು ನೇಯುತ್ತಾನೆ. ಹೀಗೆ ಸಿದ್ಧವಾದ ಖಣವನ್ನು ವ್ಯಾಪಾರಸ್ಥನಿಗೆ ನೀಡಿ ಮಜೂರಿ ಪಡೆಯುತ್ತಾನೆ.

ಖಣದ ನೇಕಾರಿಕೆ ತುಂಬಾ ಸೂಕ್ಷ್ಮವಾದ ಕೆಲಸವಾಗಿದ್ದು, ಒಂದು ಎಳೆ(ಅಣಿ) ಆಚೆ-ಈಚೆಯಾದರೂ ಮುಗೀತು, ಖಣದ ಆಯ ತಪ್ಪಿದಂತೆ! ಅಂತೆಯೇ 'ಒಂದು ಅಣಿ ತಪ್ಪಿದರೆ ಸಾವಿರ ಅಣಿ ತಪ್ಪುತ್ತದೆ' ಎಂಬ ಗಾದೆಯ ಉಗಮಕ್ಕೆ ಕಾರಣವಾಗಿದೆ. "*ಈ ಕಸಬಿನ್ಯಾಗ ಮೈಯೆಲ್ಲಾ ಕಣ್ಣಾಗಿರಬೇಕ್ರಿ. ಇಲ್ಲಿ ಶಕ್ತಿಗಿಂತ ಯುಕ್ತಿನs ಮೇಲು. ನೇಕಾರನ ಜೀವನ (ಮೈ-ಮನಸ್ಸು) ನೂಲಿನ್ಹಾಂಗ ಸಣ್ಣಗಾದಾಗ ಮಾತ್ರ.. ಖಣ ತಯಾರಾಗುತ್ತ*" ಎಂಬುದು ಗುಳೇದಗುಡ್ಡದ ಅನುಭವಿ ನೇಕಾರ ರಾಚಪ್ಪ ರಾಜನಾಳರ ಅನುಭವದ ಅನಿಸಿಕೆ.

**ಗುಳೇದಗುಡ್ಡದ ಖಣ ಉತ್ಪಾದಕರು ಹಾಗೂ ಸಗಟು ಮಾರಾಟಗಾರರು :**

ಗುಳೇದಗುಡ್ಡ ಗ್ರಾಮದಲ್ಲಿ ನಾಲ್ಕಾರು ಮಗ್ಗಗಳಿದ್ದವರಿಂದ ಹಿಡಿದು ನೂರಾರು ಮಗ್ಗಗಳಿದ್ದವರೂ ತಮ್ಮದೇ ಲೇಬಲ್ ಮಾಡಿಕೊಂಡು, ತಾವು ಉತ್ಪಾದಿಸಿದ ಖಣಗಳನ್ನು ಸಗಟಾಗಿ ವ್ಯಾಪಾರ ಮಾಡುವವ ದೊಡ್ಡ ಬಳಗವೇ ಇಲ್ಲಿದೆ. ಎಸ್.ಎಸ್. ರಾಜನಾಳ, ರಾಟಿ & ಕಾವಡೆ, ಡಿ.ಹೆಚ್. ಕಾವಡೆ, ಸಂಪತ್ ರಾಟಿ, ಎಸ್.ಕೆ. ರಾಟಿ, ಸೋನಿ, ಜವಾರ, ಕಾಬ್ರಾ, ಎನ್.ಎಮ್.ಕೊಳ್ಳಿ, ಆರ್.ಎಸ್. ವಾಳದುಂಕಿ, ಬನ್ನಿ, ಎಣ್ಣೆ, ತೊಗರಿ, ಅಂದಾನೆಪ್ಪ ಫಕೀರಪ್ಪ ಕುರಹಟ್ಟಿ, ದಯಾರಾಮ್ ರಾಟಿ, ಮಲ್ಲೇಶಪ್ಪ ಕೆಲೂಡಿ, ಹುಚ್ಚಪ್ಪ ಅಂಕದ, ನೂರೊಂದಪ್ಪ ಮದ್ದಾನಿ, ಮಲ್ಲೇಶಪ್ಪ ಬೆಣ್ಣಿ, ಉದ್ದನೂರ, ಎ.ಎಸ್. ವಾಳದುಂಕಿ ಮುಂತಾದ ಸಗಟು ವ್ಯಾಪಾರಸ್ಥರು ಇಲ್ಲಿದ್ದಾರೆ. ಇವರೆಲ್ಲ ಸಾಮಾನ್ಯವಾಗಿ ಮಹಾರಾಷ್ಟ್ರಕ್ಕೆ ರಫ್ತು ಮಾಡುತ್ತಾರಾದರೂ ಬಾಗಲಕೋಟೆ, ಬಿಜಾಪುರ, ಇಳಕಲ್ಲ, ಕುಷ್ಟಗಿ, ಗಜೇಂದ್ರಗಡ, ಬಾದಾಮಿ, ಹುನಗುಂದ, ಹನಮಸಾಗರ ಮುಂತಾದ ಊರುಗಳ ಜವಳಿ ವ್ಯಾಪಾರಸ್ಥರಿಗೂ ಮಾರಾಟ ಮಾಡುತ್ತಾರೆ.

**ಗುಳೇದಗುಡ್ಡದ ಖಣ ನೇಕಾರಿಕೆಯಿಂದ ಸೃಷ್ಟಿಯಾಗುವ ವಿವಿಧ ಉದ್ಯೋಗಗಳು :**

ಗುಳೇದಗುಡ್ಡದ ಖಣದ ನೇಕಾರ ವೃತ್ತಿಯ ವಿಶೇಷತೆಯೆಂದರೆ ಮನೆಯ ಎಲ್ಲರಿಗೂ, ಎಲ್ಲ ವಯೋಮಾನದವರಿಗೂ ಇದು ಕೆಲಸಕೊಡುತ್ತದೆ! ನೂಲುವುದರಿಂದ ಹಿಡಿದು ಸಿದ್ಧವಾದ ಖಣಗಳನ್ನು ವ್ಯಾಪಾರಸ್ಥರಿಗೆ ತಲುಪಿಸುವತನಕ ಮನೆಮಂದಿಯೆಲ್ಲ ತಮ್ಮನ್ನು ಖಣ ಉದ್ಯಮದಲ್ಲಿ ತೊಡಗಿಸಿಕೊಳ್ಳುತ್ತಾರೆ. ಆದ್ದರಿಂದ ಇದನ್ನು ಕೌಟುಂಬಿಕ ವೃತ್ತಿ ಮತ್ತು ಗೃಹ(ಗುಡಿ) ಕೈಗಾರಿಕೆ ಎಂತಲೂ ಕರೆಯುತ್ತಾರೆ. ಗಾಂಧೀಜಿಯವರು ಪ್ರಚಾರ ಮಾಡಿದ ಸ್ವದೇಶಿ ಉಡುಪಿನ ಚಳುವಳಿಯ ಹಿನ್ನೆಲೆ ಮತ್ತು ಗ್ರಾಮೋದ್ಯೋಗ ಕೇಂದ್ರಗಳ ಪ್ರಭಾವದಿಂದಲೋ ಎಂಬಂತೆ ವಿದ್ಯುತ್ ಮಗ್ಗದಿಂದ ತಯಾರಾದ ಖಣಗಳಿಗಿಂತಲೂ ಕೈಮಗ್ಗದಲ್ಲಿ ನೇಯ್ದ ಖಣಗಳಿಗೆ ತುಂಬಾ ಬೇಡಿಕೆಯಿದೆ. ಇದು ಅನೇಕ ಉದ್ಯೋಗಗಳಿಗೆ ಅವಕಾಶ ಮಾಡಿಕೊಟ್ಟಿದೆ. ಉದ್ಯೋಗಕ್ಕೆ ತಕ್ಕಂತೆ ಮಜೂರಿ(ಪಗಾರ) ಸಿಗುತ್ತದೆ.

**ನೇಕಾರಿಕೆ** (Weaving) :

ಗುಳೇದಗುಡ್ಡದ ಖಣಗಳು ಅನೇಕ ಬಡನೇಕಾರರಿಗೆ ಕೆಲಸ ಕೊಟ್ಟಿವೆ. ಸಾವಿರಾರು ಕುಟುಂಬಗಳಿಗೆ ವರಪ್ರಸಾದವಾಗಿವೆ. ಕೇವಲ ಹತ್ತಿಬಟ್ಟೆಯಿಂದ ಮಾತ್ರವಲ್ಲದೇ ಪಕ್ಕಾ ರೇಷ್ಮೆ ಹಾಗೂ ಹತ್ತಿ-ರೇಷ್ಮೆ ಬೆರೆತ ಚಮಕಾ ದಿಂದಲೂ ಖಣಗಳು ತಯಾರಾಗುತ್ತವೆ. ಇಲ್ಲಿರುವ ಆರ್ಥಿಕ ನೆ(ಸೆ)ಲೆ ಎಂದರೆ ಖಣಕ್ಕೆ ತಕ್ಕ ಮಜೂರಿ! ಕೈಮಗ್ಗದ ಖಣ (Hand Loom), ನೇಕಾರನಿಗೆ ಮತ್ತು ವಿದ್ಯುತ್ ಮಗ್ಗದ ಖಣ (Power Loom) ನೇಕಾರನಿಗೂ ಮಜೂರಿಯಲ್ಲಿ ವ್ಯತ್ಯಾಸವಿದೆ!

- **ವಿದ್ಯುತ್‌ಮಗ್ಗ**ದ ಚಮಕಾ ಖಣ ನೇಕಾರನಿಗೆ ಒಂದು ಖಣಕ್ಕೆ ೫.೫೦ ರೂಪಾಯಿ ಮಜೂರಿ ಸಿಕ್ಕುತ್ತದೆ. ೪೦ ಖಣಕ್ಕೆ ಅಂದರೆ ೨೦ ಮೀಟರಿಗೆ ೨೨೦ ರೂಪಾಯಿ ಕೂಲಿ ಸಿಕ್ಕುತ್ತದೆ. ಈ ಮಗ್ಗದದಲ್ಲಿ ಒಬ್ಬ ನೇಕಾರ ಒಂದು ದಿನಕ್ಕೆ ೧೬ ರಿಂದ ೨೦ ಖಣ ನೇಯುತ್ತಾನೆ.

- **ಕೈಮಗ್ಗ**ದ ಚಮಕಾ ಖಣ ನೇಕಾರನಿಗೆ ಒಂದು ಖಣಕ್ಕೆ ೧೫.೦೦ ರೂಪಾಯಿ ಮಜೂರಿ ಸಿಕ್ಕುತ್ತದೆ. ೪೦ ಖಣಕ್ಕೆ ಅಂದರೆ ೨೦ ಮೀಟರಿಗೆ ೬೦೦ ರೂಪಾಯಿ ಕೂಲಿ ಸಿಕ್ಕುತ್ತದೆ. ಈ ಮಗ್ಗದದಲ್ಲಿ ಒಬ್ಬ ನೇಕಾರ ೩-೪ ದಿನಗಳಿಗೆ ಒಂದು ಹೊರಿ ಅಂದರೆ ೨೦ ಖಣ ನೇಯುತ್ತಾನೆ.

**ಬಣ್ಣಗಾರಿಕೆ** (Dyeing) :

ಜಾನಪದದ 'ತೌರ್ಬಣ್ಣ'ದಲ್ಲಿ ಗುಳೇದಗುಡ್ಡದ ಖಣವೂ ಸೇರಿಕೊಂಡಿದೆ! ಗುಳೇದಗುಡ್ಡದ ಖಣಗಳ ವಿಶೇಷವೆಂದರೆ ಅದರ ಬಣ್ಣದ ಗುಣ. ಗುಳೇದಗುಡ್ಡದ ಖಣದ ಕುಪ್ಪಸ ಹರಿದ್ರೂ, ಸವೆದ್ರೂ ಬಣ್ಣ ಮಾಸುವುದಿಲ್ಲ. ನೂಲಿಗೆ ಬಣ್ಣ ಹಾಕುವ ವೃತ್ತಿಯಲ್ಲಿ ಕೇವಲ ನೀಲಿ ಅಥವಾ ಕಪ್ಪು ಬಣ್ಣ ಹಾಕುವವರನ್ನು ನೀಲಗಾರರೆಂದೂ, ನೀಲಿ ಅಥವಾ ಕಪ್ಪನ್ನು ಹೊರತುಪಡಿಸಿ ಉಳಿದೆಲ್ಲಾ ಬಣ್ಣಗಳನ್ನು ಹಾಕುವವರನ್ನು ಬಣಗಾರರು ಎನ್ನುತ್ತಾರೆ. ನೂಲಿಗೆ ಬಣ್ಣ ಹಾಕುವ ಮನೆಗೆ 'ಕೇಲ'ಮನೆ ಎನ್ನುತ್ತಾರೆ.

**ನೈಸರ್ಗಿಕ ಬಣ್ಣ** : ಸಿದ್ಧಗೊಳಿಸಿದ ಬಿಳಿ ಹಾಸುಗಳನ್ನು ನೈಸರ್ಗಿಕ ಬಣ್ಣ ಅದ್ದುವ ಸಲುವಾಗಿ ಈ ಕೇಲಿನ ಮನೆಗಳಿಗೆ ಕಳಿಸುತ್ತಾರೆ. ಇಲ್ಲಿನ ಮಣ್ಣಿನ ಹರವಿ ಅಥವಾ ಮಂದಾಣಿಗಳಲ್ಲಿ ಸದಾ ಬೆಚ್ಚನೆಯ ನೀಲಿ ಗಟ್ಟಿ ರಸವಿರುತ್ತದೆ! ಇದನ್ನು ನೆನೆದ ನೀಲಿ ಬೀಜಗಳನ್ನು ರುಬ್ಬುವ ಮೂಲಕ ತಯಾರಿಸಿರುತ್ತಾರೆ. ನೆಲದಲ್ಲಿ ಹುಗಿದ ಪ್ರತಿ ಹರವಿಯ ಕೆಳಗೆ ಹಾಕಿದ ಕುರಿಗಳ ಗೊಬ್ಬರವು ಶಾಖವನ್ನು ಹುಟ್ಟಿಸುವುದರಿಂದ ಸದಾ ಬೆಚ್ಚಗಿರಲು ಸಹಾಯಕವಾಗುತ್ತದೆ. ಸಾಮಾನ್ಯವಾಗಿ ನೀಲಿ ಬೀಜ ಹಾಗೂ ನೀಲಿ ಗಟ್ಟಿ ವಡೆಗಳನ್ನು ಕೇರಳ ಹಾಗೂ ಆಂಧ್ರಪ್ರದೇಶದಿಂದ ತರಿಸಿರುತ್ತಾರೆ. ಈ ನೀಲಿ ನೂಲು ಕಪ್ಪಾಗಲು ಗಂಜಿಯಲ್ಲಿ ಉಂಕಿ ಕಾಚನ್ನೂ ಕೂಡಿಸಿದರೆ ಉಂಕಿ ಕಪ್ಪಾಗಿ ಮಿಂಚು ಹೆಚ್ಚುತ್ತದೆ.

ಹೀಗೆ ಗುಳೇದಗುಡ್ಡದ ಖಣಗಳಿಗೆ ಮೊದ ಮೊದಲು ನೈಸರ್ಗಿಕ ಬಣ್ಣ ಹಾಕಲಾಗುತ್ತಿತ್ತು! ಆದರೆ... ಯಾಂತ್ರೀಕರಣದಿಂದಾಗಿ ಗುಳೇದಗುಡ್ಡದ ಖಣ ಉದ್ಯಮವು ಈಗ ಸಂಪೂರ್ಣವಾಗಿ ರಾಸಾಯನಿಕ ಬಣ್ಣಗಳಿಗೆ ಮರುಳಾಗಿದೆ! ಏಕೆಂದರೆ.. ಕಾಂಕ್ರೀಟ್ ಕಾಡಿನ ನಾಡಿನಲ್ಲಿ ಪ್ರಾಕೃತಿಕ ಬಣ್ಣಗಳ ತಯಾರಿಕೆ ಅಷ್ಟೊಂದು ಸುಲಭದ ಮಾತಲ್ಲ. ರಾಸಾಯನಿಕ ಬಣ್ಣಗಳು ಸುಲಭವಾಗಿ ಸಿ(ದ)ಕ್ಕುತ್ತವೆ ಮತ್ತು ತುಂಬಾ ಆಕರ್ಷಕವಾಗಿರುವ ಜೊತೆಗೆ ಬಣ್ಣಗಳ ಮಿಶ್ರಣಕ್ಕೂ ತುಂಬಾ ಅನುಕೂಲವಂತೆ!

ರಾಸಾಯನಿಕ ಬಣ್ಣ : ನೀಲಿ ಬೀಜ ಹಾಗೂ ನೀಲಿ ಗಟ್ಟಿ ವಡೆಗಳಿಂದ ತಯಾರಾದ 'ಇಂಡಿಗೋ' ಎಂಬ ಸಿ(ಶು)ದ್ಧ ನೀಲಿ ಮಾರುಕಟ್ಟೆಯಲ್ಲಿ ಸಿಕ್ಕುತ್ತದೆ. ರಾಸಾಯನಿಕ ಕಪ್ಪು ಬಣ್ಣವು ತಯಾರಾಗಲು ಸೋಡಿಯಂ ಫ್ಲೆಕ್ಸ್ + ಸೋಡಿಯಂ ಪುಡಿಯನ್ನು ನೀರಿನಲ್ಲಿ ಕುದಿಸಬೇಕು. ಕೆಂಪು(ಲಾಲ್)ಬಣ್ಣ ತಯಾರಿಸಲು ಕಾಸ್ಟಿಕ್ ಸೋಡಾ+AS+BS(ಖಾರ)ವನ್ನು ತಣ್ಣೀರಿನಲ್ಲಿ ಕಲಸಬೇಕು. ಹಾಗೆಯೇ ರೆಡ್-ಬಿ ಬಣ್ಣ

ತಯಾರಿಸಲು ಸೋಡಿಯಮ್ ನೈಟ್ರೇಟ್+ಹೈಡ್ರೋಕ್ಲೋರಿಕ್ ಆಸಿಡ್+ಅಲ್ಯುಮಿನಿಯಮ್ ಅನ್ನು ತಣ್ಣೀರಿನಲ್ಲಿ ಕಲಸಬೇಕು. ಟಬ್ಬು ಅಥವಾ ಗ್ವಾಲ್ಮಿಯಲ್ಲಿರುವ ಬಣ್ಣದಲ್ಲಿ ಲಡಿ(ನೂಲು) ಅದ್ದಿ, ದ್ರವ ಬಣ್ಣವನ್ನು ಹಿಂಡಿ, ಒಣಗಿಸುತ್ತಾರೆ. ಇಲ್ಲಿನ ಬಣ್ಣಗಾರರಿಗೆ ಕಾಂಟ್ರ್ಯಾಕ್ಟ್ ಬೇಸಿಸ್ ಪಗಾರ ಇರುತ್ತದೆ. ಇತ್ತೀಚಿಗೆ ಸನ್ನದ್ಧವಾದ ಬಣ್ಣದ ನೂಲನ್ನೇ ಬೆಂಗಳೂರು, ಸೊಲ್ಲಾಪೂರಗಳಂತಹ ನಗರಗಳಿಂದ ತರಲಾಗುತ್ತಿದೆ.

**ಉಂಕಿ ಹೂಡುವುದು :**

ಕೇಲ ಮನೆಗಳಿಂದ ತಂದ ಬಣ್ಣದ ಹಾಸ(ನೂಲ)ನ್ನು ರಾಗಿ ಗಂಜಿ ಅಥವಾ ಜೋಳದ ಗಂಜಿ ಇಲ್ಲವೇ ಅಕ್ಕಿ ಗಂಜಿಯಲ್ಲಿ ಅದ್ದಿ ನೆರಳಿನಲ್ಲಿ ಒಣಗಿಸಿದ ನಂತರ ಈ ಉಂಕಿ ಕೋಲುಗಳಿಗೆ ಒಂದೊಂದೇ ಎಳೆಯನ್ನು ಸುತ್ತುವರು. ಇದರಿಂದ ಒಂದು ಎಳೆ ಇನ್ನೊಂದು ಎಳೆಗೆ ಅಂಟಿಕೊಳ್ಳುವುದಿಲ್ಲ. ಹೀಗೆ ಉಂಕಿ ಹುರಿಯಲ್ಲಿ ಹಾಕಿ ಒಣಗಿಸಿದ ಹಾಸ(ನೂಲು)ನ್ನು ಲಡಿಗಳನ್ನಾಗಿ ವಿಂಗಡಿಸಿ ಸುತ್ತುತ್ತಾರೆ.

**ನೂಲು ತೋಡುವುದು** (Yarn Winding) :

ಮುದ್ದಿಗುಣಿ(ರಾಟ್ಯಾಳ)ಗಳಿಗೆ ತೊಡೆಯ ಮೇಲಿಟ್ಟು ನೂಲು ತೋಡುವ ಕೆಲಸ ಈಗೀಗ ಕಡಿಮೆಯಾಗುತ್ತಿದೆ. ರಾಟ್ಯಾಳಕ್ಕೆ ತೊಡೆಯ ಮೇಲಿಟ್ಟು ನೂಲು ತೋಡುವಾಗ ತೊಡೆಯ ಚರ್ಮ ಸುಕ್ಕುಗಟ್ಟಿ ಕಲೆ ಬೀಳುತ್ತಿತ್ತು. ಅದಕ್ಕೂ ಈಗ ವೈಂಡರ್ ಎಂಬ ಯಂತ್ರ ಬಂದಿದೆ. ಡಬ್ಬಿ ವೈಂಡಿಂಗ್ ಮತ್ತು ರೀಲ್ ವೈಂಡಿಂಗ್ ಎಂಬ ಎರಡು ರೀತಿಯಲ್ಲಿ ನೂಲನ್ನು ವಿದ್ಯುತ್ ಮಗ್ಗಕ್ಕೆ ನೂಲು ತೋಡಬೇಕಾಗುತ್ತದೆ. ಹೆಚ್ಚು ಶ್ರಮವಹಿಸದ ವಯೋವೃದ್ಧರು ಹಾಗೂ ಮಕ್ಕಳು ಈ ಕೆಲಸವನ್ನು ನಿರ್ವಹಿಸುತ್ತಾರೆ.

**ಹಣಗಿ ಕೆಚ್ಚುವುದು :**

ಕೊಯ್ದ ಖಣದ ನೂಲುಗಳಿಗೆ ಹೊಸದಾಗಿ ಎಳೆಗಳನ್ನು ಜೋಡಿಸುವ ಬಹು ಜಾಣ್ಮೆಯ ಕ್ರಿಯೆಯೇ ಹಣಗಿ ಕೆಚ್ಚುವುದು. ಇದೂ ಕೂಡಾ ಅತ್ಯಂತ ಸೂಕ್ಷ್ಮವಾದ ಕೈಚಳಕದ ಕೆಲಸವಾಗಿದ್ದು ತುಂಬಾ ತಾಳ್ಮೆ ಬೇಕಾಗುತ್ತದೆ. ೨೦೦ ರಿಂದ ೨೪೦ಮೀಟರ್ ಉದ್ದವಿರುವ ೧೨೦ ನಂಬರಿನ ಗಟ್ಟಿ ದಾರವನ್ನು ದಡಿಗೆ ಕಾಫಿ ಬಣ್ಣ, ದಡಿಪೆಟ್ಟಿಗೆ ಬೆಳ್ಳಿ

ಬಣ್ಣ, ಗೀರಿಗೆ ಹಳದಿ ಬಣ್ಣ, ಎಂಟೆಳಿ ಗೀರಿಗೆ ಬಿಳಿ ಬಣ್ಣ, ಅರುವಿಗೆ ಕೇಸರಿ ಬಣ್ಣ, ಹಸಿರುನಾಮಕ್ಕೆ ಹಸಿರು ಬಣ್ಣ ಹೀಗೆ ಬೇರೆ ಬೇರೆ ಬಣ್ಣಗಳ ಎಳೆಗಳಿಂದ ತಟ್ಟಿನ ಒಂದೊಂದೇ ಮಣಿಯಲ್ಲಿ ತುಂಬುತ್ತಾರೆ.

**ಕಂಡಕಿ ಸುತ್ತೋದು :**

ಉಂಕಿಯ ತಲೆ ಅಣಿಯನ್ನು ರಾಟಿಯ ಗಣಿಗಳಿಗೆ ಸಿಕ್ಕಿಸುವ ಪ್ರಕ್ರಿಯೆಯೇ ಕಂಡಿಕಿ ಸುತ್ತುವುದು. ಲಾಳಿಯ ಒಳಗೆ ದಾರ ಇರುವುದಕ್ಕೆ ಈ ಕಂಡಿಕೆಗಳೇ ಕಾರಣ. ಮೊದಲು ಕಟ್ಟಿಗೆಯ ಗಣಿ ಇದ್ದವು ಈಗೀಗ ಅವುಗಳ ಬದಲಾಗಿ ಪ್ಲಾಸ್ಟಿಕ್ ಹಾಗೂ ನೈಲಾನ್ ಗಣಿಗಳು ಬಂದಿವೆ. ಇವುಳನ್ನು ಚರಕಕ್ಕೆ ಜೋಡಿಸಿ ಡಬ್ಬಿಯಿಂದ ನೂಲನ್ನು ಸುತ್ತಿದಾಗ ಕಂಡಿಕೆಯಾಗುತ್ತದೆ. ರೀಲ್ ವೈಂಡಿಂಗ್ ಎಂಬ ಯಂತ್ರ ಬಂದಿದ್ದು ತಿರುವುವ ಕೆಲಸ ಹಗುರಾಗಿದೆ. ಹಳ್ಳಿಗಳಲ್ಲಿ ಬಹುಕಾಲ ವಿದ್ಯುತ್ ಇಲ್ಲದಿರುವ ಪ್ರಯುಕ್ತ ರಾಟೆ ಅಥವಾ ಚಕ್ರವೇ ಗತಿ.

**ಭೀಮ್ ಸುತ್ತೋದು :**

ಪವರ್ ಲೂಮ್‌ಗೆ ನೂಲು ಹಾಸನ್ನು ಭೀಮ್ ಒದಗಿಸುತ್ತದೆ. ಈ ಭೀಮ್‌ಗೆ ೨೦ ಮೀಟರ್ ಅಂದರೆ ಸುಮಾರು ೪೦-೪೧ ಖಣಗಳಿಗಾಗುವಷ್ಟು ನೂಲನ್ನು ಸುತ್ತಲಾಗುತ್ತದೆ. ಇದನ್ನೇ ಭೀಮ್ ಕೆಚ್ಚೋದು ಎಂತಲೂ ಕರೆಯುತ್ತಾರೆ.

**ಗುಳೇದಗುಡ್ಡದ ಖಣಗಳ ವೈಶಿಷ್ಟ್ಯ ಹಾಗೂ ವಿಧಗಳು :**

ಗುಳೇದಗುಡ್ಡದ ಖಣದ ವೈಶಿಷ್ಟ್ಯವೆಂದರೆ ಅದರ ವಿವಿಧ ಶೈಲಿಯ ಆಕರ್ಷಕ ಚಿತ್ತ ಚಿತ್ತಾರಗಳು ಮತ್ತು ಮಾಸದಬಣ್ಣ. ಸಾಂಪ್ರದಾಯಿಕ ಖಣಗಳ ಬಣ್ಣ ಸಾಮಾನ್ಯವಾಗಿ ನೀಲಿ, ಕೆಂಪು, ಕೇಸರಿ, ಹಸಿರು, ಉಜ್ವಲ ನವಿಲು ಹಸಿರು, ಗಿಳಿ ಹಸಿರು ಬಣ್ಣಗಳಲ್ಲಿ ತಯಾರಾಗುತ್ತವೆ.

ಗುಳೇದಗುಡ್ಡದ ಖಣದ ಇನ್ನೊಂದು ವೈಶಿಷ್ಟ್ಯವೆಂದರೆ ಕಚ್ಚಾ ರೇಷ್ಮೆ(ಚಮಕಾ) ಅಥವಾ ಪಕ್ಕಾ ರೇಷ್ಮೆಯನ್ನು ಬಳಸುವುದು. ಕಾಲಕ್ಕೆ ತಕ್ಕಂತೆ ಇವುಗಳ ವಿನ್ಯಾಸವೂ ಬದಲಾಗಿದೆ. ಪ್ರಯೋಗಶೀಲ ಮನಸ್ಸಿನ ನೇಕಾರರೇ ಹೊಸ ವಿನ್ಯಾಸದ ಆವಿಷ್ಕಾರಕ್ಕೆ ದಿಟ್ಟಹೆಜ್ಜೆ ಇಡುತ್ತಾರೆ. ಅವಶ್ಯಕತೆಯೇ ಸಂಶೋಧನೆಗೆ ದಾರಿ ಮಾಡಿಕೊಟ್ಟರೆ

ಮಹತ್ವಾಕಾಂಕ್ಷೆಯು ಹೊಸತನದ ಸೃಷ್ಟಿಗೆ ಕಾರಣವಾಗುತ್ತದೆ.ಚಿತ್ರಮಾಲಾ, ಕಳಾವಾರ, ಕರಮಂಟಿಕ್ಕಿ, ಸೂಜಿಮಲ್ಲಿಗೆ, ಸಿದ್ದೇಶ್ವರ ಮುಕುಟ, ನವಲಪರಿ, ತಿರುಕಿ ಕವಳಿ ಹೂವು, ಗುಂಡಘೂಲ್, ಹೊನ್ನ ಹೂವ್ವ, ಚೌಕಡಾ, ಐದಮನಿ ವಾರಸಾಲು, ಏಳಮನಿ ವಾರಸಾಲು, ಮೂರಮನಿ ವಾರಸಾಲು, ಅಡ್ಡವಾರ ಸಾಲು, ಸೂರ್ಯ ನಾರಾಯಣ, ತೇರು, ಕ್ಯಾದಗಿ ಬಳ್ಳಿ, ರುಂಡಮಾಲಿ, ಪಿಟ್ಟ–ತೇರು ಬಳ್ಳಿ ಮುಂತಾದ ವಿನ್ಯಾಸಗಳಲ್ಲದೇ ಪ್ರಾಣಿ–ಪಕ್ಷಿಗಳು, ಈಶ್ವರ–ಬಸವಣ್ಣ, ಜೈ ಹಿಂದ್‌ಗಳಂತಹ ವಿನ್ಯಾಸಗಳಲ್ಲಿ ಖಣಗಳು ತಯಾರಾಗುತ್ತವೆ.

➢ **ದಡಿ(Border) ಆಧಾರಿತ ಖಣಗಳು :**

ಗುಳೇದಗುಡ್ಡದ ಖಣದ ದಡಿ ಗಟ್ಟಿ ಹಾಗೂ ವಿಶೇಷವಾಗಿ ಇರೋದ್ರಿಂದಲೇ ಇದಕ್ಕೊಂದು ನೆ(ಬೆ)ಲೆ ಸಿ(ದ)ಕ್ಕಿದೆ. ಸಣ್ಣ ದಡಿ, ದೊಡ್ಡದಡಿ, ಮದ್ರಾಸ ಚಿತ್ರಮಾಲಾ ಎಂಬ ಮೂರು ವಿಧಗಳಿವೆ. ಈಗೀಗ ಸಣ್ಣ ದಡಿಯ ಖಣಗಳಿಗೆ ಬಹು ಬೇಡಿಕೆಯಿದೆ. ಮಹಾರಾಷ್ಟ್ರದಲ್ಲಿ ದೊಡ್ಡದಡಿ, ಮದ್ರಾಸ ಚಿತ್ರಮಾಲಾ ದಡಿ ಖಣಗಳಿಗೆ ಬೇಡಿಕೆ ಈಗಲೂ ಇದೆ.

**ಬಟ್ಟೆ ಆಧಾರಿತ ಖಣಗಳು :**

ಖಣದ ಒಡಲು, ಅಂಚುಗಳನ್ನು ಯಾವ ಯಾವ ನೂಲಿನಿಂದ ತಯಾರಿಸಲಾಗುತ್ತದೆ ಎಂಬುದನ್ನು ಆಧರಿಸಿ ೨ ನಮೂನೆಯ ಖಣಗಳನ್ನಾಗಿ ವಿಭಜಿಸಲಾಗಿದೆ.

- **ಪಕ್ಕಾ ರೇಷ್ಮೆ ಖಣ – ರೇಷ್ಮೆ + ರೇಷ್ಮೆ**
- **ಚಮಕಾ ಖಣ – ಹತ್ತಿ + ಕಚ್ಚಾರೇಷ್ಮೆ(ಚಮಕಾ)**

➢ **ನೂಲಿನ ದಪ್ಪದ ಆಧಾರಿತ ಖಣಗಳು :**

ಖಣದ ಒಡಲು, ಅಂಚುಗಳನ್ನು ಎಷ್ಟೆಷ್ಟು ದಪ್ಪದ ನೂಲಿನಿಂದ ತಯಾರಿಸಲಾಗುತ್ತದೆ ಎಂಬುದನ್ನು ಆಧರಿಸಿ ೨ ನಮೂನೆಯ ಖಣಗಳನ್ನಾಗಿ ವಿಭಜಿಸಲಾಗಿದೆ.

- ೪೦ ನಂಬರಿನ ದಪ್ಪದ ದಾರದ ಖಣ
- ೬೦ ನಂಬರಿನ ಜಿನುಗು ದಾರದ ಖಣ

**ಗುಳೇದಗುಡ್ಡದ ಖಣದ ಬಳಕೆಯ ಸಂದರ್ಭಗಳು :**

ಇಳಕಲ್ಲ ಸೀರೆಗೆ ತಕ್ಕ ಮ್ಯಾಚಿಂಗ್ ಗುಳೇದಗುಡ್ಡದ ಖಣವಾಗಿದ್ದು ಉತ್ತರ ಕರ್ನಾಟಕ ಹಾಗೂ ಮಹಾರಾಷ್ಟ್ರದ ಮಹಿಳೆಯರಿಗೆ ನಿತ್ಯ ಪೋಷಾಕಾಗಿದೆ. ಅಲ್ಲದೇ ವಿಶೇಷ ಸಂದರ್ಭಗಳಲ್ಲಿ ಉತ್ತರ ಕರ್ನಾಟಕ ಹಾಗೂ ಮಹಾರಾಷ್ಟ್ರದ ಮಹಿಳೆಯರಲ್ಲದೇ ಬೇರೆ ಬೇರೆ ರಾಜ್ಯಗಳಲ್ಲೂ ಖುಷಿಗಾಗಿ ವಿಶೇಷವಾಗಿ ಬಳಕೆ ಮಾಡಲಾಗುತ್ತಿದೆ. ಇತ್ತೀಚಿಗೆ ಟಿ.ವಿ. ಧಾರಾವಾಹಿಗಳಲ್ಲಿ, ಸಿನೆಮಾಗಳಲ್ಲಿ, ಫ್ಯಾಶನ್ ಷೋ ಹಾಗೂ ಲೈವ್ ಷೋಗಳಲ್ಲಿಯೂ ಯಥೇಚ್ಛ ಬಳಕೆಯಾಗುತ್ತಿರುವುದು ಗುಳೇದಗುಡ್ಡದ ಖಣಕ್ಕೆ ಶುಕ್ರದೆಸೆ ತಿರುಗಿದಂತಿದೆ!

**ಗುಳೇದಗುಡ್ಡದ ಖಣ ಉತ್ಪಾದಿಸುವ ಆರ್ಥಿಕ ವಿಧಾನ :**

ಖಣ ಉತ್ಪಾದಿಸುವ ವಿಧಾನ ಅಥವಾ ಕ್ರಮದಲ್ಲಿ ಕೂಲಿ ನೇಕಾರ, ಸ್ವಂತ ನೇಕಾರ ಹಾಗೂ ವರ್ತಕ(ಸಾಹುಕಾರ ಅಥವಾ ಧಣಿ)ರ ನಡುವಿನ ಕೊಡುಕೊಳ್ಳುವಲ್ಲಿ ಮುಂಗಡ, ಸಟ್ಟಾ, ರೋಖಡಾ ಹಾಗೂ ಕೂಲಿ ಎಂಬ ನಾಲ್ಕು ಪದ್ಧತಿಗಳಿವೆ.

➢ **ಮುಂಗಡ** :- ಸುಮಾರು ೪೦ ಖಣಗಳಿಗಾಗುವಷ್ಟು (ಹೊರಿ) ಬಣ್ಣ ಹಾಕಿದ ನೂಲು, ರೇಷ್ಮೆ, ಚಮಕಾ ಇತ್ಯಾದಿ ಕಚ್ಚಾ ಮಾಲನ್ನು ಹಾಗೂ ಸ್ವಲ್ಪ ಖರ್ಚಿಗೆ ಹಣವನ್ನು ಪಡೆದುಕೊಂಡು ಹೋಗುತ್ತಾನೆ. ನಂತರ ೪೦ ಖಣಗಳನ್ನು ಸಿದ್ಧಪಡಿಸಿಕೊಂಡು ಮುಂಗಡ ನೀಡಿದ ಉದ್ದಿಮೆದಾರನಿಗೆ ಕೊಟ್ಟು ೪೦ ಖಣಗಳ ಮಜೂರಿ(ಕೂಲಿ) ಪಡೆಯುತ್ತಾನೆ. ಇನ್ನೂ ಉಳಿದ ಕಚ್ಚಾಮಾಲಿನಲ್ಲಿ ೪೧ನೆಯ ಖಣ ನೆಯ್ದುಕೊಳ್ಳುತ್ತಾನೆ. ಇದು ನೇಕಾರನಿಗೆ ಸಿಕ್ಕುವ ಬೋನಸ್ ಆಗಿರುತ್ತದೆ! ಕೆಲವೊಮ್ಮೆ ಧಣಿಯಿಂದ ತನಗೆ ಅವಶ್ಯವಿದ್ದಾಗಲೆಲ್ಲ ಮುಂಗಡ ಹಣವನ್ನೂ ಪಡೆದಿರುತ್ತಾನೆ. ವರ್ಷಕ್ಕೊಮ್ಮೆ ಇವರ ಲೆಕ್ಕ-ಪತ್ರವನ್ನು ಮಾಡಲಾಗುತ್ತದೆ.

➢ **ಸಟ್ಟಾ** :- ಉದ್ದಿಮೆದಾರನಿಂದ ಪ್ರಚಲಿತ ದರದಲ್ಲಿ ಕಚ್ಚಾ ಮಾಲು ಪಡೆದು, ಖಣವನ್ನು ಸಿದ್ಧಪಡಿಸಿ, ಪ್ರಚಲಿತ ದರಕ್ಕೇ ಆ ಖಣವನ್ನು ಅದೇ ಉದ್ದಮೆದಾರನಿಗೆ ಮಾರುತ್ತಾನೆ. ಈ ವಿಧದಲ್ಲಿ ಮಾರುಕಟ್ಟೆಯ ಏರಿಳಿತದಿಂದಾಗಿ ಒಮ್ಮೊಮ್ಮೆ 'ಜಾಡನ ಹೆಂಡತಿ ಬೆತ್ತಲೆ', 'ಮಗ್ಗವಲ್ಲ ಕೊರಳಿಗೆ ಹಗ್ಗ' ಎಂಬುದನ್ನು ದೃಢಪಡಿಸುವುದುಂಟು!

➤ **ರೋಖಡಾ** :- ಸ್ವಂತ ಮಗ್ಗವುಳ್ಳ ನೇಕಾರ ತನಗೆ ಬೇಕಾದ ಕಚ್ಚಾ ಮಾಲನ್ನು ಯಾವುದೇ ಅಂಗಡಿ ಅಥವಾ ನೇಕಾರರ ಸಂಘ ಅಥವಾ ಸಂಸ್ಥೆಗಳಲ್ಲಿ ಕೊಂಡುಕೊಳ್ಳಬಹುದು. ನೆಯ್ದ ಖಣವನ್ನು ಯಾರಿಗಾದರೂ ಮಾರಾಟ ಮಾಡಬಹುದು.

➤ **ಕೂಲಿ** :- ಇಲ್ಲಿ ನೇಕಾರ ಸಾಹುಕಾರ ಉದ್ದಿಮೆದಾರನ ಕೈಮಗ್ಗ ಅಥವಾ ವಿದ್ಯುತ್ ಮಗ್ಗಗಳಿರುವಲ್ಲಿಗೇ ಹೋಗಿ ಅವರದೇ ಕಚ್ಚಾಮಾಲು, ಅವರದೇ ಮಗ್ಗಗಳಲ್ಲಿ ತನಗೆ ಸಾಧ್ಯವಾದಷ್ಟು ಸಮಯ ನೇಯ್ದು ಒಂದು ಖಣಕ್ಕೆ ಇಂತಿಷ್ಟೆಂದು ಕೂಲಿ ಪಡೆಯುತ್ತಾನೆ. ಇಲ್ಲಿ ವ್ಯಕ್ತಿ ಸ್ವಾತಂತ್ರ್ಯವಿದ್ದರೂ ಮುಂಗಡ ಅಥವಾ ಸಾಲ ಮಾಡಿದ ನೇಕಾರ *'ಧಣಿ ಸಂಸ್ಕೃತಿಗೆ ಮಣಿಯಲೇಬೇಕಾಗುತ್ತದೆ'.* ಒಟ್ಟಿನಲ್ಲಿ The master weavers are exploiting the ignorance of the poor weavers ಎಂಬಂತಾಗಿದೆ.

"ಮಹಾರಾಷ್ಟ್ರದಾಗ ಒಂದ್ ಮುದುಕಿ ಸತ್ತರ, ಗುಳೇದಗುಡ್ಡ ಒಂದು ಮಗ್ಗ ಬಂದ್ ಆಗತೈತ್ರಿ! ನಮ್ಮೂರ ಖಣ ಉಡೋವ್ರು ಮುದುಕಿಯರs, ಮುಂದೊಂದು ಕಾಲಕ್ಕ ಹೇಳಾಕ ಹೆಸರಿಲ್ಲದಂಗ ಆಗ್ತೈತಿ." ಎಂದು ಆತಂಕಕ್ಕೊಳಗಾದವರು ಕೂಲಿ ನೇಕಾರತಿ ನೀಲಮ್ಮ ತಾಂಡೂರ.

**ಖಣ ನೇಕಾರಿಕೆಯಿಂದ ಆರೋಗ್ಯದ ಮೇಲಾಗುವ ದುಷ್ಪರಿಣಾಮಗಳು :**

ಯಾವುದೇ ಕೆಲಸದಲ್ಲಿಯೂ ಧನಾತ್ಮಕ ಹಾಗೂ ಋಣಾತ್ಮಕ ಅಂಶಗಳಿರುವಂತೆ ಗುಳೇದಗುಡ್ಡದ ಖಣ ನೇಕಾರಿಕೆ ಉದ್ಯಮದಲ್ಲಿ ವಿವಿಧ ಉದ್ಯೋಗ ಮಾಡುವವರಿಗೆ ವಿವಿಧ ರೋಗ-ರುಜಿನಗಳು ಬರುವುದುಂಟು. ನೂಲಿಗೆ ರಾಸಾಯನಿಕ ಬಣ್ಣ ಹಾಕುವ ಬಣ್ಣದ ಬದುಕು ಕೂಡಾ ತುಂಬಾ ಅಪಾಯದಲ್ಲಿದೆ! ಕೈಗೆ ಗ್ಲೋವ್ಸ್ ಹಾಕಿಕೊಳ್ಳುತ್ತಾರಾದರೂ ಕಣ್ಣು ಮತ್ತು ಮೂಗಿಗೆ ಯಾವುದೇ ರಕ್ಷಾಕವಚ ಧರಿಸದಿರುವವರೇ ಹೆಚ್ಚು. ಈ ಬಣ್ಣದ ವಾಸನೆ, ಘಾಟು ಹಾಗೂ ವಿಷಯುಕ್ತ ರಸಾಯನಿಕ ಪದಾರ್ಥಗಳು ಡೈಯಿಂಗ್(Dyeing) ಕಾರ್ಮಿಕರ (ಬಣಗಾರ ಹಾಗೂ ನೀಲಗಾರರ) ಆರೋಗ್ಯದ ಮೇಲೆ ತುಂಬಾ ದುಷ್ಪರಿಣಾಮ ಬೀರುತ್ತದೆ. ಚರ್ಮರೋಗ(ಅಲರ್ಜಿ), ಕ್ಷಯರೋಗ, ಕೆಮ್ಮು, ಶ್ವಾಸಕೋಶದ ಅಲರ್ಜಿಯಂತಹ ಅನಾರೋಗ್ಯಕ್ಕೆ ತುತ್ತಾಗಬಹುದು. ಈ ಅಪಾಯದಿಂದ ಇವರನ್ನ ರಕ್ಷಣೆ ಮಾಡೋರ್‍ಯಾರು?

ನೇಕಾರರಿಗೆ, ಹೆಣಗಿ ಕೆಚ್ಚುವವರಿಗೆ, ಟಾಣ ಹಾಕುವವರಿಗೆ, ಕಂಡಿಕಿ ಸುತ್ತುವವರಿಗೆ ಸಾಮಾನ್ಯವಾಗಿ ಬೆನ್ನು ಹಾಗೂ ಸೊಂಟ ನೋವು, ಕೈ ಕಾಲು ನೋವು, ಕಾವು, ಕಣ್ಣಿನ ದೃಷ್ಟಿ ಕ್ರಮೇಣ ಕಡಿಮೆಯಾಗುವುದು. ಅಲ್ಲದೇ ನೇಯುವಾಗ ನೂಲನಿಂದ ಹೊರ ಬರುವ ಗುಂಜು(ನೂಲಿನ ಧೂಳು) ಶ್ವಾಸಕೋಶಕ್ಕೆ ಧಕ್ಕೆ ನೀಡುತ್ತದೆ. ಆದರೆ.. ಬಹಳಷ್ಟು ಜನ ದುಷ್ಪರಿಣಾಮಗಳೇನೂ ಇಲ್ಲ ಬದಲಾಗಿ ವ್ಯಾಯಾಮ ಆಗುವುದಾಗಿ ಅಭಿಪ್ರಾಯ ವ್ಯಕ್ತಪಡಿಸಿದರು!

### ೩.೫.೩ ಕಮತಗಿ ಪಟಗ ಮತ್ತು ರುಮಾಲು ನೇಕಾರಿಕೆ

ಪ್ರಪಂಚದೆಲ್ಲಡೆಯೂ, ಎಲ್ಲಾ ಕಾಲಘಟ್ಟದಲ್ಲಿಯೂ ಬಹುಬೇಡಿಕೆಯ ಕೈಗಾರಿಕೆಯೆಂದರೆ ವಸನಗಾರಿಕೆ ಅಥವಾ ನೇಕಾರಿಕೆ! ಭಾರತದ ಪ್ರಾಚೀನ ಕುಶಲತೆಗಳಲ್ಲಿ ಒಂದಾಗಿರುವ ವಸನಗಾರಿಕೆ, ನೇಕಾರಿಕೆ, ಅಥವಾ ವಸ್ತ್ರ ತಯಾರಿಕೆಯನ್ನು ವಸ್ತ್ರಶಿಲ್ಪ ಎಂದೂ ಕರೆಯುವುದುಂಟು. "ನಮ್ಮ ದೇಶದ ನೇಕಾರಿಕೆಯ, ವಸ್ತ್ರೋದ್ಯಮದ ಮೂಲದ ಜಾಡನ್ನು ಹಿಡಿದಾಗ ಪಂಜು ಹಿಡಿದು ದಾರಿತೋರುವ... ಗ್ರೀಕ್-ರೋಮನ್ ಮೂಲಗಳು, ಭಾರತದ ಇತಿಹಾಸ, ಮಹಾಕಾವ್ಯ, ವೇದ ಮಂತ್ರಗಳಿಂದ, ಪುರಾಣಗಳಿಂದ, ತಮಿಳಿನ ಸಂಗಂ ಸಾಹಿತ್ಯದಿಂದ, ಭಾರತದ ಕುರಿತ ಮುಸ್ಲಿಂ ಮತ್ತು ಯೂರೋಪಿನ ಶಾಸನಗಳು, ಕೆತ್ತನೆಗಳು, ಚಿತ್ರಕಲೆಗಳು ಹಾಗೂ ಮೌಖಿಕ ಪರಂಪರೆಯಿಂದ ವಸ್ತ್ರೋದ್ಯಮದ ನೇಯ್ಗೆ, ಹೆಣಿಕೆಗಳ ಬಗ್ಗೆ ತಿಳಿಯುತ್ತದೆ." [೨೮]

ಬಹು ಸಂಸ್ಕೃತಿಯ ನಾಡಿನಲ್ಲಿ ಸ್ತ್ರೀಯರಿಗೆ ಇಳಕಲ್ಲ ಸೀರೆ – ಗುಳೇದಗುಡ್ಡದ ಖಣದ ಕುಪ್ಪಸವನ್ನೂ, ಪುರುಷರಿಗೆ ಅಂಗಿ-ಧೋತಿ-ಕಮತಗಿಯ ರುಮಾಲ(ಪಟಗ)ಗಳನ್ನೂ 'ಉತ್ತರ ಕರ್ನಾಟಕದವರ ದೇಸಿ ದಿರಿಸು' ಎಂದು ಒ(ಅ)ಪ್ಪಿಕೊಂಡಿದ್ದೇವೆ. ಅದರಲ್ಲೂ ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲ್ಲೂಕಿನ ಕಮತಗಿ ಗ್ರಾಮದ ಪಟಗ ಮತ್ತು ರುಮಾಲನ್ನು ಜಾನಪದ ಸೊಗಡಿನ ಪೌರುಷದ ಕಿರೀಟ, ಗಂಡು ಮೆಟ್ಟಿನ ನಾಡಿನ ಗಂಡಸರ ಲಕ್ಷಣವೆಂದು ಕುಷ್ಟಗಿ ಪರಿಸರವೂ ಒಳಗೊಂಡಂತೆ ಉತ್ತರ ಕರ್ನಾಟಕದ ಜನರು ಹಾಗೂ ಮಹಾರಾಷ್ಟ್ರದ ಕೆಲವು ಜನಾಂಗಗಳು ಒ(ಅ)ಪ್ಪಿಕೊಂಡಿದ್ದಾರೆಂದರೆ ಈ ರುಮಾಲದ ಮಹತ್ವ ಅರ್ಥವಾಗುತ್ತದೆ.

**ಕಮತಗಿಯ ಪಟಗ ಮತ್ತು ರುಮಾಲು ನೇಕಾರರ ಹಿನ್ನೆಲೆ ಮತ್ತು ಮೂಲ :**

ಕಮತಗಿಯು ಮೂಲತಃ ೮೦% ರಷ್ಟು ಕಮತ ಮಾಡುವವರ ಊರು. ಇನ್ನೂ ೨೦% ರಷ್ಟು ನೇಕಾರರು. ನೇಕಾರರು ಬಹುಶಃ ಬೇರೆಕಡೆಯಿಂದ ವಲಸೆ ಬಂದಿರಬಹುದಾದರೂ ಎಲ್ಲಿಯಿಂದ ಬಂದರು? ಏಕೆ ಬಂದರು? ಯಾವಾಗ ಬಂದರು? ಎಂಬ ಪ್ರಶ್ನೆಗಳಿಗೆ ಉತ್ತರ ಹುಡುಕಲು ಹೊರಟಾಗ ಅಚ್ಚರಿ ಕಾದಿತ್ತು! ಇಲ್ಲಿನ ಪಟಗ ಅಥವಾ ರುಮಾಲು ನೇಕಾರರ ಮನೆತನದ(ಅಡ್ಡ) ಹೆಸರುಗಳ ಮೂಲ ಹಿಡಿದು ಹೊರಟರೆ ಬಹುಶಃ ಈ ನೇಕಾರರ ಮೂಲ ಅದೇ ಎನ್ನಬಹುದು! ಪಟಗ ನೇಕಾರರ ಮನೆತನದ(ಅಡ್ಡ) ಹೆಸರುಗಳಲ್ಲಿ ಕಡ್ಲಿಮಟ್ಟಿ, ವಂದಗನೂರ, ಗಂಜಿಹಾಳ, ಕೊನ್ನೂರು, ಮಾಡವಾಳ, ಕ್ಯಾದಿಗೇರಿ, ಶಾಬಾದಿ ಇತ್ಯಾದಿಗಳು ಅವರವರ ಮೂಲಸ್ಥಳವನ್ನೇ ಸಾರುತ್ತವೆ ಎಂಬುದರಲ್ಲಿ ಸಂಶಯವಿಲ್ಲ!

**ಕಮತಗಿ ಗ್ರಾಮದ ಮಾಹಿತಿ :**

ಕಮತಗಿ ಎಂಬ ಗ್ರಾಮವು ಇದೀಗ ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನಲ್ಲಿದೆ. ಕುಷ್ಟಗಿಯಿಂದ ರಾಷ್ಟ್ರೀಯ ಹೆದ್ದಾರಿ-೫೦ರಲ್ಲಿ ೩೪ಕಿ.ಮೀ. ಪಯಣಿಸಿದರೆ ಸಿಕ್ಕುವ ಹುನಗುಂದ ಪಟ್ಟಣದಿಂದ ಬಾಗಲಕೋಟೆಯ ಮಾರ್ಗವಾಗಿ ೨೨ಕಿ.ಮೀ. ಸಾಗಿದರೆ ಸಿಕ್ಕುವ ಮಲಪ್ರಭಾ ನದಿಯ ದಡದಲ್ಲಿರುವ ಅಪ್ಪಟ ಕಮತದವರ, ಕೆಲವು ನೇಕಾರರ ಊರು.

೨೦೧೧ರ ಜನಗಣತಿಯ ಪ್ರಕಾರ ೧೫೬೨೦ ಜನಸಂಖ್ಯೆಯನ್ನು ಹೊಂದಿರುವ ಈ ಗ್ರಾಮದಲ್ಲಿ ೭೯೯೫ ಪುರುಷರು ಹಾಗೂ ೭೯೨೫ ಸ್ತ್ರೀಯರಿದ್ದಾರೆ. ಮೂಲತಃ ಇದು ೮೮% ರಷ್ಟು ಕೃಷಿಕರ ಗ್ರಾಮ. ಆದಾಗ್ಯೂ ಇಲ್ಲಿ ೧೨% ಭಾಗದಷ್ಟು ಜನರು ನೇಯ್ಗೆ ಉದ್ದಿಮೆಯನ್ನೇ ನಂಬಿದ್ದಾರೆ. ಇತ್ತೀಚಿಗೆ ನೇಕಾರಿಕೆ ಹಾಗೂ ಮಗ್ಗಗಳ ಸಂಖ್ಯೆ ಕ್ರಮೇಣ ಕ್ಷೀಣಿಸಿದೆ. ಹೀಗಿದ್ದಾಗ್ಯೂ ಈ ಪಟ್ಟಣದಲ್ಲಿ ಸುಮಾರು ೧೫೦ಕ್ಕೂ ಹೆಚ್ಚು ಕೈಮಗ್ಗಗಳು, ೨೫೦ಕ್ಕೂ ಅಧಿಕ ವಿದ್ಯುತ್ ಮಗ್ಗಗಳಿವೆ. ಹಠಗಾರ, ದೇವಾಂಗ ಹಾಗೂ ಬಣಗಾರ ಜಾತಿಯವರು ಮಾತ್ರ ರುಮಾಲು(ಪಟಗ)ಗಳನ್ನು ನೇಕಾರಿಕೆ ಮಾಡುತ್ತಿದ್ದಾರೆ. ಇಲ್ಲಿ ಇಲಕಲ್ಲ ಸೀರೆಗಳನ್ನೇ ಹೆಚ್ಚಾಗಿ ನೇಯುತ್ತಿದ್ದರೂ ಪ್ರಸಿದ್ಧಿ ಪಡೆದದ್ದು ಮಾತ್ರ 'ರುಮಾಲ(ಪಟಗ) ನೇಕಾರರ ಊರು' ಎಂದು! 'ರುಮಾಲದ ಕಮತಗಿ' ಎಂದು ಕರೆಯಿಸಿಕೊಳ್ಳುವಷ್ಟು ಸ್ಥಾನ ಗಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ!

**ಪಟಗ ಮತ್ತು ರುಮಾಲ ನೇಕಾರರ ಹಿನ್ನೆಲೆ :**

ಹೀಗೆ ಜನಪದರ ಸಂಸ್ಕೃತಿ, ಆಚಾರ-ವಿಚಾರ, ಕಲೆ, ಅಭಿರುಚಿ, ಆಸಕ್ತಿಗಳನ್ನು ಅಭಿವ್ಯಕ್ತಪಡಿಸುವ ಅನೇಕ ವಿಷಯಗಳಲ್ಲಿ ರುಮಾಲ ಸಾಂಸ್ಕೃತಿಕ ಪರಂಪರೆ ಹಾಸುಹೊಕ್ಕಾಗಿದೆ. ಇಂತಹ ರುಮಾಲನ್ನು ಕಮತಗಿ ಗ್ರಾಮದ ಸುಮಾರು ೪೫-೫೦ ಕೈ(ಕುಣಿ)ಮಗ್ಗಗಳಲ್ಲಿ ಮಾತ್ರ ರುಮಾಲ(ಪಟಗ)ಗಳು ತಯಾರಾಗುತ್ತವೆ. ಇಲ್ಲಿನ ಕಡ್ಲಿಮಟ್ಟಿ ಮನೆತನದ ಸುಮಾರು ೧೦ ಕುಟುಂಬಗಳು, ಹೆಚ್.ಎಸ್.ಸಿಂಹಾಸನ, ಎಮ್.ಎಲ್.ಶಾಬಾದಿ, ಮೋಹನ ಹುಲಮನಿಗೌಡ್ರು, ಹೆಚ್.ಎಸ್.ಮಾಡವಾಳ, ಗುರಪ್ಪ ಗಣಿ ಈ ಕುಟುಂಬಗಳ ಮೂಲ ಪಾರಂಪರಿಕ ಕಸಬು 'ಪಟಗ' ನೇಕಾರಿಕೆಯೇ ಆಗಿದೆ. ಮಲ್ಲೇಶಪ್ಪ ವಂದಗನೂರ ಎಂಬುವವರ ಕುಟುಂಬದಲ್ಲಿ ಇಂದೇ ಒಂದು ಕೈಮಗ್ಗದಲ್ಲಿ ಮಾತ್ರ 'ರುಮಾಲು' ನೇಯಲ್ಪಡುತ್ತಿವೆ!

**ರುಮಾಲು(ಪಟಗ) ಪದದ ಅರ್ಥ ಮತ್ತು ಇತಿಹಾಸ :**

**ರುಮಾಲು ಪದದ ಅರ್ಥ** :- ಸುಮಾರು ೬ ಮೀಟರ್ ಉದ್ದ ಹಾಗೂ ೩೬ ಇಂಚು ಅಗಲವಿರುವ ಯಾವುದೇ ಹೊಲಿಗೆಯಿಲ್ಲದ ವಿವಿಧ ಬಣ್ಣಗಳು, ಅಂಚು ಇರುವ ವಿಶಿಷ್ಟ ಪುರುಷರ ಶಿರೋಭೂಷಣ ಉಡುಪನ್ನು ರುಮಾಲು(Turban) ಎನ್ನುತ್ತಾರೆ. ಇದೀಗ ಈ ರೆಡಿಮೇಡ್ ಟರ್ಬನ್(ಹ್ಯಾಟ್) ಮಹಿಳಾ ಲೋಕದಲ್ಲಿ ಒಂದು ಅತ್ಯಾಧುನಿಕ ಶೈಲಿಯ ಶಿರೋಭೂಷಣ ಉಡುಪಾಗಿದೆ! ಅದು ಫ್ಯಾಶನ್ ಜ'ಗತ್ತಿ'ನ ಮಹಿಳೆಯರಿಗಾಗಿಯೇ ಮುಡುಪಾಗಿದೆ!!

'ರುಮಾಲು' ಮತ್ತು 'ಪಟಗ' ಪದ :- ಪಂಜಾಬಿ ಭಾಷೆಯ 'ರುಮಾಲ್', ಕನ್ನಡದಲ್ಲಿ ರುಮಾಲು, ರುಂಬಾಲು ಎಂದೂ ಮುಂಡಕ್ಕೆ(ತಲೆಗೆ) ಸುತ್ತಿಕೊಳ್ಳುವುದರಿಂದ ಮುಂಡಾಸು, ಪಘು ಎಂದು ಕರೆಯುತ್ತಾರೆ. ರಾಜಸ್ಥಾನಿಯರು ಪಗರಿ ಅಥವಾ ಸಫಾ ಅಥವಾ ಪೋಷಿಯಾ ಎಂದು ಕರೆಯುವುದುಂಟು. ಹಿಂದಿ ಭಾಷೆಯ 'ಪಗಡಿ' ಎಂದು ಬಳಕೆಯಾಗುವ ಪದವು ಕನ್ನಡದಲ್ಲಿ 'ಪಟಗ', ಪೇಟ ಎಂದು ಬಳಕೆಗೆ ಬಂದಿದೆಯೆಂದು ಹೇಳಲಾಗುತ್ತಿದೆ. ರುಮಾಲು ಶಬ್ದ ಆಂಗ್ಲಭಾಷೆಯಲ್ಲಿ 'ಟರ್ಬನ್'(Turban) ಆಗಿಯೂ ಬಳಕೆಯಲ್ಲಿದೆ.

**ಕಮತಗಿ ರುಮಾಲು ಹಾಗೂ ಪಟಗಗಳ ವ್ಯತ್ಯಾಸ :**

ರುಮಾಲ ಮತ್ತು ಪಟಗ ಎರಡೂ ಒಂದೇ ಎಂದು ತಿಳಿದುಕೊಂಡವರೇ ಹೆಚ್ಚು! ಆದರೆ... ಅವೆರಡೂ ಬೇರೆ ಎಂಬ ಸತ್ಯ ಅನೇಕರಿಗೆ ತಿಳಿದಿಲ್ಲ!! ಇದನ್ನು ಸುತ್ತಿಕೊಳ್ಳುವ ವಿಧಾನ ಜನಾಂಗದಿಂದ ಜನಾಂಗಕ್ಕೆ ಭಿನ್ನವಾಗಿರುತ್ತದೆ. ಉತ್ತರ ಕರ್ನಾಟಕದಲ್ಲಿ ಹಾಗೂ ಮಹಾರಾಷ್ಟ್ರದ ದಕ್ಷಿಣ ಭಾಗದಲ್ಲಿ ಪಟಗವನ್ನು ಸುತ್ತಿಕೊಳ್ಳುವಾಗ ಪಟಗದ 'ಎರಡು ಚುಂಗು'(ಅಂಚಿನ ತುದಿ)ಗಳನ್ನೂ ಸಮಾನಾಂತರವಾಗಿ ಮಡಿಚಿ ತಲೆಗೆ ಸುತ್ತಿಕೊಳ್ಳುತ್ತಾರೆ. ಆದರೆ... ರುಮಾಲಿನ ಮೂಲೆಯ ಅಂಚಿನ ವಿರುದ್ಧದ ಭಾಗದ 'ಒಂದು' ಚುಂಗ(ಅಂಚಿನ ತುದಿ)ನ್ನು ಜಗ್ಗಿ ಓರೆಯಾಗಿ ತಲೆಗೆ ಸುತ್ತಿಕೊಳ್ಳುತ್ತಾರೆ! "ಪಟಗsನ ಸೀದಾ ಸುತ್ತಿಕೊಳ್ತಾರ್ರಿ, ರುಮಾಲ್ನs ಮೂಲಿಮ್ಯಾಲೆ ಸುತ್ತಿಕೊಳ್ತಾರ್ರಿ, ಇತ್ತಿತ್ಲಾಗಿ ರುಮಾಲ್ನ ಸುತ್ತೋರ್ ಸಂಖ್ಯಾ ಬಾಳಾ ಕಮ್ಮೀ ಆಗಾಕ್ಹತ್ತೈತ್ರಿ. ಹೀಂಗಾಗಿ... ರುಮಾಲ್ನ ನೇಯ್ಯಾರ ಸಂಖ್ಯಾನೂ ಬಾಳಾ ಕಮ್ಮೀ ಆಗೈತ್ರಿ" ಎಂದು ಕಮತಗಿಯ ಏಕೈಕ ರುಮಾಲ ನೇಕಾರ ಮಲ್ಲೇಶ ವಂದಗನೂರ ನೊಂದು ನುಡಿಯುತ್ತಾರೆ.

**ಅಳತೆಗಳಲ್ಲಿ ವ್ಯತ್ಯಾಸ :**

ರುಮಾಲು ಹಾಗೂ ಪಟಗದ ಅಳತೆಗಳಲ್ಲಿಯೂ ತುಂಬಾ ವ್ಯತ್ಯಾಸವಿರುತ್ತದೆ.

**ಪಟಗ** – ೪೪" (ಇಂಚು) ಅಗಲ/ಪನ್ನಾ × ೬.೨೦ ಮೀಟರ್ ಉದ್ದ ಅಥವಾ ೩೬" (ಇಂಚು) ಅಗಲ/ಪನ್ನಾ × ೬.೦೦ ಮೀಟರ್ ಉದ್ದದ ಅಳತೆಯನ್ನು ಹೊಂದಿರುತ್ತದೆ.

**ರುಮಾಲು** – ೧೦೦" (ಇಂಚು) ಅಗಲ/ಪನ್ನಾ × ೮೦" (ಇಂಚು) ಉದ್ದ ಇರುತ್ತದೆ. ಜೊತೆಗೆ ಜರಿ ಅಂಚಿನ ದಡಿ ಹಾಗೂ ಒಳಗೆ ಚಿಕ್ಕ ಚಿಕ್ಕ ಡಿಸೈನ್‌ಗಳಿರುತ್ತವೆ.

**ದರಗಳಲ್ಲಿ ವ್ಯತ್ಯಾಸ :**

ಚಮಕಾ ರುಮಾಲು(ಪಟಗ) ೬೦೦/– ರೂಪಾಯಿಗೆ ಲಭ್ಯವಾದರೆ, ರೇಷ್ಮೆ ಪಟಗವು ೧೦ ಗ್ರಾಂ.ಗೆ ೫೦/– ರೂಪಾಯಿಗೆ ಮಾರಾಟವಾಗುತ್ತದೆ. ಇತ್ತೀಚಿಗೆ ಪಟಗ ಬಳಸುವವರ ಬಳಗ ಕ್ಷೀಣಿಸುತ್ತಿದ್ದು ಬೇಡಿಕೆಯೂ ತೀರಾ ಕಡಿಮೆಯಾಗುತ್ತಿದೆ.

"ಸಸ್ತಾದಾಗ(ಕಡಿಮೆ ದರ) ಸೂರತ್ ಚೈನಾ ಪಟಗ ಎಲ್ಲಾ ಕಡಿಗೂ ಸಿಗಾಕ್ಹತ್ಯಾವ, ಎರಡೂವರಿ ಮೂರುಸಾವಿರ ಕೊಟ್ಟು ನಮ್ಮ ಪಟಗ ಯಾರ ಖರೀದಿ ಮಾಡ್ತಾರ್ರಿ? ಬಿಜಾಪೂರ, ಸೊಲ್ಲಾಪೂರ, ಸಾಂಗ್ಲಿ, ಪೂನಾ, ಬೆಳಗಾವಿ, ನಿಪ್ಪಾಣಿ, ಬಾಗಲಕೋಟೆಯಂತಹ ಊರುಗಳನ್ನ ಸುತ್ತಿ ಮಾರಾಟ ಮಾಡೋ ಪ್ರಸಂಗ ಬಂದೈತ್ರಿ. ಏನs ಮದುವಿ-ಮುಂಜ್ವಿ ವ್ಯಾಳ್ಯಾದಾಗ ಇರ್ಲಿ ಅಂತಾ ಸಂಪ್ರದಾಯಸ್ಥ ಕುಟುಂಬದವರು ಕೊಂಡ್ಕೋತಾರ್ರಿ" ಶಿವಾನಂದ ಕಡ್ಲಿಮಟ್ಟಿಯವರ ಧ್ವನಿಯಲ್ಲಿ ನೋವಿತ್ತು.

. "ನಾವs ಕಪಡಾ ಅಂಗಡಿಗಳಿಗೆ ಹೋಗಿ ಹೋಲ್ ಸೇಲ್ ರೇಟಿನ್ಯಾಗ ಕೊಟ್ಟು ಬರ್ತೀವ್ರಿ. ಇಲ್ಲಿಗೇ ಬಂದು ಖರೀದಿ ಮಾಡಾವ್ರು ಈಗ ಇಲ್ಲಬಿಡ್ರಿ. ಹಿಂದಕ ಅಂಗಡಿಯವರs ಬಂದು ಸಂಚಗಾರ(ಅಡ್ವಾನ್ಸ್) ಕೊಟ್ಟು ಹೋಗ್ತಿದ್ರಿ. ಈ ಕಸಬು ಭಾಳಾ ದಿನ ನೆಡಿಯುವ್ಹಂಗ ಕಾಣsವಲ್ದರಿ.." ನೊಂದು ನುಡಿಯುವ ಈರಪ್ಪ ಕಡ್ಲಿಮಟ್ಟಿಯವರ ಮಾತು ಪಟಗ ನೇಕಾರಿಕೆ ಅಳಿವಿನ ಅಂಚಿನತ್ತ ವಾಲುತ್ತಿದೆ ಎಂಬುದು ಸ್ಪಷ್ಟವಾಗುತ್ತದೆ.

**ಪಟಗದ ವಿಧಗಳು :**

ಕಮತಗಿಯ ರುಮಾಲು ಹಾಗೂ ಪಟಗದ ಅಳತೆಗಳಲ್ಲಿಯೂ ವ್ಯತ್ಯಾಸವಿರುವಂತೆ ನೂಲು ಆಧಾರಿತ ವಿವಿಧ ನಮೂನೆಯ ಪಟಗ ಹಾಗೂ ರುಮಾಲುಗಳೂ ಇರುತ್ತವೆ. **೧) ರೇಷ್ಮೆ ಪಟಗ ೨)ಚಮಕಾ ಪಟಗ ೩)ಜೀರೋ ಚಮಕಾ ಪಟಗ** ಎಂಬ ಮೂರು ವಿಧದ ಪಟಗಗಳನ್ನು ಕಾಣಬಹುದು.

ಕೇಸರಿ, ಬಿಳಿ, ಹಸಿರು, ಹಳದಿ, ನೇರಳೆ, ಗುಲಾಬಿ, ಬಾದಾಮಿ, ಕೆಂಪು ಹೀಗೆ ಗ್ರಾಹಕರ ಇಚ್ಛೆಗೆ ತಕ್ಕಂತೆ ವಿವಿಧ ಬಣ್ಣಗಳ ಪಟಗಗಳನ್ನು ನೇಯ್ದುಕೊಡಲು ಕಮತಗಿಯ ನೇಕಾರರು ಸದಾ ಸಿದ್ಧರಾಗಿರುತ್ತಾರೆ.

**ಪಟಗ ಅಥವಾ ರುಮಾಲು ಬಳಕೆಯ ವೈಶಿಷ್ಟ್ಯತೆಗಳು :**

- ಕಮತಗಿಯ ರುಮಾಲು(ಪಟಗ)ಗಳು ಉತ್ತರ ಕರ್ನಾಟಕದ ಹಾಗೂ ಮಹಾರಾಷ್ಟ್ರದಲ್ಲಿ ಹಲವು ಪುರುಷರ ನಿತ್ಯದ ಪೋಷಾಕಾಗಿದೆ. ಅಲ್ಲದೇ ವಿಶೇಷ ಸಂದರ್ಭಗಳಲ್ಲಿ ಬೇರೆ ಬೇರೆ ರಾಜ್ಯಗಳಲ್ಲೂ ಖುಷಿಗಾಗಿ ಇದರ ಬಳಕೆ ಮಾಡಲಾಗುತ್ತಿದೆ. ಇತ್ತೀಚಿಗೆ ಟಿ.ವಿ. ಧಾರಾವಾಹಿಗಳಲ್ಲಿ, ಸಿನೆಮಾಗಳಲ್ಲಿ, ಫ್ಯಾಶನ್ ಷೋ ಹಾಗೂ ಲೈವ್

ಷೋಗಳಲ್ಲಿಯೂ ಕಮತಗಿಯ ರುಮಾಲು(ಪಟಗ)ಗಳು ಆಗಾಗ್ಯೆ ಬಳಕೆಯಾಗುತ್ತಿರುವುದು ಅವುಗಳಿಗೆ ಇನ್ನೂ ಜೀವ ಇದೆ ಎನ್ನುವ ಆಶಾಭಾವನೆಯನ್ನು ಹುಟ್ಟಿಸುತ್ತಿವೆ!

- ಮೂಲತಃ ಬಿಸಿಲು, ಧೂಳು, ಕ್ರಿಮಿ-ಕೀಟಗಳು, ಶಬ್ಧ ಹಾಗೂ ವಾಯುಮಾಲಿನ್ಯ ಮುಂತಾದವುಗಳಿಂದ ತಲೆ, ಉದ್ದನೆಯ ಕೂದಲು ಹಾಗೂ ಕಿವಿಗಳಿಗೆ ರಕ್ಷಣೆ ಪಡೆಯಲೆಂದು ಪಟಗ ಅಥವಾ ರುಮಾಲನ್ನು ಬಳಸುವುದು ರೈತರಿಗೆ ಅನಿವಾರ್ಯವಾಗಿತ್ತು. ಖಂಡಿತಾ ಫ್ಯಾಶನ್‌ಗಾಗಿ ಅಲ್ಲ.

- ತಲೆಯನ್ನು ತಂಪಾಗಿಟ್ಟುಕೊಳ್ಳಲೂ ಪಟಗ(ರುಮಾಲು) ಸುತ್ತಿಕೊಳ್ಳುತ್ತಾರೆ.

- ಸಮಾಜದಲ್ಲಿ ಸಭ್ಯತೆ ಹಾಗೂ ಪ್ರತಿಷ್ಠೆಯ ಪ್ರತೀಕವಾಗಿಯೂ ಧರಿಸುತ್ತಾರೆ.

"ಪಟ್ಟದಕಲ್ಲಿನ ಲೋಕೇಶ್ವರ ದೇವಾಲಯವನ್ನು ನಿರ್ಮಿಸಿದ್ದಕ್ಕಾಗಿ ಶಿಲ್ಪಕಲಾವಿದರಾದ ಅನಿವಾರಿತಾಚಾರಿ ಹಾಗೂ ಸರ್ವಸಿದ್ಧಿ ಆಚಾರಿಗಳಿಗೆ(೭೩೩-೪೪ ರ ವೇಳೆಯಲ್ಲಿ) ಪೆರ್ಜರಪು ಎಂಬ ಪಟ್ಟವನ್ನು ಕಟ್ಟಿ ಸನ್ಮಾನಿಸಲಾಯಿತು. ಪೆರ್ಜರಪು ಎಂದರೆ ಅಗಲವಾದ ಜರಿಯುಳ್ಳ ರೇಶ್ಮೆ ವಸ್ತ್ರವನ್ನು ತಲೆಗೆ ಸುತ್ತಿ ಗೌರವಿಸುವುದು ಎಂದು ವಿದ್ವಾಂಸರು ಅಭಿಪ್ರಾಯ."[೯] ಹಾಗೆಯೇ ಸಮಾಜದಲ್ಲಿ ಉನ್ನತ ಸಾಧನೆ ಮಾಡಿದವರನ್ನು ಸನ್ಮಾನಿಸಲೂ, ಗೌರವಿಸಲೂ ಇದನ್ನು ಬಳಕೆಯಾಗುತ್ತಿವೆ.

"ತಲೆಯ ಭಾಗದಲ್ಲಿ ಧರಿಸುವ ಉಡುಗೆಯು ದೈಹಿಕವಾಗಿ ಎತ್ತರವಾಗಿ ಕಾಣಿಸಲು ಮತ್ತು ವ್ಯಕ್ತಿತ್ವದ ಹಿರಿಮೆಗೆ ಹಾಗೂ ಗೌರವ ಸೂಚಕವಾಗಿಯೂ ಕಾಣಿಸಿಕೊಳ್ಳುವಂತೆ ಮಾಡುತ್ತದೆ."[೧೦]

- ಸಮಾನತೆಯನ್ನು ಬಿಂಬಿಸಲು
- ಒಂದು ಜನಾಂಗದ ಪ್ರಾತಿನಿಧಿಕ ಸಂಕೇತ. ಉದಾ:- ಸಿಖ್ಖರೆಂದು ತಮ್ಮನ್ನು
- ಗುರುತಿಸಲು ರುಮಾಲ್ ಸುತ್ತಿಕೊಳ್ಳುತ್ತಾರೆ.

**ರುಮಾಲದ ವಿಧಗಳು :**

ಭಾರತದಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ರುಮಾಲುಗಳು ವೈವಿಧ್ಯತೆಯಿಂದ ಕೂಡಿರುತ್ತವೆ. ಆಧುನಿಕ ರುಮಾಲುಗಳು ವೈವಿಧ್ಯಮಯವಾದ ಗಾತ್ರ, ಬಣ್ಣ ಹಾಗೂ ವಿನ್ಯಾಸಗಳಿಂದಾಗಿ

ಪ್ರಸಿದ್ಧಿ ಪಡೆದಿವೆ. ಭಾರತದಲ್ಲಿ ೧) ಸಿಖ್ಖರ ರುಮಾಲು(ದಸ್ತರ್) ೨) ರಾಜಸ್ಥಾನಿ ರುಮಾಲು (ಪಗರಿ) ೩) ಮೈಸೂರು ಪೇಟ ೪)ಅಮಾಮ್ಹ (AMAMAH - The Traditional Turban in Islam) ೫) ಸೂರತ್ ಚೈನಾ ಪಟಗಗಳು ಪ್ರಮುಖವಾಗಿದ್ದು ತುಂಬಾ ಪ್ರಸಿದ್ಧಿಯನ್ನು ಪಡೆದಿವೆ.

**ರುಮಾಲಿನ ಮೂಲ :**

ರುಮಾಲು(Turban) ಹುಟ್ಟಿನ ಜಾಡು ಹಿಡಿದು ಅಂತರ್ಜಾಲವನ್ನು ಹೊಕ್ಕರೆ... ಪರ್ಷಿಯಾ (ಇರಾನ್) ಹಾಗೂ ಈಜಿಪ್ಟ್‌ಗಳ ಇತಿಹಾಸಕ್ಕೆ ತಳುಕು ಹಾಕಿಕೊಂಡಿರುವುದು ಗೊತ್ತಾಗುತ್ತದೆ!

"The origins are uncertain. Early PERSIANS in modern Iran and Phrygains in modern Turky wore a conical cap (Phrygain cap) eccircled by bands of cloth, which historians have suggested was developed to become the modern turban, but other theories suggeste it was first widly worn in **Egypt.** An early attestation for knowledge of the turban is found in the Roman auther Ovid… Ovid recounts the myth that Midas king of Phrygains, an Indo-European people of central Turky, wore a royal purple turban to cover his donkey ears. A style of turban called a *phakeolis* continued to be worn in that regionby soldiers of the Byzantine army in the period 400-600."[೩೧]

"ಭಾರತದಲ್ಲಿ ಪುರಾತತ್ವ ಸಂಶೋಧನೆಗಳಿಂದ ದಕ್ಷಿಣ ಭಾರತದಲ್ಲಿ ಸ್ತ್ರೀ ಪುರುಷರಿಬ್ಬರೂ ಒಂದೇ ರೀತಿಯ ಶಿರೋವಸ್ತ್ರವನ್ನು ಧರಿಸುತ್ತಿದ್ದ ದಾಖಲೆಗಳು ದೊರೆಯುತ್ತವೆ. ಉತ್ತರ ಭಾರತದಲ್ಲಿ ಈ ಬಿಡಿ ವಸ್ತ್ರವು ಪಗಡಿಯಾಗಿ, ದಕ್ಷಿಣ ಭಾರತದಲ್ಲಿ ಮುಂಡಾಸಾಗಿ ಪರಿವರ್ತನೆ ಹೊಂದಿತು."[೩೨]

ಭಾರತಕ್ಕೆ ಬಹುಶಃ ಪರ್ಷಿಯಾ (ಇರಾನ್) ಹಾಗೂ ಈಜಿಪ್ಟ್‌ಗಳಿಂದ ರುಮಾಲು ಪ್ರವೇಶ ಪಡೆದಿರುವ ಸಾಧ್ಯತೆಗಳಿವೆ. ಏಕೆಂದರೆ ರಾಜಸ್ಥಾನಿಯರು ಶಿರಸ್ತ್ರಾಣವನ್ನು

ಪೋಷಿಯಾ ಎಂದು ಕರೆಯುತ್ತಿರುವುದು 'ಪರ್ಷಿಯಾ'ದಿಂದ *ಬಂದಿರುವ ದಿರಿಸು* ಎಂದಿರಬಹುದೇ?!

**'ಕನ್ನಡ ಕನ್ನಡ ಶಬ್ದಾರ್ಥಕೋಶ'**:– ೨೦೧೨ರಲ್ಲಿ ಮೆ॥ ಪಿ.ಸಿ.ಶಾಬಾದಿಮಠ, ಗದಗರವರು ಪ್ರಕಟಿಸಿದ ಅರವಿಂದ ಸುಗೂರರವರ ಸಂಪಾದಕತ್ವದಲ್ಲಿ ಹೊರಬಂದ 'ಕನ್ನಡ ಕನ್ನಡ ಶಬ್ದಾರ್ಥಕೋಶ' ಪುಟ–೫೨೧ ರಲ್ಲಿ ಹೀಗಿದೆ : ರುಮಾಲು – ಪಾವಡ, ತಲೆ ಬಟ್ಟೆ, ಶಿರಸ್ತ್ರಾಣ, ಕರವಸ್ತ್ರ ಎಂದಿದೆ.

**'ಐಬಿಎಚ್ ಕನ್ನಡ– ಕನ್ನಡ–ಇಂಗ್ಲಿಷ್ ನಿಘಂಟು'** :– ೧೯೯೯ರಲ್ಲಿ ಇಂಡಿಯಾ ಬುಕ್ ಹೌಸ್ ಲಿಮಿಟೆಡ್, ಬೆಂಗಳೂರುರವರು ಪ್ರಕಟಿಸಿದ ಪ್ರೊ. ಜಿ.ವೆಂಕಟಸುಬ್ಬಯ್ಯ, ಪ್ರೊ. ಎಲ್.ಎಸ್.ಶೇಷಗಿರಿರಾವ್, ಪ್ರೊ. ಎಚ್.ಕೆ.ರಾಮಚಂದ್ರಮೂರ್ತಿಯವರ ಸಂಪಾದಕತ್ವದಲ್ಲಿ ಹೊರಬಂದ 'ಐಬಿಎಚ್ ಕನ್ನಡ– ಕನ್ನಡ–ಇಂಗ್ಲೀಷ್ ನಿಘಂಟು ಪುಟ–೫೩೪ರಲ್ಲಿ ರುಮಾಲು – ತಲೆಗೆ ಸುತ್ತಿಕೊಳ್ಳುವ ಬಟ್ಟೆ; ಮುಂಡಾಸು (a turban; a head dress) ಎಂಬ ಅರ್ಥಗಳಿವೆ.

ಸಿಖ್ಖರ ಗುರು ಗುರುನಾನಕರಿಂದ ಹಿಡಿದು ಇಂದಿನ ಗುರುಗಳ ತನಕ ಎಲ್ಲರೂ ರುಮಾಲನ್ನು ಸುತ್ತಿಕೊಳ್ಳುತ್ತಾರೆ. ತಮ್ಮ ಕತ್ತರಿಸದ ಉದ್ದನೆಯ ಕೂದಲು ರಕ್ಷಣೆಗಾಗಿ, ಸಮಾನತೆಯನ್ನು ಬಿಂಬಿಸಲು, ಸಿಖ್ಖರೆಂದು ತಮ್ಮನ್ನು ಗುರುತಿಸಲು ಸಿಖ್ಖರ ೧೦ನೇ ಗುರು, ಗುರು ಗೋವಿಂದ ಸಿಂಗ್‌ರವರು ಸಿಖ್ಖರು ಕಡ್ಡಾಯಗೊಳಿಸಿದರು. ಆದ್ದರಿಂದ ರುಮಾಲ್ ಸಿಖ್ ಜನಾಂಗದ ಪುರುಷರ ಉಡುಗೆಯಾಗಿದ್ದು, ಸ್ತ್ರೀಯರೂ ದಸ್ತರ್ (Scarf) ಎಂಬ ರುಮಾಲನ್ನೂ ಸುತ್ತಿಕೊಳ್ಳುತ್ತಾರೆ. ಅಲ್ಲದೇ ಮುಸ್ಲಿಂ ಪುರುಷರೂ 'ಅಮಾಮ್ಹ' (AMAMAH - The Traditional Turban in Islam) ಎಂಬ ರುಮಾಲನ್ನು ಸುತ್ತಿಕೊಳ್ಳುತ್ತಾರೆ.

ಒಟ್ಟಿನಲ್ಲಿ ಭಾರತದಲ್ಲಿ ರುಮಾಲು ಸುತ್ತಿಕೊಂಡಿದ್ದರೆ ಆತ ದೊಡ್ಡ ಜಮೀನ್ದಾರ, ಗೌಡ, ವತನದಾರ ಅಥವಾ ಶ್ರೀಮಂತ! ಟೋಪ್ಪಿಗೆ ಹಾಗೂ ಕೋಟು ಧರಿಸಿದ್ದರೆ ಆತ ವ್ಯಾಪಾರಿ ಅಥವಾ ಕಾರಕೂನ! ಬರೀ ಟೋಪಿ ಜೊತೆಗೆ ಗರಿ ಗರಿಯಾದ ಅಂಗಿ ಧೋತಿ ಧರಿಸಿದ್ದರೆ ಆತ ರಾಜಕಾರಣಿ ಎಂದು ಸುಲಭವಾಗಿ ಗುರುತಿಸಬಹುದು!

**ಕಮತಗಿ ಪಟಗ ಅಥವಾ ರುಮಾಲು ತಯಾರಾಗುವ ವಿಧಾನ :**

"ಯಾರಿಗೊಡಬೆ ಯಾತರ ಮಗಳೆ ॥ ನೂತಳಜ್ಜಿ ನೂಲನ್ನ ॥
ಐತಾರ ಸಂತೆಗೆ ಹೋದಾಳಜ್ಜಿ ॥ ನೂತಳಜ್ಜಿ ನೂಲನ್ನ ॥
ಅಳ್ಳೆಗಿಳ್ಳೆ ತಂದಾಳಜ್ಜಿ ॥ ನೂತಳಜ್ಜಿ ನೂಲನ್ನ ॥
ಸಣ್ಣಗೆ ಬಣ್ಣಗೆ ನೂತಳಜ್ಜಿ ॥ ನೂತಳಜ್ಜಿ ನೂಲನ್ನ ॥
ಹಾಸುಗೀಸು ಹಾಸಾಳಜ್ಜಿ ॥ ನೂತಳಜ್ಜಿ ನೂಲನ್ನ ॥
ಮಗ್ಗಗಿಗ್ಗ ನೇದಾಳಜ್ಜಿ ॥ ನೂತಳಜ್ಜಿ ನೂಲನ್ನ ॥
ಯಾರಿಗೊಡಬೆ ಯಾತರ ಮಗಳೆ ॥ ನೂತಳಜ್ಜಿ ನೂಲನ್ನ॥"[೩೩] ಹೆಂಗಸರ ವೃತ್ತಿ ಸಂಬಂಧಿ ಹಾಡಿನಲ್ಲಿಯೇ ನೇಕಾರತಿಯು ಸೀರೆಯನ್ನೋ, ಕುಪ್ಪಸವನ್ನೋ, ಧೋತಿಯನ್ನೋ, ರುಮಾಲು ಅಥವಾ ಪಟಗವನ್ನೋ ನೇಯುವ ವಿಧಾನ ಅಡಗಿದೆ.

ಹಿಂಜಲ್ಪಟ್ಟ ಹಂಜಿ ರೇಷ್ಮೆ ನೂಲಾಗಿ ರೂಪುಗೊಳ್ಳುತ್ತದೆ. ಹಾಗೆಯೇ ಆರ್ಟ ಸಿಲ್ಕು(ಚಮಕಾ)ಕೂಡಾ ನೂಲಾಗುತ್ತದೆ. ಈಗೀಗ ಸಿದ್ಧಗೊಂಡ ಬಣ್ಣ ಬಣ್ಣದ ರೇಷ್ಮೆ ನೂಲನ್ನು ಇಲಕಲ್ಲಿನ ಕೆ.ಎಸ್.ಡಿ.ಸಿ.ಯಿಂದ ಅಥವಾ ಬೆಂಗಳೂರಿನಿಂದ ತರಿಸಿಕೊಳ್ಳಲಾಗುತ್ತಿದೆ. ಇನ್ನೂ ಕೆಲವೇ ಕೆಲವರು ಮಾತ್ರ ತಮ್ಮ ಮನೆಯಲ್ಲಿಯೇ ಈ ನೂಲನ್ನು ಬಯಸಿದಂತಹ ಬಣ್ಣ ಬಣ್ಣದ ಟಬ್ಬುಗಳಿಗೆ ತೋಡಿ, ನಂತರ ಮೀನಿನ ಸರಿಯಲ್ಲಿ ಮಿಶ್ರಣ ಮಾಡಿ, ಹಿಂಡಿ, ಒಣಗಿದ ನಂತರ ಎಳೆಗಳನ್ನು ಬಿಡಿಸಿ ಲಡಿಗೆ ತೋಡುತ್ತಾರೆ. ಇದಕ್ಕೆ 'ಜಾಳಿಸುವುದು' ಎಂದು ಹೆಸರು. ಬಣ್ಣ ಪಡೆದ ಒಡ್ಲದ ಒಂದೊಂದು ಎಳೆಗಳಿಗೆ ಈಗಾಲೇ ಕೊಯ್ದಿರುವ ರುಮಾಲಿನ ತುಂಡಿಗೆ ಎಳೆಗಳನ್ನು ಕೂಡಿಸುವುದಕ್ಕೆ 'ಠಾಣ' ಎನ್ನುತ್ತಾರೆ. ಆಮೇಲೆ ರುಮಾಲದ ತುಂಡಿನ ಎಳೆಗಳನ್ನು 'ಹಣಗಿ' ಎಳೆಗಳಿಗೆ ಕೂಡಿಸುತ್ತಾರೆ. ಇದಕ್ಕೆ 'ಹಣಗಿ ಕೆಚ್ಚುವುದು' ಎನ್ನುತ್ತಾರೆ. ಈ ಎಳೆಗಳು ಸರಳವಾಗಿ ಬಿಡುವಂತಾಗಲು ಸುತ್ತುವುದನ್ನು 'ಹೈಟಿ'ಗೆ ತೋಡುವುದು ಎನ್ನುತ್ತಾರೆ. ಹೀಗೆ ತೋಡಿದ ಹೈಟಿಗೆ ಚೆನ್ನಾಗಿ ತಣ್ಣೀರು ಬಡಿದು, ಕೈ ರಾಟಿಯ ಮುಖಾಂತರ ಕಂಡಕಿಗೆ ಸುತ್ತುತ್ತಾರೆ. ನಂತರ ಕಂಡಕಿಗಳನ್ನು ಬುಟ್ಟಿಯಲ್ಲಿ ಹಾಕಿ ಬಿಸಿನಲ್ಲಿ ಒಣಗಿಸುತ್ತಾರೆ. ಬಣ್ಣ ಬಣ್ಣದ ನೂಲನ್ನು ರುಮಾಲ(ಪಟಗ)ದ ರೂಪಕ್ಕೆ ತಕ್ಕಂತೆ ಹಾಸು ಹೊಯ್ಯುತ್ತಾರೆ. ಇದೇ ಹಾಸನ್ನು ಹಣಿಗೆ ಕೆಚ್ಚಿ, ಕಾಂಡಕಿ ಲಾಳಿ ಸುತ್ತಿ ಮಗ್ಗಕ್ಕೆ ಅಣಿಗೊಳಿಸುತ್ತಾರೆ. ಮಗ್ಗದ ತೆಗ್ಗಿನಲ್ಲಿಯೇ ಅರ್ಧ ದೇಹ ಇಳಿಬಿಟ್ಟ ಜಾಡ(ನೇಕಾರ) ಹಾಸಿನ ಅಣಿ ಎತ್ತುವ ಮೂಲಕ , ಚುಂಗಿ ಕಟ್ಟಿದ ಮೇಲೆ ಪಟಗದ ಹೊಟ್ಟೆಯ ನೂಲಿನ ಮಧ್ಯದಲ್ಲಿ ಲಾಳಿ ಓಡಿಸುತ್ತಾ ನೂಲು

ಬಿಟ್ಟು ನೇಯುತ್ತಾನೆ. ಹೀಗೆ ಸಿದ್ಧವಾದ ಪಟಗವನ್ನು ವ್ಯಾಪಾರಸ್ಥನಿಗೆ ನೀಡಿ ಮಜೂರಿ ಪಡೆಯುತ್ತಾನೆ.

**ಪಟಗ ಅಥವಾ ರುಮಾಲು ನೇಕಾರಿಕೆಯಿಂದ ಸೃಷ್ಟಿಯಾಗುವ ವಿವಿಧ ಉದ್ಯೋಗಗಳು :**

ಕಮತಗಿ ರುಮಾಲದ ನೇಕಾರ ವೃತ್ತಿಯ ವಿಶೇಷತೆಯೆಂದರೆ ಕುಟುಂಬದ ಎಲ್ಲ ವಯೋಮಾನದವರಿಗೂ ಇದು ಕೆಲಸಕೊಡುತ್ತದೆ. ನೂಲುವುದರಿಂದ ಹಿಡಿದು ಸಿದ್ಧವಾದ ರುಮಾಲುಗಳನ್ನು ವ್ಯಾಪಾರಸ್ಥರಿಗೆ ತಲುಪಿಸುವತನಕ ಮನೆಮಂದಿಯೆಲ್ಲ ತಮ್ಮನ್ನು ಪಟಗದ ಉದ್ಯಮದಲ್ಲಿ ತೊಡಗಿಸಿಕೊಳ್ಳುತ್ತಾರೆ. ಆದ್ದರಿಂದ ಇದನ್ನು ಕೌಟುಂಬಿಕ ವೃತ್ತಿ ಮತ್ತು ಗೃಹ(ಗುಡಿ) ಕೈಗಾರಿಕೆ ಎಂತಲೂ ಕರೆಯುತ್ತಾರೆ. ಗಾಂಧೀಜಿಯವರು ಪ್ರಚಾರ ಮಾಡಿದ ಸ್ವದೇಶಿ ಉಡುಪಿನ ಚಳುವಳಿಯ ಹಿನ್ನೆಲೆಯೋ ಎಂಬಂತೆ ಇಲ್ಲಿ ಬರೀ ಕೈಮಗ್ಗದಲ್ಲಿಯೇ ರುಮಾಲುಗಳನ್ನು ನೇಯುವುದರಿಂದ ಬೇಡಿಕೆಯಿದೆ. ಇದು ಅನೇಕ ಉದ್ಯೋಗಗಳಿಗೆ ಅವಕಾಶ ಮಾಡಿಕೊಟ್ಟಿದೆ. ಉದ್ಯೋಗಕ್ಕೆ ತಕ್ಕಂತೆ ಮಜೂರಿ(ಪಗಾರ) ಸಿಗುತ್ತದೆ.

➢ **ನೇಕಾರಿಕೆ** (Weaving) : ಕಮತಗಿಯ ರುಮಾಲು(ಪಟಗ)ಗಳು ಅನೇಕ ಬಡನೇಕಾರರಿಗೆ ಕೆಲಸ ಕೊಡುವ ಮೂಲಕ ಅವರ ಕುಟುಂಬಗಳಿಗೆ ವರಪ್ರಸಾದವಾಗಿವೆ. ಕೈಮಗ್ಗದ ರೇಷ್ಮೆ ಪಟಗದ ನೇಕಾರನಿಗೆ ಒಂದು ಪಟಗಕ್ಕೆ ೧೨೦ ರೂಪಾಯಿ ಮಜೂರಿ ಸಿಕ್ಕುತ್ತದೆ. "ಎರಡು ದಿನಕ್ಕ ಒಂದು ಪಟಗ ನೇಯ್ತೀನ್ರಿ. ಒಂದು ದಿನಕ್ಕ ಬರೀ ೬೦ ರೂಪಾಯಿ ಕೂಲಿ ಬಿದ್ರ ಜೀವನ ಸಾಗಿಸೋದು ಹ್ಯಾಂಗ ಅನಸಾಕ್ಹತ್ತೈತ್ರಿ." ಎಂದು ಕೂಲಿ ನೇಕಾರ ದಾವಲಸಾಬ ಡಂಗಿ ಹೇಳುತ್ತಾರೆ. "ಒಂದ್ ಹರ್‍ಯಾದಾಗ ದೀಡs ತಾಸಿನ್ಯಾಗ ಒಂದು ರುಮಾಲು ನೇಯ್ತಿದ್ದೆ! ಈಗ ಮೂರು ತಾಸು ಬೇಕ್ರಿ." ತನ್ನ ಸಾಧನೆಯನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ ಮಲ್ಲೇಶ ವಂದಿಗನೂರು.

➢ **ಬಣ್ಣಗಾರಿಕೆ** (Dyeing) : ನೂಲಿಗೆ ಬಣ್ಣ ಹಾಕುವ ಮನೆಗೆ 'ಕೇಲ'ಮನೆ ಎನ್ನುತ್ತಾರೆ. ಕಮತಗಿಯಲ್ಲಿ ಕೇಲಮನೆ ಇಲ್ಲ. ಒಬ್ಬಿಬ್ಬರು ಮಾತ್ರ ತಮ್ಮ ಮನೆಯಲ್ಲಿಯೇ ಬಣ್ಣ ಹಾಕುತ್ತಾರೆ. ಕಪ್ಪನ್ನು ಹೊರತುಪಡಿಸಿ ಉಳಿದೆಲ್ಲಾ ಬಣ್ಣಗಳನ್ನು ಹಾಕುವವರನ್ನು ಬಣಗಾರರು ಎನ್ನುತ್ತಾರೆ. ಬಹುತೇಕ ಕಮತಗಿಯ ರುಮಾಲದ ನೇಕಾರರು ಇಲಕಲ್ಲ,

ಗುಳೇದಗುಡ್ಡ, ಸೂಳೆಬಾವಿಯ ಕೇಲಮನೆಗಳಿಗೆ ಹೊತ್ತೊಯ್ದು ಬಣ್ಣ ಹಾಕಿಸಿಕೊಂಡು ಬರುತ್ತಾರೆ.

➢ **ರೇಷ್ಮೆ ಬಳಿ ತೋಡುವುದು** (Silk Yarn Winding) : "ರಾಟ್ಯಾಳಕ್ಕ ತೊಡಿ ಮ್ಯಾಲಿಟ್ಟು ಬಳಿ(ನೂಲು) ತೋಡುವ ಕೆಲಸ ಈಗೀಗ ಕಡಿಮೆಯಾಗಾಕ್ಹತ್ತೈತ್ರಿ. ರಾಟ್ಯಾಳಕ್ಕ ತೊಡಿ ಮ್ಯಾಲಿಟ್ಟು ಬಳಿ(ನೂಲು) ತೋಡುವಾಗ ತೊಡಿ ಚರ್ಮನs ಸುಕ್ಕುಗಟ್ಟಿ ಕಲೆ ಬೀಳುತ್ತಿತ್ತು. ಅದಕ್ಕೂ ಈಗ ವೈಂಡರ್ ಎಂಬ ಯಂತ್ರ ಬಂದೈತ್ರಿ!" ಈರಮ್ಮ ಮತ್ತು ಕಾಳಮ್ಮ ಕಡ್ಲಿಮಟ್ಟಿಯವರು ತಮ್ಮ ಹಿಂದಿನ ಅನುಭವವನ್ನು ಹಂಚಿಕೊಳ್ಳುತ್ತಾರೆ. ಡಬ್ಬಿ ವೈಂಡಿಂಗ್ ಮತ್ತು ರೀಲ್ ವೈಂಡಿಂಗ್ ಎಂಬ ಎರಡು ರೀತಿಯಲ್ಲಿ ನೂಲನ್ನು ಕೈಮಗ್ಗಕ್ಕೆ ರೇಷ್ಮೆ ಬಳಿ ತೋಡಬೇಕಾಗುತ್ತದೆ. ಹೆಚ್ಚು ಶ್ರಮವಹಿಸದ ವಯೋವೃದ್ಧರು ಹಾಗೂ ಮಕ್ಕಳು ಈ ಕೆಲಸವನ್ನು ನಿರ್ವಹಿಸುತ್ತಾರೆ.

➢ **ಟಾಣ ಹಾಕುವುದು** : ಟಾಣಾ ಹಾಕುವ ಕೆಲಸ ತುಂಬಾ ನೈಪುಣ್ಯತೆಯ ಕೆಲಸವಾಗಿದ್ದು, ಎಳೆಗುಂಟ ಸಾಗಲೇ ಬೇಕು ಕೈ ಹಾಗೂ ಕಣ್ಣುಗಳು! ಚಮಕಾ ಹಾಗೂ ರೇಷ್ಮೆ ನೂಲು ತುಂಬಾ ಮೃದುವಾಗಿದ್ದು ಟಾಣಾ ಹಾಕುವ ಕೆಲಸವೇ ಪ್ರಧಾನವಾಗಿರುತ್ತದೆ. ಅನುಭವವಿರುವ ಮಾತ್ರ ಈ ಕೆಲಸ ಮಾಡುವುದುಂಟು.

➢ **ಹಣಗಿ ಕೆಚ್ಚುವುದು** : ಕೊಯ್ದ ರುಮಾಲಿನ ನೂಲುಗಳಿಗೆ ಹೊಸದಾಗಿ ಎಳೆಗಳನ್ನು ಜೋಡಿಸುವ ಕ್ರಿಯೆಯೇ ಹಣಗಿ ಕೆಚ್ಚುವುದು. ಇದೂ ಕೂಡಾ ಅತ್ಯಂತ ಸೂಕ್ಷ್ಮವಾದ ಕೆಲಸವಾಗಿದ್ದು ತುಂಬಾ ತಾಳ್ಮೆ ಬೇಕಾಗುತ್ತದೆ. ಸಾಮಾನ್ಯವಾಗಿ ಕುಟುಂಬದವರೇ ಈ ಕೆಲಸ ನಿರ್ವಹಿಸುತ್ತಾರೆ.

➢ **ಕಂಡಕಿ ಸುತ್ತೋದು** : ಲಾಳಿಯ ಒಳಗೆ ದಾರ ಇರುವುದಕ್ಕೆ ಈ ಕಂಡಿಕೆಗಳೇ ಕಾರಣ. ಮೊದಲು ಕಟ್ಟಿಗೆಯ ಗಣಿ ಇದ್ದವು ಈಗೀಗ ಅವುಗಳ ಬದಲಾಗಿ ಪ್ಲಾಸ್ಟಿಕ್ ಹಾಗೂ ನೈಲಾನ್ ಗಣಿಗಳು ಬಂದಿವೆ. ಇವುಳನ್ನು ಚರಕಕ್ಕೆ ಜೋಡಿಸಿ ಡಬ್ಬಿಯಿಂದ ನೂಲನ್ನು ಸುತ್ತಿದಾಗ ಕಂಡಿಕೆಯಾಗುತ್ತದೆ. ರೀಲ್ ವೈಂಡಿಂಗ್ ಎಂಬ ಯಂತ್ರ ಬಂದಿದ್ದು ತಿರುವುವ ಕೆಲಸ ಹಗುರಾಗಿದೆ. ಹಳ್ಳಿಗಳಲ್ಲಿ ಬಹುಕಾಲ ವಿದ್ಯುತ್ ಇಲ್ಲದಿರುವ ಪ್ರಯುಕ್ತ ರಾಟೆ ಅಥವಾ ಚಕ್ರವೇ ಗತಿ. . ಸಾಮಾನ್ಯವಾಗಿ ಕುಟುಂಬದವರೇ ಈ ಕೆಲಸ ನಿರ್ವಹಿಸುತ್ತಾರೆ. "ಬಿಡುವಾದಾಗ ಖಾಲಿ ಕುಂತು ಟಿ.ವಿ. ನೋಡಿ ಟೈಮ್ ಪಾಸ್ ಮಾಡೂದಕ್ಕಿಂತ ಜಂತ್ರ ಹಿಡಿದು ಕಂಡಿಕಿ ಸುತ್ತೀದ್ರ ನಮ್ಮ ಕುಟುಂಬದ ಕಸಬು ಕಲ್ತಾಂಗೂ

ಆಗ್ತೈತ್ರಿ, ಮತ್ತs ಅವರಿಗೆ ಸಹಾಯ ಮಾಡಿದ್ಹಾಂಗೂ ಆಗ್ತೈತ್ರಿ” ಎಂದು ಹೆಮ್ಮೆಯಿಂದ ಹೇಳುತ್ತಾಳೆ ಅದೇ ಕುಟುಂಬದ ಬಿ.ಕಾಂ. ವಿದ್ಯಾರ್ಥಿನಿ ಕಾವ್ಯಾ.

➢ **ಕಸೂತಿ ಹಾಕುವುದು** : ಬೆಲೆಬಾಳುವ ರೇಷ್ಮೆ ರುಮಾಲುಗಳ ಮೇಲೆ ವಿವಿಧ ವಿನ್ಯಾಸದ ಚಿಕ್ಕ ಚಿಕ್ಕ ಕಸೂತಿ ಕಲೆಯನ್ನು ಹಾಕಿಸುವುದುಂಟು. ಗ್ರಾಹಕರಿಗೆ ಬೇಕಾದ ವಿನ್ಯಾಸದ ಕಸೂತಿ ಹಾಕಿಕೊಡುವ ಕೆಲಸಕ್ಕೂ ರುಮಾಲ ಉದ್ಯಮ ಇಂಬು ನೀಡಿದೆ. ವಿನ್ಯಾಸದ ಆಧಾರಿತ ದರ ನಿರ್ಧಾರವಾಗುತ್ತದೆ.

**ನೇಕಾರಿಕಾ ವಸ್ತುಗಳ ಬಗೆಗಿನ ನಂಬಿಕೆ :**ಎಲ್ಲ ಜನಾಂಗದ ನೇಕಾರರೂ ನೇಕಾರಿಕೆಯ ಪ್ರತಿಯೊಂದು ಹಂತದಲ್ಲಿಯೂ ಬಳಸಲ್ಪಡುವ ವಸ್ತುಗಳಲ್ಲೂ ದೇವರನ್ನು ಕಾಣುತ್ತಾರೆ! ಹೀಗಾಗಿ ಕೈಮಗ್ಗ, ಲಾಳಿ, ಚರಕ, ಎಲ್ಲದರಲ್ಲೂ ದೇವರನ್ನೇ ಕಾಣುವ ನೇಕಾರರು ಹೀಗಾಗಿ ಅಮವಾಸ್ಯೆ, ದೀಪಾವಳಿ ಪಾಡ್ಯಮಿಯ ಲಕ್ಷ್ಮೀ ಪೂಜೆ, ಮಹಾನವಮಿಯ ಆಯುಧ ಪೂಜೆಗಳನ್ನೂ ಮಾಡುತ್ತಾರೆ.

**ಕಮತಗಿ ಪಟಗ ತಯಾರಿಕೆಯಿಂದ ಆರೋಗ್ಯದ ಮೇಲಾಗುವ ದುಷ್ಪರಿಣಾಮಗಳು :**

ಧನಾತ್ಮಕ ಹಾಗೂ ಋಣಾತ್ಮಕ ಅಂಶಗಳಿಂದ ಈ ಪಟಗ ಉದ್ಯಮವೂ ಹೊರತಾಗಿಲ್ಲ! ಇಲ್ಲಿ ವಿವಿಧ ಉದ್ಯೋಗ ಮಾಡುವವರಿಗೆ ವಿವಿಧ ರೋಗ-ರುಜಿನಗಳು ಬರುವುದುಂಟು. ನೂಲಿಗೆ ರಾಸಾಯನಿಕ ಬಣ್ಣ ಹಾಕುವ ಬಣ್ಣದ ಬದುಕು ಕೂಡಾ ತುಂಬಾ ಅಪಾಯದಲ್ಲಿದೆ! ಕೈಗೆ ಗ್ಲೋವ್ಸ್ ಹಾಕಿಕೊಳ್ಳುತ್ತಾರಾದರೂ ಕಣ್ಣು ಮತ್ತು ಮೂಗಿಗೆ ಯಾವುದೇ ರಕ್ಷಾಕವಚ ಧರಿಸದಿರುವವರೇ ಹೆಚ್ಚು.

ನೇಕಾರರಿಗೆ, ಹೆಣಿಗೆ ಕೆಚ್ಚುವವರಿಗೆ, ಟಾಣ ಹಾಕುವವರಿಗೆ, ಕಂಡಿಕಿ ಸುತ್ತುವವರಿಗೆ ನೂಲಿನ ಗುಂಜು ಉಸಿರಾಟದಲ್ಲಿ ಸೇರುವ ಅಪಾಯದ ಜೊತೆ ಇವರಿಗೆ ಸಾಮಾನ್ಯವಾಗಿ ಬೆನ್ನು ಹಾಗೂ ಸೊಂಟ ನೋವು, ಕೈ ಕಾಲು ನೋವು, ಕಾವು, ಕಣ್ಣಿನ ದೃಷ್ಟಿ ಕ್ರಮೇಣ ಕಡಿಮೆಯಾಗುವ ಸಂದರ್ಭಗಳೇ ಹೆಚ್ಚು. ಆದರೆ.. ಬಹಳಷ್ಟು ಜನ ದುಷ್ಪರಿಣಾಮಗಳೇನೂ ಇಲ್ಲ ಬದಲಾಗಿ ವ್ಯಾಯಾಮ ಆಗುವುದಾಗಿ ಅಭಿಪ್ರಾಯ ವ್ಯಕ್ತಪಡಿಸಿದರು!

ಒಟ್ಟಿನಲ್ಲಿ ಪಟಗ ಅಥವಾ ರುಮಾಲು ಸುತ್ತಿಕೊಳ್ಳುವವರ ಸಂಖ್ಯೆ ತೀರಾ ಕ್ಷೀಣಿಸಿದೆ. ಕೆಲವರು ವಿಶೇಷ ಸಂದರ್ಭಗಳಲ್ಲಿ ಸುತ್ತಿಕೊಳ್ಳುವ ಸಂಪ್ರದಾಯವನ್ನು ಮುಂದುವರೆಸಿಕೊಂಡು ಹೊರಟಿದ್ದಾರೆ. ಆಧುನಿಕತೆಯ ಗಾಳಿ ಹಳ್ಳಿಯ ರೈತರಿಗೂ

ಸೋಕಿದೆ. ಈ ಪರಿಸರದಲ್ಲಿ ಮುದುಕರು ಹಾಗೂ ಗ್ರಾಮೀಣ ಭಾಗದ ಮುಖಂಡರು ಇವುಗಳನ್ನು ಸುತ್ತಿಕೊಳ್ಳುವ ಸಂಪ್ರದಾಯವಿಟ್ಟುಕೊಂಡಿದ್ದಾರೆ. ಇನ್ನೂ ಕೆಲಕಾಲ ಗತಿಸಿದಂತೆ ಪಟಗ ಮತ್ತು ರುಮಾಲುಗಳೂ ಗತಿಸುವುದರಲ್ಲಿ ಸಂದೇಹವಿಲ್ಲ!

**೩.೫.೪ ಅಮೀನಗಡ ಕರದಂಟು ತಯಾರಿಕೆ :**

'ಯಾಂವ ಮಾಡ್ಯಾನ ಬಂಟ..

ತಿಂದಷ್ಟು ರುಚಿ ಉಂಟ..

ಅಮೀನಗಡ ಕರದಂಟ...'

ಉತ್ತರ ಕರ್ನಾಟಕದ ಈ ಹಾಡಿನ ನಂಟು, ಅಮೀನಗಡದ ಕರದಂಟು! ಹೌದು. ಕರ್ನಾಟಕದಲ್ಲಿ ಕೆಲವು ಊರುಗಳು ಸ್ವಾದಿಷ್ಟಕರ ತಿಂಡಿ-ತಿನಿಸುಗಳಿಂದಲೇ ಪ್ರಸಿದ್ಧಿ ಪಡೆದಿವೆ! ಮೈಸೂರಿನ ಮೈಸೂರು ಪಾಕ ಹಾಗೂ ಮಸಾಲೆ ದೋಸೆ, ದಾವಣಗೆರೆಯ ಬೆಣ್ಣೆದೋಸೆ, ಧಾರವಾಡದ ಪೇಡ(ಠಾಕೂರ ಪೇಡಾ ಮತ್ತು ಮಿಶ್ರಾ ಪೇಡಾ), ಸವಣೂರಿನ ಶಿವಲಾಲ ಖಾರ, ಕೊಪ್ಪಳದ ಮಂಡಾಳು(ಮಂಡಕ್ಕಿ), ಬೆಳಗಾವಿಯ ಕುಂದಾ, ಮದ್ದೂರು ವಡೆ, ಗೋಕಾಕ ಕರದಂಟು; ಇವುಗಳಷ್ಟೇ ಪ್ರಸಿದ್ಧವಾಗಿರುವ ಊರು ಅಮೀನಗಡ. ಅದೂ ಕರದಂಟಿನಿಂದ!

**ಅಮೀನಗಡ ಕರದಂಟು ತಯಾರಕರ ಹಿನ್ನೆಲೆ ಮತ್ತು ಮೂಲ :**

ಕರ್ನಾಟಕದಲ್ಲಿ ಎರಡು ಊರುಗಳು ಕರದಂಟಿಗೆ ಪ್ರಸಿದ್ಧವಾಗಿವೆ. ಗೋಕಾಕನ್ನು ಬಿಟ್ಟರೆ ಬಾಗಲಕೋಟೆ ಜಿಲ್ಲೆಯ ಅಮೀನಗಡದಲ್ಲಿ ತಯಾರಾಗುವ ಸುಪ್ರಸಿದ್ಧ ಕರದಂಟು ತನ್ನ ವಿಶಿಷ್ಟ ಸುವಾಸನೆ ಹಾಗೂ ವಿಶೇಷ ಸ್ವಾದದೊಂದಿಗೆ ಸಾಗುತ್ತಿದೆ ಅದರ ಸಿಹಿ ಪಯಣ; ದೇಶ ವಿದೇಶಕ್ಕೂ!!

**ಅಮೀನಗಡ ಗ್ರಾಮದ ಮಾಹಿತಿ :**

**ಅಮೀನಗಡ** ಎಂಬ ಗ್ರಾಮವು ಇದೀಗ ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನಲ್ಲಿದೆ. ಕುಷ್ಟಗಿಯಿಂದ ರಾಷ್ಟ್ರೀಯ ಹೆದ್ದಾರಿ-೫೦ರಲ್ಲಿ ೩೪ಕಿ.ಮೀ. ಪಯಣಿಸಿದರೆ ಸಿಕ್ಕುವ ಹುನಗುಂದ ಪಟ್ಟಣದಿಂದ ಬಾಗಲಕೋಟೆಯ ಮಾರ್ಗವಾಗಿ ೧೭ಕಿ.ಮೀ. ಸಾಗಿದರೆ ಸಿಕ್ಕುವ ನೇಕಾರರು ಹಾಗೂ ಕರದಂಟು ತಯಾರಕರ ಊರು.

೨೦೧೧ರ ಜನಗಣತಿಯ ಪ್ರಕಾರ ೧೫೦೭೩ ಜನಸಂಖ್ಯೆಯನ್ನು ಹೊಂದಿರುವ ಈ ಗ್ರಾಮದಲ್ಲಿ ೭೮೭೬ ಪುರುಷರು ಹಾಗೂ ೭೧೯೬ ಸ್ತ್ರೀಯರಿದ್ದಾರೆ. ಮೂಲತಃ ೬೫% ರಷ್ಟು ನೇಕಾರಿಕೆ ಹಾಗೂ ಕರದಂಟು ತಯಾರಕರ ಊರು. ಇನ್ನೂ ೩೫% ರಷ್ಟು ಕೃಷಿಕರು. ಇಲ್ಲಿ ೮೨.೯೮% ರಷ್ಟು ಹಿಂದೂಗಳು, ೧೬.೮೪%ರಷ್ಟು ಮುಸ್ಲಿಂರು, ೦.೧೦% ಕ್ರೈಸ್ತರು,೦.೦೧% ಸಿಖ್ಖರು ಹಾಗೂ ೦.೦೩%ರಷ್ಟು ಜೈನರು ವಾಸವಾಗಿರುವ ಊರು. ಶಿವಸಿಂಪಿಗರು, ಮುಸ್ಲಿಂರು, ಕುರುಬರು, ಬಣಜಿಗರು ಸೇರಿದಂತೆ ಎಲ್ಲಾ ಜಾತಿಯ ಜನರು ಅಮೀನಗಡದ ಕರದಂಟು ತಯಾರಿಸುತ್ತಾರೆ. ಈ ಪುಟ್ಟ ಊರಲ್ಲಿ ಈಗಂತೂ ೨೨ ಕರದಂಟಿನ ಅಂಗಡಿಗಳು ರಾರಾಜಿಸುತ್ತಿವೆ, ಗ್ರಾಹಕರನ್ನು ಕೈಬೀಸಿ ಕರೆಯುತ್ತಿವೆ. ಕರದಂಟು ತಯಾರಕರ ಮೂಲವನ್ನು ಹುಡುಕುವಾಗ ಅವರೆಲ್ಲರೂ ಇದೇ ಊರಿನವರೆಂಬುದು ಸ್ಪಷ್ಟವಾಗುತ್ತದೆ. ಇಲ್ಲಿ ಇಲಕಲ್ಲ ಸೀರೆಗಳನ್ನೇ ಹೆಚ್ಚಾಗಿ ನೇಯುತ್ತಿದ್ದರೂ ಪ್ರಸಿದ್ಧಿ ಪಡೆದದ್ದು ಮಾತ್ರ **'ಕರದಂಟಿನ ಊರು'** ಎಂದು! 'ಅಮೀನಗಡದ ಕರದಂಟು' ಎಂದು ಕರೆಯಿಸಿಕೊಳ್ಳುವಷ್ಟು ಸ್ಥಾನ ಗಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ!

**ಅಮೀನಗಡ ಸ್ಥಳನಾಮ ವಿವೇಚನೆ :**

ಅಮೀನಗಡ ಎಂಬ ಹೆಸರಿನ ಪದನಿಷ್ಪತ್ತಿಯ ಬಗ್ಗೆ ಯಾವ ಐತಿಹಾಸಿಕ ನಿಖರವಾದ ದಾಖಲೆಗಳಿಲ್ಲ. "ಈ ಊರಿಗೆ ಅಮೀನಗಡ ಅಂತಾ ಹ್ಯಾಂಗ ಹೆಸರು ಬಂತಂತ ಗೊತ್ತಿಲ್ರಿ, ಆದ್ರ... ಈ ಊರ ಪಕ್ಕದಲ್ಲಿರುವ ಕಿಲ್ಲಾ (ದುರ್ಗ ಅಥವಾ ಕೋಟೆ)ವನ್ನು ಅಮೀನ ಎಂಬ ಅರಸ ಕಟ್ಟಿಸಿದ್ದರಿಂದ ಈ ಊರು 'ಅಮೀನಗಡ' ಅಂತಾ ಕರೆಯಿಸಿಕೊಂಡಿರ್ಬೇಕ್ರಿ" ಎಂದು ಅಮೀನಗಡದ ಆನಂದ ಅಭಿಪ್ರಾಯಪಡುತ್ತಾರೆ.

**ಅಮೀನಗಡ ಕರದಂಟಿನ ಮೂಲ ಹಾಗೂ ವೈಶಿಷ್ಟತೆ :**

ಮರದಲ್ಲಿ ನೈಸರ್ಗಿಕವಾಗಿ ಸಿಗುವ 'ಅಂಟು' ಜೀವಸತ್ವಗಳ ಖಜಾನೆ ಇದ್ದಂತೆ. ಈ ಸರಳವಾದ ಅಂಟನ್ನೇ ತುಪ್ಪದಲ್ಲಿ ಕರಿದು ಬಳಸುವುದರಿಂದ ಇದಕ್ಕೆ 'ಕರದಂಟು' ಎನ್ನುವ ಹೆಸರು ಬಂದಿದೆ. ಮೊದಲು ಹಲಗೆ ಅಂಟು ಎಂಬ ಸಿಹಿಖಾದ್ಯವನ್ನು ತಯಾರಿಸಲಾಗುತ್ತಿತ್ತು. ಈ ಅಂಟಿಗೆ(ಸಿಹಿ ಖಾದ್ಯ)ಕ್ಕೆ ಜಾಳಿಗಿಡದ ಅಂಟನ್ನು ತುಪ್ಪದಲ್ಲಿ ಹುರಿದು ಮಾಡತೊಡಗಿದಾಗ ಅದರ ಮೂಲ ಹೆಸರು ಮಾಯವಾಗಿ ಕರಿದ+ಅಂಟು=ಕರಿದಂಟು → ಕರದಂಟು ಎಂದು ಕರೆಯಲ್ಪಟ್ಟಿತು.

ತುಪ್ಪ, ಜಾಲಿ ಅಂಟು ಅಥವಾ ಅಚ್ಚುಮರದ ಅಂಟು, ಉತ್ತತ್ತಿ, ಬೆಲ್ಲ ಅಥವಾ ಸಕ್ಕರೆ, ಕೊಬ್ಬರಿ, ಒಣ ಅಂಜೂರ, ಅಗಸೆಬೀಜ, ವಾಲ್ನಟ್(ಆಕ್ರೋಡ), ಏಲಕ್ಕಿ, ಆಳವಿ, ಗೋಡಂಬಿ, ಬದಾಮಿ, ಪಿಸ್ತಾ, ಒಣದ್ರಾಕ್ಷಿ, ಕೇ(ಗೇ)ರು ಬೀಜ, ಗಸಗಸೆ, ಜಾಯಿಕಾಯಿ, ಮಣಕ, ಏಲಕ್ಕಿಗಳಂತಹ ಪೌಷ್ಠಿಕಾಂಶಗಳಿರುವ ಪದಾರ್ಥಗಳಿಂದ ತಯಾರಿಸಲಾಗುತ್ತಿದೆ. ಹೀಗಿರುವುದರಿಂದ ಮೂರು ತಿಂಗಳಿನಿಂದ ಆರು ತಂಗಳವರೆಗೆ ಇದು ಕೆಡುವುದಿಲ್ಲ! ಕುಸ್ತಿ ಫೈಲ್ವಾನರು, ಗರ್ಭಿಣಿಯರು, ಬಾಣಂತಿಯರು ಹಾಗೂ ಮಕ್ಕಳಿಗೆ ಇದು ಹೇಳಿ ಮಾಡಿಸಿದ ಸಿಹಿ ತಿನಿಸು.

**ಅಮೀನಗಡ ಕರದಂಟಿನ ಉಪಯೋಗಗಳು :**

ಕರದಂಟಿನಲ್ಲಿರುವ ಪೋಷಕಾಂಶಗಳ ಬಗ್ಗೆ ಸಂಬಂಧಿಸಿದ ವಿದ್ವಾಂಸರಿಂದ ಮಾಹಿತಿಯನ್ನು ಸಂಗ್ರಹಿಸಿಟ್ಟುಕೊಂಡಿರುವ ವಿಜಯಾ ಕರದಂಟು ಅಂಗಡಿಗಳ ಮಾಲೀಕರಾದ ಸಂತೋಷ ಐಹೊಳ್ಳಿಯವರು ನೀಡಿರುವ ಅಂಶಗಳು ಹೀಗಿವೆ.

**ಕರದಂಟಿನಲ್ಲಿರುವ ಪೋಷಕಾಂಶಗಳು(NUTRIENTS OF KARADANTU) :**

ELEMENTS STUFFS

- **Protiens(amino acids)** - Glutamic Acid, Lucien, Isoleucine, Alanine,
- Phenylanine, Tyrosine, Arginine, Glycine,
- Histidine, Lysine, Cysteine, Methionine,
- Threonine, Valine, Tryptophan, Aspartic Acid,
- Proline, Serine.
- **Fats** - HDL, Omega 3 & 6 fatty acids, Oleic,
- Palmitoleic acids.
- **Vitamins** - Vitamin A, B complex like thiamine B1,
- RiboflavinB2, NiacinB3, Pantothenic acidB5,
- PyridoxineB6, E&K, Foliate.
- **Electrolytes & Minarals** - Rich iron, Calcium, Phosphorus, Potassium,

- Selenium, Copper, Magnesium, Zinc,
- Tocopherol, Axerophtol.
- **Antioxidants** - Zea-xanthin, Ellagicacid, Carotenes,
- Resveratrol, Lutein, Cryptoxanthin

**ಆರೋಗ್ಯದ ಗಣಿ :**

'ಒಂದು ಸೇಬು ಒಬ್ಬ ವೈದ್ಯನಿಗೆ ಸಮ' ಹೇಗೋ ಹಾಗೆಯೇ ಅಮೀನಗಡ ಕರದಂಟೂ ಕೂಡ! ವೈವಿಧ್ಯಮಯ ಪೌಷ್ಟಿಕಾಂಶಗಳಿಂದ ತಯಾರಾದ ಈ ಕರದಂಟು ದೇಹ ಪುಷ್ಟಿಗೆ ಯೋಗ್ಯವಾದ ಖಾದ್ಯ. ಬಾಯಲ್ಲಿ ನೀರೂರಿಸುವಷ್ಟೇ ಅಲ್ಲ, ಪೌಷ್ಟಿಕತೆಯ ಪರಮಾವಧಿಯಿಂದ ಕೂಡಿದೆ. ಇದರಲ್ಲಿರುವ ಪ್ರೋಟೀನ್ ದೇಹದ ಬೆಳವಣಿಗೆ, ಜೀವಕೋಶಗಳ ವೃದ್ಧಿ, ಗಾಯವನ್ನು ಬೇಗನೇ ವಾಸಿಮಾಡುತ್ತದೆ. ಕ್ಯಾಲ್ಸಿಯಂ ಮತ್ತು ಪಾಸ್ಪರಸ್ ಇರುವುದರಿಂದ ಋತುಮತಿಯಾದ ಹೆಣ್ಮಕ್ಕಳು, ಗರ್ಭಿಣಿಯರು, ವಯಸ್ಸಾದವರು ಹಾಗೂ ಮಕ್ಕಳ ಮೂಳೆಯನ್ನು ಗಟ್ಟಿಗೊಳಿಸುವುದಲ್ಲದೇ ಬೆಳೆಯಲೂ ಸಹಕಾರಿ. ಮೂಳೆಯ ಸವೆತವನ್ನು ತಡೆಗಟ್ಟುವ ಗುಣವೂ ಇದೆ. ಮಹಿಳೆಯರ ಸ್ತನ ಕ್ಯಾನ್ಸರ್ ಹಾಗೂ ಪ್ರಾಸ್ಟೇಟ್(ಪುರುಷರ ಜನನೇಂದ್ರಿಯಕ್ಕೆ ಸಂಬಂಧಿಸಿದ ಗ್ರಂಥಿ) ಕ್ಯಾನ್ಸರ್ ತಡೆಗಟ್ಟುತ್ತದೆ. ಹಲ್ಲುಗಳ ರಕ್ಷಕನಂತೆ ವರ್ತಿಸುತ್ತದೆ. ಸ್ನಾಯುಗಳಿಗೆ ಉತ್ತೇಜನ ನೀಡುತ್ತದೆ. ಕೂದಲು ಮತ್ತು ಚರ್ಮಕಾಂತಿಗೂ ಸಹಕಾರಿಯಾಗಿದೆ.

**ಅಮೀನಗಡದ ಕರದಂಟಿನ ಮೂಲ ತಯಾರಕರು :**

ಅಮೀನಗಡವನ್ನು ಪ್ರವೇಶಿಸಿದರೆ ಎಲ್ಲಿ ನೋಡಿದಲ್ಲಿ 'ಕರದಂಟು' ಎಂಬ ಅಕ್ಷರಗಳೇ ಆಕರ್ಷಿಸುತ್ತವೆ. ಅದರಲ್ಲೂ 'ವಿಜಯಾ ಕರದಂಟು-ಮೂಲ ತಯಾರಕರು(೧೯೦೭ನೇ ಇಸ್ವಿಯಿಂದ)'; 'ವಿಶಾಲ್ ಸ್ವೀಟ್ಸ್-ಪ್ರಪ್ರಥಮ ಕರದಂಟು ತಯಾರಕರು'; 'ಖಾದ್ರಿ ಸ್ವೀಟ್ ಮಾರ್ಟ-ಒರಿಜಿನಲ್ ಮೂಲ ತಯಾರಕರು(೧೩೩ ವರ್ಷದಿಂದ)'; ಉಳಿದಂತೆ 'ನಂ-೧ ಸುಪ್ರಸಿದ್ಧ ಕರದಂಟು' ಎಂಬ ಬಣ್ಣ ಬಣ್ಣದ ಹತ್ತಾರು ಬೋರ್ಡುಗಳು ಸ್ವಾಗತಿಸುತ್ತವೆ! ಹಾಗಾದರೆ....ಅಮೀನಗಡದ ಕರದಂಟಿನ ಮೂಲ ತಯಾರಕರು ಯಾರು? ಎಂಬ ಪ್ರಶ್ನೆಯ ಸುತ್ತ ಅನುಮಾನದ ಹುತ್ತ ಬೆಳೆಯುತ್ತದೆ! ಕುತೂಹಲ ಗರಿಗೆದರುತ್ತದೆ!!

"ಐಹೊಳ್ಳಿ ಮನೆತನದವರs ಮೂಲ ತಯಾರಕರು ಅನ್ನೋದನ್ನ ನಮ್ಮಪ್ಪ ಹೇಳ್ತಿದ್ದ. ನಾವೆಲ್ಲ ಚಿಕ್ಕೋರಿದ್ದಾಗಿನಿಂದ ಕೇಳೀವಿ. ಬಹುಶಃ ಅವರs ಮೂಲ ತಯಾರಕರಿದ್ರೂ ಇರಬಹುದು. ರುಚಿ ಮಾತ್ರ ಹಾಂಗs ಉಳಿದೈತ್ರಿ. ಉಳಿದ ಅಂಗಡ್ಯಾಗೂ ಸ್ವಲ್ಪ ಹೆಚ್ಚೂ ಕಮ್ಮೀ ಇದs ರುಚಿ ಇರತೈತಿ." ಎಂಬುದು ಐಹೊಳಿಯ ಪಕ್ಕದೂರು ಚಿಲಾಪುರದ ಸಂಗನಗೌಡ ಗೌಡರ್‌ರವರ ಅಭಿಪ್ರಾಯ. ಇದೇ ಇಲ್ಲಿನ ಬಹುತೇಕ ಜನರ ಅಭಿಪ್ರಾಯವೂ ಹೌದು.

ಅಮೀನಗಡದ ದಿ॥ ರಾಚಪ್ಪ ಐಹೊಳ್ಳಿ ಮತ್ತವರ ಗೆಳೆಯರು ಗರಡಿಮನೆಗಳಿಗೆ ಹೋಗುತ್ತಿದ್ದರು. ಕುಸ್ತಿಯ ಕಸರತ್ತು ನಡೆಸಿದ ಬಳಿಕ ಆ ಕುಸ್ತಿಪಟುಗಳಿಗೆ ಪೌಷ್ಠಿಕಾಂಶದ ಆಹಾರ, ತಿನಿಸುಗಳ ಅಗತ್ಯವಿರುತ್ತಿತ್ತು. ಕೊಬ್ಬರಿ, ಬೆಲ್ಲ, ಬದಾಮು, ಗೋಡಂಬಿ ಇತ್ಯಾದಿ ತಿನ್ನುತ್ತಿದ್ದರು. ಆಗ 'ಹಲಗೆ ಅಂಟು' ಮಾಡುತ್ತಿದ್ದ ರಾಚಪ್ಪ ಅದರಲ್ಲಿಯೇ ಕುಸ್ತಿಪಟುಗಳು ತನ್ನುತ್ತಿದ್ದ ಪೌಷ್ಠಿಕಾಂಶದ ಪದಾರ್ಥಗಳನ್ನೇ ಹಾಕಿ ಹಲಗೆ ಅಂಟು ತಯಾರಿಸಿದರು!

ಅವರ ಮಗ ದಿ॥ಸಾವಳಿಗೆಪ್ಪ ಐಹೊಳ್ಳಿ ಎನ್ನುವವರು ೧೯೦೭ರಲ್ಲಿಯೇ ಈ ವಿಶಿಷ್ಟ ಹಲಗೆ ಅಂಟಿಗೆ ಸ್ಥಳೀಯವಾಗಿ ಸಿಕ್ಕುತ್ತಿದ್ದ ಜಾಲಿಗಿಡದ ಅಂಟನ್ನೇ ತುಪ್ಪದಲ್ಲಿ ಕ(ಹು)ರಿದು, ಸಹ ಪದಾರ್ಥಗಳಾದ ಉತ್ತತ್ತಿ, ಬೆಲ್ಲ ಅಥವಾ ಸಕ್ಕರೆ, ಕೊಬ್ಬರಿ, ಒಣ ಅಂಜೂರ, ವಾಲ್ನಟ್(ಆಕ್ರೋಡ), ಏಲಕ್ಕಿ, ಆಳವಿ, ಗೋಡಂಬಿ, ಬದಾಮಿ, ಪಿಸ್ತಾ, ಒಣದ್ರಾಕ್ಷಿ, ಕೇ(ಗೇ)ರು ಬೀಜ, ಗಸಗಸೆ, ಜಾಯಿಕಾಯಿ, ಮಣಕ, ಏಲಕ್ಕಿಗಳಂತಹ ಪೌಷ್ಠಿಕಾಂಶಗಳಿರುವ ಪದಾರ್ಥಗಳಿಂದ ಹಲಗೆ ಅಂಟನ್ನು ತಯಾರಿಸಿದರು. ಆಗಿನಿಂದ ಹಲಗೆ ಅಂಟು ಎಂಬ ಮೂಲ ಹೆಸರು ಮಾಯವಾಗಿ ಕರಿದ+ಅಂಟು=ಕರಿದಂಟು → ಕರದಂಟು ಎಂದು ಕರೆಯಲ್ಪಟ್ಟಿತು. ಕ್ರಮೇಣ ಇದು ಸುತ್ತಮುತ್ತಲಿನ ಪ್ರದೇಶದಲ್ಲಿ ಪ್ರಸಿದ್ಧಿ ಪಡೆಯಿತು.

"ಅಮೀನಗಡ ಕರದಂಟಿನ ಮೂಲ ತಯಾರಕರು ದಿ॥ಸಾವಳಿಗೆಪ್ಪ ಐಹೊಳ್ಳಿ ಅನ್ನೋದನ್ನ ಈ ಊರಿನ ಜನ ಮತ್ತ... ಸುತ್ತಮುತ್ತಲಿನ ಜನ ನೂರು ವರ್ಷ ಆದ್ರೂ ಮರೆತಿಲ್ಲ. ಇವತ್ತಿಗೂ ನೆನಪಿಟ್ಕೊಂಡು ಹೆಮ್ಮೆಯಿಂದ ಹೇಳುತ್ತಾರೆ. ಹಾಗಂತ ಹೇಳಿನೇ ನಮ್ಮ ಅಂಗಡಿಗಳಿಗೇ ಗಿರಾಕಿನ ಕಳಿಸ್ತಾರೆ. ಅವರ ಈ ಋಣ ನಾ ಹ್ಯಾಂಗ ಮರೀಲಿ ಸರs?" ಎಂಬುದು ದಿ॥ಸಾವಳಿಗೆಪ್ಪ ಐಹೊಳ್ಳಿಯವರ ಮೊಮ್ಮಗ ಹಾಗೂ ವಿಜಯಾ ಕರದಂಟಿನ ಮಾಲೀಕ ಸಂತೋಷ ಐಹೊಳ್ಳಿಯವರ ಹೆಮ್ಮೆಯ ನುಡಿ.

ಇದೀಗ ಶತ ವಸಂತೋತ್ಸವವನ್ನು ಆಚರಿಸಿಕೊಂಡರೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವುದು ಹೆಮ್ಮೆಯ ಸಂಗತಿ. ಹೊಸ ರೂಪ ಹೊಂದಿದರೂ ಹಳೆಯ ಮೂಲ ರುಚಿಯೊಂದಿಗೆ ಇನ್ನೂ ಛಾಪು ಉಳಿಸಿಕೊಂಡಿದೆ.

"ನಮ್ಮ ಅಜ್ಜ ಸೈಯದ್ ಖಾದಿರ್ ಪಾಷಾ ಅವರ ಕಾಲದಿಂದ್ಲೂ ಅಂದ್ರ ೧೩೩ ವರ್ಷದಿಂದ್ಲೂ ನಾವ್ ಈ ಕರದಂಟು ಮಾಡ್ಕೋಂತ ಬಂದೀವಿ. ಅಮೀನಗಡದ ನಂಬರ್ ಒನ್ ಸುಪ್ರಸಿದ್ಧ ಒರಿಜಿನಲ್ ತುಪ್ಪದ ಚಿಕ್ಕಿ ಬೆಲ್ಲದ ಕರದಂಟ ಬಿಟ್ರ.. ನಮ್ ಅಂಗಡ್ಯಾಗ ಬ್ಯಾರ್‍ಯಾ ಏನೂ ಸಿಗೂದಿಲ್ರಿ. ಇಂಟರ್‌ನೆಟ್, ಫೇಸ್‌ಬುಕ್ ಮತ್ತ... ಜಾಹೀರಾತು ಕಡೀಗೆ ಲಕ್ಷ್ಯ ವಹಿಸಿಲ್ರಿ" ಎಂದು ಖಾದ್ರಿ ಸ್ವೀಟ್ ಮಾರ್ಟ್‌ನ ಮಾಲೀಕ ಸೈಯದ್ ಮುಜಂ ಹುಸೇನ ಕರದಂಟಿನ ನಂಟಿನ ಗಂಟನ್ನು ಬಿಚ್ಚಿಡುತ್ತಾರೆ.

"ಗೋಕಾಕ ಕರದಂಟಿಗೆ ಮೂಲ ಪ್ರೇರಣೆಯೇ ನಮ್ಮ ಅಮೀನಗಡದ ಕರದಂಟು. ನಮ್ಮಲ್ಲಿ ತರಬೇತಿ ತಗೊಂಡ್ಹೋಗಿಂದ್ಕ ಅಲ್ಲಿ ಶುರೂ ಮಾಡಿದ್ರು. ಗೋಕಾಕ ಫಾಲ್ಸ್ ನೋಡೋಕೆ ಬರುವಂಥ ಪ್ರವಾಸಿಗರಿಂದ ಆ ಕರದಂಟಿಗೆ ಪಾಪುಲಾರಿಟಿ ಸಿಕ್ತು. ಅಷ್ಟೇ ಅಲ್ಲ ಅವರ ಬ್ರಾಂಡಿಂಗ್ ಚೆನ್ನಾಗಿದೆ, ಪ್ಯಾಕಿಂಗ್ ವ್ಯವಸ್ಥೆ ತುಂಬಾನೇ ಆಕರ್ಷಕವಾಗಿದೆ. ನಮ್ಮೂರ ಕರದಂಟಿನ ಸ್ವೀಟ್ ಜರ್ನಿ ಈಗೀಗ ದೇಶ ವಿದೇಶಕ್ಕ ಸಾಗಿದೆ." ತಮ್ಮೂರಿನ ಕರದಂಟಿನ ಬಗ್ಗೆ ತುಂಬಾ ಅಭಿಮಾನದಿಂದ ಹೇಳುತ್ತಾರೆ ಅಮೀನಗಡದ ಮೂಲ ನಿವಾಸಿ, ಬೆಂಗಳೂರಿನ ಜರ್ನಲಿಸ್ಟ್ ಮಂಜುನಾಥ ಬಂಡಿ.

**ಕರದಂಟು ತಯಾರಿಕೆಗೆ ಬೇಕಾಗುವ ಸಾಮಗ್ರಿಗಳು :**

- ಖರ್ಜೂರ – ಒಂದು ಬಟ್ಟಲು
- ಬಾದಾಮಿ – ಒಂದು ಬಟ್ಟಲು
- ಗೋಡಂಬಿ – ಒಂದು ಬಟ್ಟಲು
- ಒಣದ್ರಾಕ್ಷಿ – ಒಂದು ಬಟ್ಟಲು
- ಒಣ ಕೊಬ್ಬರಿ ತುರಿ – ಒಂದು ಬಟ್ಟಲು
- ಗಸಗಸೆ – ಎರಡು ದೊಡ್ಡ ಚಮಚ
- ಜಾಲಿ ಅಂಟು – ಕಾಲು ಬಟ್ಟಲು

- ಬೆಲ್ಲ/ಸಕ್ಕರೆ – ರುಚಿಗೆ ತಕ್ಕಂತೆ
- ತುಪ್ಪ – ಅರ್ಧ ಬಟ್ಟಲು
- ಏಲಕ್ಕಿಪುಡಿ – ಒಂದು ಚಮಚ
- ಪಿಸ್ತಾ – ಸ್ವಲ್ಪ
- ಆಳವಿ – ಸ್ವಲ್ಪ
- ಜಾಯಿಕಾಯಿ – ಸ್ವಲ್ಪ
- ಉತ್ತತ್ತಿ – ಒಂದು ಬಟ್ಟಲು
- ಒಣ ಅಂಜೂರ – ಒಂದು ಬಟ್ಟಲು
- ವಾಲ್ನಟ್ – ಸ್ವಲ್ಪ ಇತ್ಯಾದಿ...

**ಕರದಂಟು ತಯಾರಿಕಾ ವಿಧಾನ :**

ಖರ್ಜೂರ, ಬಾದಾಮಿ, ಗೋಡಂಬಿಗಳನ್ನು ಚೂರು ಮಾಡಿಟ್ಟುಕೊಂಡು ತುಪ್ಪದಲ್ಲಿ ಹದವಾಗಿ ಹುರಿದಿಟ್ಟುಕೊಂಡಿರಬೇಕು. ಜಾಲಿ ಅಂಟನ್ನು ಪುಡಿ ಮಾಡಿಕೊಂಡು ತುಪ್ಪದಲ್ಲಿ ಹದವಾಗಿ ಹುರಿದಿಟ್ಟುಕೊಂಡಿರಬೇಕು. ಬೆಲ್ಲವನ್ನೂ ಪುಡಿ ಮಾಡಿಟ್ಟುಕೊಂಡಿರಬೇಕು. ಗಸಗಸೆ, ಒಣ ದ್ರಾಕ್ಷಿ, ಒಣ ಕೊಬ್ಬರಿ ತುರಿ(ಗಿಟಗ)ಯನ್ನೂ ತುಪ್ಪದಲ್ಲಿ ಹದವಾಗಿ ಹುರಿದಿಟ್ಟುಕೊಂಡಿರಬೇಕು. ತುಂಬಾ ಹುರಿಯದಂತೆ, ಸೀದು ಹೋಗದಂತೆ ಹುರಿಯುವಾಗ ಸದಾ ತಿರುಗಿಸುತ್ತಾ ಇರಬೇಕು. ಎಲ್ಲವನ್ನೂ ಬೇರೆ ಬೇರೆಯಾಗಿ ಹುರಿದುಕೊಂಡ ನಂತರ ಬೆಲ್ಲವನ್ನು ಪಾತ್ರೆಗೆ ಹಾಕಿ ಬಿಸಿ ಮಾಡುತ್ತಾ ಪಾಕವನ್ನು ತಯಾರಿಸಬೇಕು. ಅದು ಕರಗಿ ಒಂದೆಳೆ ಪಾಕದ ಹದಕ್ಕೆ ಬಂದಾಗ ಅದಕ್ಕೊಂದಷ್ಟು ತುಪ್ಪವನ್ನೂ ಸುರಿಯಬೇಕು. ತಕ್ಷಣವೇ ಹುರಿದಿಟ್ಟುಕೊಂಡಿರುವ ಎಲ್ಲಾ ಸಾಮಗ್ರಿಗಳನ್ನೂ ಚೆನ್ನಾಗಿ ಪಾಕದಲ್ಲಿ ಬೆರೆಸಬೇಕು. ನಂತರ ತಳಕ್ಕೆ ತುಪ್ಪ ಸವರಿದ ಟ್ರೇಗೆ ಸುರಿಯಬೇಕು. ಪ್ಲಾಸ್ಟಿಕ್ ಹಾಳೆ ಹೊದಿಸಿ ಸಮನಾಗಿ ಪ್ರೆಸ್ ಮಾಡಬೇಕು. ಪೂರ್ತಿಯಾಗಿ ತಣ್ಣಗಾದ ಮೇಲೆ ಅದನ್ನು ಬೇಕಾದ ಆಕಾರದಲ್ಲಿ ಕತ್ತರಿಸಬಹುದು.

**ಕರದಂಟು ತಯಾರಿಸುವಾಗ ಗಮನಿಸಬೇಕಾದ ಅಂಶಗಳು :**

- ಎಲ್ಲಾ ಸಾಮಗ್ರಿಗಳನ್ನೂ ತಾಳ್ಮೆಯಿಂದ ಹದವಾಗಿ ಹಾಗೂ ಪ್ರತ್ಯೇಕವಾಗಿ ಹುರಿಯಬೇಕು.
- ಬೆಲ್ಲ ಅಥವಾ ಸಕ್ಕರೆಯ ಪಾಕದ ಹದವನ್ನು ಪರೀಕ್ಷಿಸಲು ಒಂದೆರಡು ಹನಿ ಪಾಕವನ್ನು ನೀರಿನಲ್ಲಿ ಹಾಕಿದರೆ ಅದು ತೇಲಬೇಕು ಒಂದು ವೇಳೆ ನೀರಿನಲ್ಲಿ ಕರಗಿದರೆ ಇನ್ನೂ ಸ್ವಲ್ಪ ಹೊತ್ತು ಬಿಡಬೇಕು.
- ಕೊಬ್ಬರಿ ತುರಿಯನ್ನು ಅಂಗಡಿಯಲ್ಲಿ ಸಿಕ್ಕುವ ರೆಡಿಮೇಡ್ ಡೆಸಿಕೆಟೆಡ್ ಕೊಕೊನಟ್ ಪೌಡರ್ ಹಾಕದೇ ಕೊಬ್ಬರಿ ಗಿಟುಗವನ್ನೇ ಪುಡಿಮಾಡಿಕೊಳ್ಳಬೇಕು.

**ಅಮೀನಗಡ ಕರದಂಟಿನ ಪ್ರಕಾರಗಳು :**

- ಸಕ್ಕರೆ ಕರದಂಟು
- ಚಿಕ್ಕಿ ಬೆಲ್ಲದ ಕರದಂಟು
- ಸಾದಾ ಬೆಲ್ಲದ ಕರದಂಟು

**ಅಮೀನಗಡ ಕರದಂಟಿನ ಈಗಿನ ದರಗಳು (ಪ್ರತಿ ಕೆ,ಜಿ,ಗೆ) :**

- ಸಕ್ಕರೆ ಕರದಂಟು – ೪೦೦ ರೂ.
- ಚಿಕ್ಕಿ ಬೆಲ್ಲದ ಕರದಂಟು – ೬೦೦ ರೂ.
- ಸಾದಾ ಬೆಲ್ಲದ ಕರದಂಟು – ೪೦೦ ರೂ.

**ಅಮೀನಗಡ ಕರದಂಟಿನ ಮಾರಾಟದ ಕೇಂದ್ರಗಳು :**

ಅಮೀನಗಡದ ಕರದಂಟನ್ನು ವಿಜಯಾ ಕರದಂಟು, ಖಾದ್ರಿ ಸ್ವೀಟ್ ಮಾರ್ಟ್, ವಿಶಾಲ್ ಸ್ವೀಟ್ಸ್ ರಂತಹ ದೊಡ್ಡ ದೊಡ್ಡ ಅಂಗಡಿಯವರು ಅಮೀನಗಡದಲ್ಲೇ ಮಾರಾಟ ಮಾಡುತ್ತಾರೆ. ಆರ್ಡರ್ ಬಂದರೆ ಕೋರಿಯರ್ ಮೂಲಕವೂ ಕಳಿಸಿಕೊಡುವುದೂ ಉಂಟು. ಇನ್ನುಳಿದವರು ಬನಶಂಕರಿ ಜಾತ್ರೆ, ಕೂಡಲ ಸಂಗಮದ ಜಾತ್ರೆ, ಕೊಪ್ಪಳ ಗವಿಸಿದ್ಧೇಶ್ವರ ಜಾತ್ರೆ, ಸವದತ್ತಿ ಯಲ್ಲಮ್ಮದೇವಿ ಜಾತ್ರೆ, ಪ್ರದರ್ಶನ ಮತ್ತು ಮಾರಾಟ ಕೇಂದ್ರಗಳು, ಸಾಹಿತ್ಯ ಸಮ್ಮೇಳನಗಳಲ್ಲಿ ಭಾಗವಹಿಸಿ ಮಾರಾಟ ಮಾಡುವವರೇ ಹೆಚ್ಚು.

"ಕರದಂಟು ತಯಾರಿಕೆ ನಮ್ಮ ಪಾರಂಪರಿಕ ಕಸಬು. ನಮ್ಮ ತಾಯಿಯವರ ಕಾಲದಿಂದಲೂ ನಾವು ಜಾತ್ರಿ, ಸಮ್ಮೇಳನಗಳಿಗೆ ಹೋಗಿ ಮಾರಾಟ ಮಾಡ್ತೇವ್ರಿ. ನಾವ್ ಮಿಶನ್ನಿನಿಂದ ತಯಾರ ಮಾಡಾಂಗಿಲ್ರಿ. ಕೈಯಿಂದ ತಯಾರ ಮಾಡಿದ್ರ ಇದರ ರುಚಿ ದಿನಗಳದಂತೆ ಕಮ್ಮೀ ಆಗೂದಿಲ್ರಿ. ಅದರಾಗೂ ಸಕ್ರಿ ಕರದಂಟಿನ್ಯಾಗ ನೀರು ಮತ್ತು ಹಿಟ್ಟು ಡ್ರೈ ಆಗೂದ್ರಿಂದ ಟೇಸ್ಟ್ ಕೆಡತೈತ್ರಿ. ಆದ್ರ... ಬೆಲ್ಲದ ಕರದಂಟಿನ ಟೇಸ್ಟ್ ಕೆಡೋದೇ ಇಲ್ರಿ. ಇದನ್ನ ಮೂರ್‍ನಾಲ್ಕು ತಿಂಗಳ ಇಟ್ರೂ ಏನೂ ಆಗೂದಿಲ್ರಿ. ಮತ್ತs ಶುಗರ್ ಪೇಸೆಂಟಿನವರೂ ಇದರ ರುಚಿ ನೋಡಬಹುದು. ಬೆಲ್ಲದ್ದಕ್ಕs ಡಿಮ್ಯಾಂಡ ಐತ್ರಿ." ಎಂದು ನೈಜ ಚಿತ್ರಣವನ್ನೇ ಬಿಚ್ಚಿಟ್ಟವರು ತೇಜಾ ಸ್ವೀಟ್ಸ್‌ನ ವಿ.ಎಮ್. ಪ್ಯಾಟಿಶೆಟ್ಟರ್.

"ನಮ್ಮೂರಾಗೂ ಈ ರುಚಿ ಸಿಗುವಂತಿದ್ದರೆ ಚೆನ್ನಾಗಿತ್ತು ಎನ್ನವವರು ಜಾಸ್ತಿ ಆಗ್ಯಾರ್ರಿ. ಹೀಂಗಾಗಿ ನಮ್ಮ ಅಂಗಡಿಯ ಬ್ರ್ಯಾಂಚೆಸ್ ಬೇರೆ ಬೇರೆ ಊರುಗಳಲ್ಲಿ ಮಾಡಬೇಕು ಅಂದ್ಕೊಂಡೀನ್ರಿ. ಸ್ವಲ್ಪ ರೇಟ್ ಜಾಸ್ತಿ ಮಾಡಿ, ಮಾರಾಟಗಾರರಿಗೆ ಮಾರ್ಜಿನ್ನೂ ಜಾಸ್ತಿ ಕೊಟ್ಟರೆ.. ಅಮೀನಗಡದ ಕರದಂಟು ಎಲ್ಲಾ ಕಡೆ ಸಿಕ್ಕ್ಹಂಗ್ ಆಗುತ್ತ ಅನ್ನೋ ವಿಚಾರ ಐತ್ರಿ. ಹ್ಯಾಂಗೂ ನಮ್ಮ ಅಂಗಡಿ ISO certified, Trade Marked and Registered! ನಮ್ಮೂರ ಕರದಂಟಿನ ರುಚಿ ಇನ್ನೂ ಬೆಳೀಬೇಕು, ಮುಂದುವರೀಬೇಕು" ಎನ್ನುವುದು ಸಂತೋಷ ಐಹೊಳ್ಳಿಯವರ ಹೆಮ್ಮೆಯ ನುಡಿ.

"ನಾನು ಗರ್ಭಿಣಿ ಆಗಿದ್ದಾಗ ಅಮೀನಗಡದಿಂದ ಕರದಂಟು ತರಿಸಿಕೊಳ್ಳಬೇಕಾಗಿತ್ತು. ಅದು ಖಾಲಿಯಾಗಿ ಮತ್ತೆ ಮತ್ತೆ ತರಿಸಿಕೊಳ್ಳಲು ಅಲ್ಲಿಂದ ಬರುವವರಿಗಾಗಿ ಕಾಯಬೇಕಿತ್ತು. ಮನೆಯಲ್ಲಿಯೇ ಅಷ್ಟೆಲ್ಲ ಪದಾರ್ಥಗಳನ್ನು ಬಳಸಿ ಕರದಂಟು ಮಾಡಿಕೊಳ್ಳುವುದು ಕಷ್ಟ. ಅದು ಎಲ್ಲರಿಂದಲೂ ಸಾಧ್ಯವಾಗುವ ಮಾತೂ ಅಲ್ಲ. ಹಾಗಾಗಿ ಅದೇ ಸ್ವಾದದಲ್ಲಿ ಬೆಂಗಳೂರಿನಲ್ಲಿಯೂ ಲಭ್ಯವಾಗುವಂತೆ ಮಾಡಬೇಕು ಎಂದು ಆಗಲೇ ನಿರ್ಧರಿಸಿದೆ. ಬಾಣಂತನ ಮುಗಿಸಿ ವಾಪಸ್ಸಾದವಳೇ ಅಮೀನಗಡದಿಂದಲೇ ತರಿಸಿಕೊಂಡು ಇಲ್ಲಿ ಮಾರಾಟ ಮಾಡಲಾರಂಭಿಸಿದೆ" ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ ಬೆಂಗಳೂರಿನ ಬಸವೇಶ್ವರ ನಗರದ ಉತ್ತರ ಕರ್ನಾಟಕ ಬ್ಲಿಸ್‌ನ ಮಾಲೀಕರಾದ ದೀಪ್ತಿ.

ಸುಮಾರು ನೂರು ವರುಷಗಳ ಇತಿಹಾಸ ಹೊಂದಿರುವ ಅಮೀನಗಡದ ಕರದಂಟು ಪೌಷ್ಠಿಕ ಆಹಾರ ಪದಾರ್ಥಗಳಲ್ಲಿ ಒಂದಾಗಿದ್ದು, ಸುದೀರ್ಘ ಕಾಲದ ಅನುಭವ ಪರಂಪರೆ ಅಡಗಿದೆ. ಜನಪದರ ಅದರಲ್ಲೂ ಕುಸ್ತಿಪಟುಗಳಿಗೆಂದೇ ತಯಾರಾದ ಈ ಪೌಷ್ಠಿಕಾಂಶ

ಭರಿತ ಖಾದ್ಯ ಇಂದು ಜಾತ್ರೆಗಳಲ್ಲಿ ಬೀಗರು-ಬಿಜ್ಜರುಗಳಿಗೆ ಪ್ರಸಾದ, ಫಳಾರ ರೂಪದಲ್ಲಿಯೂ, ಹುಟ್ಟು ಹಬ್ಬ, ಮದುವೆ-ಮುಂಜ್ವಿಯಂತಹ ಆಚರಣೆಯಲ್ಲಿ ವಿಶಿಷ್ಟ ತಿನಿಸು ಆಗಿ ಪ್ರತಿಷ್ಠೆಯ ಪರಮಾವಧಿಯಾಗಿದೆ. ಅಲ್ಲದೇ ಅನೇಕ ಕುಟುಂಬಗಳ ಪಾರಂಪರಿಕ ಕಸಬು ಮಾತ್ರವಲ್ಲ, ಅನೇಕ ನಿರುದ್ಯೋಗಿಗಳಿಗೆ ಉದ್ಯೋಗವನ್ನೂ ನೀಡಿದೆ. ಆಹಾರದ ಹಿಂದಿರುವ ಆರೋಗ್ಯದ ತತ್ವ ಹಾಗೂ ಅನುಭವ ಪರಂಪರೆಯ ಈ ಕೊಂಡಿ ಕಳಚದಿರಲೆಂಬುದೇ ಈ ಪ್ರಯತ್ನದ ಹಿಂದಿರುವ ಹಂಬಲ.

### ೩.೫.೫ ರಾಜೂರ ಸುಣ್ಣ ತಯಾರಿಕೆ

**ಸುಣ್ಣಗಾರರ ಹಿನ್ನೆಲೆ ಮತ್ತು ಮೂಲ :**

ಕಲ್ಲರಳಿ ಹೂವಾಗಿ, ಎಲ್ಲರಿಗೂ ಬೇಕಾಗಿ,
ಮಲ್ಲಿಕಾರ್ಜುನನ ಶಿಖರಕ್ಕೆ ಬೆಳಕಾಗಿ,
ಬಲ್ಲವರು ಹೇಳಿ ಸರ್ವಜ್ಞ॥

ಸರ್ವಜ್ಞನ ಈ ತ್ರಿಪದಿ ಒಗಟಿಗೂ ರಾಜೂರಿಗೂ ತುಂಬಾ ನಂಟಿದೆ! ಅಂದರೆ ಒಗಟಿನ ಉತ್ತರ – ಸುಣ್ಣ (ಚೂರ್ಣ)ಕ್ಕೂ ಆ ಸುಣ್ಣ ತಯಾರಿಸುವ ಸಣ್ಣ ಗ್ರಾಮ ರಾಜೂರಿಗೂ ಅವಿನಾಭಾವ ಸಂಬಂಧವಿದೆ!!

ರಾಜೂರು ಎಂಬ ಗ್ರಾಮವು ಗದಗ ಜಿಲ್ಲೆ ರೋಣ ತಾಲ್ಲೂಕಿನಲ್ಲಿದೆ. ಕುಷ್ಟಗಿಯಿಂದ ೨೪ ಕಿ.ಮೀ. ಪಯಣಿಸಿದರೆ ಸಿಕ್ಕುವ ವಾಣಿಜ್ಯ ನಗರಿ ಗಜೇಂದ್ರಗಡದಿಂದ ರೋಣಕ್ಕೆ ಹೋಗುವ ದಾರಿಯಲ್ಲಿ ೪ ಕಿ.ಮೀ ಸಾಗಿದರೆ ಸಿಕ್ಕುವ ಅಪ್ಪಟ ಸುಣ್ಣಗಾರರ ಊರು. ೨೦೧೧ರ ಜನಗಣತಿಯ ಪ್ರಕಾರ ೭೮೧ ಮನೆಗಳು,೪೫೨೮ ಜನಸಂಖ್ಯೆಯನ್ನು ಹೊಂದಿರುವ ಈ ಗ್ರಾಮದಲ್ಲಿ ೨೪೦೫ ಪುರುಷರು ಹಾಗೂ ೨೧೨೩ ಸ್ತ್ರೀಯರಿದ್ದಾರೆ. ಗ್ರಾಮದ ಬಸ್ ನಿಲ್ದಾಣದ ಪಕ್ಕದಲ್ಲೇ ಅಚ್ಚರಿ ಹಾಗೂ ಕುತೂಹಲಕ್ಕೆಡೆ ಮಾಡಕೊಡುವ ಸುಮಾರು ೪೦ ಸುಣ್ಣದ ಭಟ್ಟಿಗಳೂ ಒಂದೆಡೆಯೇ ಇವೆ! ಇನ್ನೊಂದೆಡೆ ಇನ್ನೊಂದಷ್ಟು ಭಟ್ಟಿಗಳು!! ಇವರಿಗೆ ಪ್ರೋತ್ಸಾಹ ನೀಡಲೆಂದು ಗಜೇಂದ್ರಗಡದ ಘೋರ್ಪಡೆಯವರು (ಧಣಿಯವರು) ಒಂದೆಡೆಯೇ ಸುಣ್ಣದ ಭಟ್ಟಿಗಳನ್ನು ನಿರ್ಮಿಸಲು ಊರಮುಂದೆಯೇ ಜಾಗ ದಾನ ಮಾಡಿರುವುದನ್ನು ವಯೋವೃದ್ಧ ಅಂದಪ್ಪ ಸುಣಗಾರ ಸ್ಮರಿಸಿಕೊಳ್ಳುತ್ತಾರೆ.

"ಕೋಲಕಾರ, ಬಾರಿಕೇರ, ನಾಟಕಾರ, ನೀರುಗಂಟಿ, ನೀರುಗಂಬಿ ಅಥವಾ ಅಂಬಿಗರು ಎಂದು ಕರೆಯಿಸಿಕೊಳ್ಳುವ ಇವರು ಮೂಲತಃ ನದಿ, ಕೆರೆ, ಸರೋವರ ಮುಂತಾದೆಡೆ ನಾವೆಗಳು ಅಥವಾ ಕೊಪ್ಪರಿಗಿ ಅಥವಾ ನಾಡದೋಣಿಗಳ ಮೂಲಕ ಊರ ಜನರನ್ನು ಹೊಳೆಯಾಚೆ ದಾಟಿಸುವುದು, ಇಲ್ಲವೇ ಗ್ರಾಮದ ಕೆರೆಯ ನೀರನ್ನು ಕಾಯುವ ಕಾಯಕ."[೩೪]

ಮಾಡಬೇಕಿದ್ದ ರಾಜೂರಿನ ಅಂಬಿಗರು ನಂಬಿದ ಕಾಯಕ ಯಾವುದು ಗೊತ್ತೇ? ಸುಣ್ಣ ಸುಡುವುದು (ತಯಾರಿಸುವುದು)! ಹೌದು, ಈ ಗ್ರಾಮದಲ್ಲಿ ಸುಣ್ಣ ಸುಡುವ ಕಾಯಕವನ್ನೇ ನಂಬಿದ ಅಂಬಿಗರ ಸುಮಾರು ೮೫ ಕುಟುಂಬಗಳಿವೆ!!ಶೇ. ೨೦ರಷ್ಟು ಸಾಕಷರತೆಯಲ್ಲಿ ಮಹಿಳೆಯರ ಪಾಲು ಕೇವಲ ಶೇ. ೦೭. ಕೇವಲ ಒಬ್ಬರು ಮಾತ್ರ ಸರಕಾರಿ ನೌಕರನಾಗಿದ್ದು, ಮೂವರು ಪುರುಷರು ಸ್ನಾತಕೋತ್ತರ ಪದವೀಧರರು, ಪದವಿಯಲ್ಲಿ ವ್ಯಾಸಂಗ ಮಾಡುತ್ತಿರುವ ಒಬ್ಬ ಮಹಿಳೆ ಹಾಗೂ ೮ ಜನ ಪುರುಷರು. ಇವರಿಗೆ ಸುಣ್ಣಗಾರಿಕೆ ಬಿಟ್ಟರೆ ಬೇರೆ ಉದ್ಯೋಗವಿಲ್ಲ, ಮಾಡಲು ಬಂಡವಾಳವಿಲ್ಲ, ಚಿಕ್ಕದೊಂದು ಮನೆ ಬಿಟ್ಟರೆ ಆಸ್ತಿ ಮೊದಲೇ ಇಲ್ಲ. ಕನ್ನಡವನ್ನೇ ಮಾತೃಭಾಷೆಯನ್ನಾಗಿ ಬಳಸುತ್ತಿರುವ ಸುಮಾರು ೫೦೦ ಅಂಬಿಗರ ಜನರೀಗ ಸುಣ್ಣಗಾರರಾಗಿದ್ದಾರೆ. ಸುಣ್ಣಗಾರ ಎಂಬ ಪರಂಪರೆಗೆ ಇವರು ಸೇರಲು ಇವರ ಪಾರಂಪರಿಕ ಕಸಬು ಕಾರಣ!

ಅದು ಕ್ರಿ.ಶ.೧೯೨೫ರ ಕಾಲ. ರಾಜೂರಿನ ಸುಣ್ಣಗಾರರಿಗೆ ಉಚ್ಛ್ರಾಯಸ್ಥಿತಿಯಲ್ಲಿದ್ದ ಕಾಲ! ವೆಂಕಪ್ಪ ಕಟ್ಟಿಮನಿ, ಬಾಲಪ್ಪ ಕಟ್ಟಿಮನಿ, ಲೋಕಪ್ಪ ಸುಣಗಾರ, ಅಡಿವೆಪ್ಪ ಸುಣಗಾರ, ಆದಪ್ಪ ಹಾವರಗಿ, ಗುಂಡಪ್ಪ ಹಾವರಗಿ ಮುಂತಾದವರು ಸೇರಿಕೊಂಡು ರಾಜೂರಿನ ಸುಣ್ಣಗಾರರ ಸಂಘವನ್ನು ಅಸ್ಥಿತ್ವಗೊಳಿಸಿದರು. ಅದೇ ಸಂಘ ಮುಂದೆ ೧೯೬೫ರಲ್ಲಿ ತುಂಬಾ ಬಲಿಷ್ಠವಾಗಿ ಬೆಳೆಯಿತು. ಆಗ ಸುಣ್ಣ ಸುಡಲು ಭಟ್ಟಿ ಇದ್ದಿಲು ಬದಲಾಗಿ ಕಲ್ಲಿದ್ದಲನ್ನೇ ತರಿಸಿ ಸುಡುತ್ತಿದ್ದ ಕಾಲ! ನ್ಯಾಯಬೆಲೆ ಅಂಗಡಿಗಳಲ್ಲಿ ಅಕ್ಕಿ-ಸಕ್ಕರೆಯನ್ನು ಹಂಚುವಂತೆ ಆಗ ಕಲ್ಲಿದ್ದಲನ್ನು ಹಂಚುತ್ತಿದ್ದರಂತೆ!

ಈ ಸುಣ್ಣಗಾರರಿಗೆ ಶಾರೀರಿಕ ಶ್ರಮವೇ ಸಂಪತ್ತು. ಅಂದರೆ ಶ್ರಮ ಸಂಸ್ಕೃತಿಯೇ ಇವರ ಬಂಡವಾಳ. ಸುಣ್ಣವನ್ನು ತಯಾರಿಸಿ ಸಮಾಜದ ಸಂಸ್ಕೃತಿ, ಆಚಾರ, ಧಾರ್ಮಿಕ ಆಚರಣೆ, ವಿಧಿ-ವಿಧಾನಗಳಿಗೆ ಪೂರಕವಾಗಿ ವರ್ಷಕ್ಕೊಮ್ಮೆ ಅದೇ ಗ್ರಾಮದವರಾಗಿದ್ದಲ್ಲಿ ಮನೆ ಮನೆಗೆ ತೆರಳಿ ಸುಣ್ಣ ಪೂರೈಸುತ್ತಿದ್ದರು. ಬೇರೆ ಗ್ರಾಮದವರಾಗಿದ್ದಲ್ಲಿ ಮಹಾನವಮಿ

ಅಥವಾ ಯುಗಾದಿ ಹಬ್ಬ ಇಲ್ಲವೇ ಆ ಗ್ರಾಮದ ಜಾತ್ರೆಗೂ ಕೊಂಚ ಮುಂಚೆ ತಮಗೆ ಹಂಚಿಕೆಯಾದ ಗ್ರಾಮಕ್ಕೆ ಎತ್ತಿನ ಗಾಡಿಯಲ್ಲಿ ಸುಣ್ಣವನ್ನು ಹೇರಿಕೊಂಡು ಹೋಗಿ, ಊರ ಮಧ್ಯದ ಗುಡಿ–ಗುಂಡಾರದ ಬಳಿ ಸುಣ್ಣವನ್ನು ಇಳಿಸಿ, ಇಂಥಲ್ಲಿ ಸುಣ್ಣದ ಬಂಡಿ/ಚಕ್ಕಡಿ ಇದೆ, ಬಂದು ಸುಣ್ಣ ತಗೊಂಡ್ಹೋಗ್ರಿ.. ಎಂದು ಊರಿನಲ್ಲಿ ತಿರುಗಾಡಿ ಕೂಗಿ ಬಂದ ನಂತರ ಬುಟ್ಟಿ ಹಿಡಿದು ಬರುವ ರೈತರ ಹೆಂಗಸರು/ಮಕ್ಕಳಿಗೆ ಮನೆಯ ಆಕಾರ ಅಥವಾ ಗಾತ್ರದ ಮೇಲೆ 'ಸುಣ್ಣದಗಾರತಿ' ಸುಣ್ಣ ಹಾಕಿಕೊಡುತ್ತಿದ್ದಳು. "ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಸುಣ್ಣಗಾರರು ಹಬ್ಬ– ಹರಿದಿನ, ಜಾತ್ರೆ–ಉತ್ಸವ ಇತ್ಯಾದಿ ಸಂದರ್ಭಗಳಲ್ಲಿ ಮನೆಗಳಿಗೆ ಸುಣ್ಣವನ್ನು ತಂದು ಕೊಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಅವರೆ ಸುಣ್ಣ ಬಳಿಯುವ ಕಾರ್ಯ ಮಾಡುತ್ತಾರೆ!"[೩೩]

ಮಧ್ಯದಲ್ಲಿ ಮದುವೆ ಇತ್ಯಾದಿ ಬಂದರೆ ಸುಣ್ಣ ಕೊಟ್ಟು 'ಚಾಜ' ಪಡೆಯುತ್ತಿದ್ದಳು. ಸುಗ್ಗಿಯಲ್ಲಿ ಕಣಗಾಳಿಗೂ ಬಂದಾಗ ರೈತ 'ತೂರುಬುಟ್ಟಿ' ತುಂಬಿ 'ಆಯ' ಕೊಡುತ್ತಿದ್ದನು. ಇದಲ್ಲದೇ ಹಬ್ಬ–ಹುಣ್ಣಿವೆಯಲ್ಲಿ 'ಖುಷಿ' ಕೇಳವು ರೂಢಿಯೂ ಇತ್ತು! ಅಲ್ಲದೇ ಊರಿನ ದೇವಾಲಯಗಳಿಗೂ ಸುಣ್ಣ ನೀಡುವಕಾಯಕದಲ್ಲಿ ಕೈಲಾಸವನ್ನು ಕಾಣುತ್ತಿರುವ ಇವರನ್ನೂ ಮೂಲದಲ್ಲಿ ಅಪ್ಪಟ ಆಯಗಾರರೆಂದು ಪರಿಗಣಿಸಲಾಗುತ್ತಿತ್ತು. ಬರಬರುತ್ತಾ ರೈತರು ಮತ್ತು ಸುಣ್ಣಗಾರರ ನಡುವೆ ಕೊಡು–ಕೊಳ್ಳುವಿಕೆ ತಾಲ ತಪ್ಪಿದ್ದರಿಂದ ಈ ಕಸಬು ಇಂದು ಅಪ್ಪಟ ವ್ಯಾಪಾರದತ್ತ ತಿರುಗಿದೆ. ಕೆಲವು ಹಳ್ಳಿಗಳಲ್ಲಿ ಮಾತ್ರ ಸ್ವಲ್ಪ ಮಟ್ಟಿಗೆ ಅಂದರೆ ಗುಡಿ–ಗುಂಡಾರಗಳಿಗೆ ಸುಣ್ಣ ನೀಡುವ ಸಂಪ್ರದಾಯ ಮಾತ್ರ ಜೀವಂತವಾಗಿದೆ!ರಾಜೂರಿನ ಸುಣ್ಣಗಾರರು ಶ್ರೀ ಕಾಲಕಾಲೇಶ್ವರ ದೇಗುಲ ಹಾಗೂ ಬೆಟ್ಟಕ್ಕೆ ಪ್ರತಿ ವರ್ಷ ಜಾತ್ರೆಗೆ ಪ್ರತಿಯೊಬ್ಬ ಮನೆತನದವರೂ ಸುಣ್ಣ ಅರ್ಪಿಸುತ್ತಾರೆ. ವಿಸ್ಮಯವೆಂದರೆ ಆ ದೇವರು ತನ್ನ ದೇಗುಲ ಹಾಗೂ ಬೆಟ್ಟಕ್ಕೆ ತಾನೇ ಸ್ವತಃ ಸುಣ್ಣ ಹಚ್ಚಿಕೊಳ್ಳುತ್ತಾನೆಂಬ ಅಚಲವಾದ ನಂಬಿಕೆ ಈಗಲೂ ಇದೆ!!

**ರಾಜೂರಿನ ಸುಣ್ಣಗಾರರು ಮತ್ತು ಸುಣ್ಣದಕಲ್ಲು :**

ಸುಮಾರು ನಾಲ್ಕೈದು ತಲೆಮಾರುಗಳ ಹಿಂದಿನ ಮಾತು. ರಾಜೂರಿನಲ್ಲಿ ಆಗ ಇದ್ದ ಒಂದೆರಡು ಅಂಬಿಗರ ಕುಟುಂಬಗಳು ಬೆಳೆದು ದೊಡ್ಡದಾಗ ತೊಡಗಿದವು. ಅಂಬಿಗರ ಕುಲಕಸಬಿಗೆ ಇಂಬು ಸಿಕ್ಕದಾಯಿತು. ಇತ್ತ ಕುಲಕಸಬೂ ಇಲ್ಲ ಅತ್ತ ಕೃಷಿಯಲ್ಲಿ ತೊಡಗಲು ಸ್ವಂತ ಭೂಮಿಯೂ ಇಲ್ಲ. ಕೊನೆಗೆ ಕೃಷಿ ಕೂಲಿಯಿಂದ ಉಪಜೀವನವೂ ಅಷ್ಟಕ್ಕಷ್ಟೆ.

ಏನಾದರೂ ಸ್ವಂತ ಕೈಕೆಲಸ ಆರಂಭಿಸಬೇಕೆಂದು ಆಲೋಚಿಸುತ್ತಿರವಾಗ... ರಾಜೂರಿನ ಹಳ್ಳದಲ್ಲಿ ಯಥೇಚ್ಛವಾಗಿ ಸಿಕ್ಕುತ್ತಿದ್ದ ಸುಣ್ಣದ ಕಲ್ಲು ಆ ಅಂಬಿಗರ ಕಣ್ಮನ ಸೆಳೆಯಿತು. ಬಂಡವಾಳವೂ ಇಲ್ಲದ ಬೇಡಿಕೆಯೂ ಹೆಚ್ಚಾಗಿದ್ದ ಕಸಬು ಸುಣ್ಣಗಾರಿಕೆಯ ಬಗ್ಗೆ ಥಟ್ಟನೆ ಹೊಳೆಯಿತು! ಆಗ ಶುರುವಾದ ಸುಣ್ಣಗಾರಿಕೆ ಇಂದಿಗೂ ಪಾರಂಪರಿಕ ಕಸಬಾಗಿ ಮುಂದುವರಿದಿದೆ!

"ಹಿಂದಕ ನಮ್ಮೂರ ಅಕ್ಕ-ಪಕ್ಕದಾಗಿನ ಹಳ್ಳದಾಗs.. ಸುಣ್ಣದ ಕಲ್ಲು ಸಿಗತಿತ್ರಿ. ಹರದಾರಿ ದೂರದಿಂದ ತಲಿಮ್ಯಾಲೆ ಹೊತ್ಕೊಂಡು ಬರ್ತಿದ್ವಿರಿ, ಒಮ್ಮೊಮ್ಮೆ ಆಕಳ, ಎತ್ತುಗಳ ಮ್ಯಾಲೂ ತರ್ತಿದ್ವಿರಿ. ಇನ್ನ.. ಬೈರಾಪೂರ ಗುಡ್ಡ, ಅಮರಪ್ಪನ ಪಡಿ, ಕಾಲಕಾಲೇಶ್ವರ ಗುಡ್ಡ, ಚೆಗರಿಮುಖಗುಡ್ಡದಿಂದ ವಸತಿಬಿದ್ದುಇದ್ದಿಲು ತರ್ತಿದ್ವಿರಿ. ಸುಣ್ಣಸುಟ್ಟು ತಲಿಮ್ಯಾಲೆ ಹೊತ್ತು ಮಾರ್ತಿದ್ವಿರಿ. ಈಗ ಎಲ್ಲ ಖಾಲಿ ಆಗೈತ್ರಿ. ಮನಷ್ಯಾಗ ಯಾವುದ್ ಈಡೈತ್ರಿ?" ಎಂದು ಹಿಂದಿನ ಸುಣ್ಣಗಾರಿಕೆಯ ನೆನಪಿನ ಬುತ್ತಿಯನ್ನು ಬಿಚ್ಚುವ 'ಸುಣ್ಣದಗಾರತಿ' ಮಲ್ಲಮ್ಮ ನಾಗಪ್ಪ ಕಟ್ಟಿಮನಿಯವರ ಧ್ವನಿಯಲ್ಲಿ ನೋವಿದೆ.

ಹೌದು! ತಮ್ಮೂರಿನ ಹಳ್ಳದಲ್ಲಿ ಸುಣ್ಣದ ಕಲ್ಲು ಸಾಲದಾದಾಗ ನಾಲ್ಕೈದು ಕಿಲೋಮೀಟರ್ ದೂರದ ಕೊಪ್ಪಳ ಜಿಲ್ಲಯ ಯಲಬುರ್ಗಾ ತಾಲ್ಲೂಕಿನ ಶಿರಗುಂಪಿ ಹಳ್ಳ, ಸಂಕನೂರ ಹಳ್ಳ ಹಾಗೂ ಗದಗ ಜಿಲ್ಲಯ ರೋಣ ತಾಲ್ಲೂಕಿನ ಚಿಜ್ಜೇರಿಹಳ್ಳ, ಬೇವಿನಕಟ್ಟಿ ಹಳ್ಳ, ಗುಳಗುಳಿ ಹಳ್ಳ, ಸೂಡಿ ಹಳ್ಳ, ರಾಂಪೂರ ಹಳ್ಳಗಳಿಂದ ಸುಣ್ಣದ ಕಲ್ಲನ್ನು ಸಂಗ್ರಹಿಸಿ ಸುಣ್ಣ ತಯಾರಿಸುತ್ತದ್ದರು. ಕೊನೆಗೆ ಹಳ್ಳದಲ್ಲಿನ ಸುಣ್ಣದಕಲ್ಲೂ ಸಾಲದಾದಾಗ ಆ ಗ್ರಾಮಗಳ ಹೊಲಗಳಲ್ಲೂ ಸಿಕ್ಕುತ್ತಿದ್ದ ಸುಣ್ಣದಕಲ್ಲನ್ನು'ಉಡಿ'ಕಟ್ಟಿಕೊಂಡು ಆರಿಸಿ, ತಲೆಮೇಲೆ ಹೊತ್ತು ತರಬೇಕಾಯಿತು! ಅದಕ್ಕೂ ಜಗ್ಗದೇ ಇದ್ದಾಗ ಕೋಣ, ಎತ್ತು, ಬಂಡಿಗಳಲ್ಲಿ ಹೇರಿಕೊಂಡು ಬಂದು ಸುಣ್ಣ ಸುಟ್ಟರು!!

ಹೀಗೇ ಮುಂದುವರಿದುಕೊಂಡು ಬಂದ ರಾಜೂರಿನ ಸುಣ್ಣ ಇಂದು ತನ್ನ ಉತ್ತಮ ಗುಣಮಟ್ಟದಿಂದಾಗಿ ಸುತ್ತ-ಮುತ್ತಲ ಜಿಲ್ಲೆಗಳ ಹತ್ತು ಹರದಾರಿಗೂ ಇದರ ವಹಿವಾಟು ವ್ಯಾಪಿಸಿದೆ. ಕುಷ್ಟಗಿ, ನವಲಗುಂದ, ನರಗುಂದ, ಯಮನೂರ, ರೋಣ, ಹನಮಸಾಗರ, ಗದಗ, ನರೇಗಲ್ಲ, ಯಲಬುರ್ಗಾಗಳಂತಹ ಪೇಟೆಗಳಲ್ಲೂ ಹಾಗೂ ಅವುಗಳ ಸುತ್ತ-ಮುತ್ತಲ ಹಳ್ಳಿಗಳಲ್ಲೂ ಪ್ರವೇಶ ಪಡೆದು, ಕೆಲವೊಂದು ಸಂದರ್ಭಗಳಲ್ಲಿ ಪ್ಯಾಕೆಟ್ ಸುಣ್ಣ ಹಾಗೂ ಡಿಸ್ಟೆಂಪರ್‌ಗೂ ಸೆಡ್ಡು ಹೊಡೆದು ನಿಂತಿದೆ! ಹಳ್ಳಿಗಳಲ್ಲಂತೂ ಇದೇ ಸುಣ್ಣ

ಜನಮನ ಸೂರೆಗೊಂಡಿದೆ. ನಿಜವಾದ ಜನಪದ ಸುಣ್ಣವೆಂದರೆ ಅದು ರಾಜೂರ ಸುಣ್ಣ ಮಾತ್ರ ಎಂಬ ಹಂತಕ್ಕೆ ತಲುಪಿದೆ!

ಇದೀಗ ಸುಣ್ಣದ ಕಲ್ಲಿಗೂ ಭೀಕರ ಬರ! ಹಳ್ಳವೂ ಖಾಲಿ, ಹೊಲಗಳಲ್ಲೂ ಖಾಲಿ! ಮತ್ತೂ ಶುರುವಾಯಿತು ಸುಣ್ಣದಕಲ್ಲಿಗಾಗಿ ಶೋಧನೆ. ಈ ಶೋಧನೆಯು ಬಾದಾಮಿ ತಾಲ್ಲೂಕಿನ ಮಲಪ್ರಭಾ ನದಿತೀರದ ಚೊಳಚಗುಡ್ಡದವರೆಗೂ ನಡೆಯಿತು. ಅಲ್ಲಿ ಸಿಕ್ಕಿತ್ತು ಸುಣ್ಣದಕಲ್ಲಿನ ಅಪಾರ ನಿಧಿ! ಎಲ್ಲಿ ಅಗೆದರೂ ಸುಣ್ಣದಕಲ್ಲಿನ ಖಜಾನೆ!

"ಇಲ್ಲಿಗೆ ೨೮ ಕಿ.ಮೀ. ದೂರಕ್ಕ ಚೊಳಚಗುಡ್ಡ ಅಂತ ಐತ್ರಿ. ಅಲ್ಲಿ ಇಡೀ ಭೂಮೀನs ಸುಣ್ಣದ ಕಲ್ಲಿನಿಂದ ತುಂಬೈತ್ರಿ. ಒಂದು ಸಾವಿರ ರೂಪಾಯಿಕ ಒಂದ್ ಟ್ರ್ಯಾಕ್ಟರ್ ಟ್ರಿಪ್ ಸುಣ್ಣದ ಕಲ್ಲಿಗೆ ೧೦೦೦/- ರೂಪಾಯ್ರಿ. ಅದನ್ನ ಹೇರಿಕೊಂಡು ಬರಾಕs ೨೨೦೦/- ರೂಪಾಯಿ ಬಾಡಿಗಿ ಕೊಡಬೇಕ್ರಿ. ಈ ಚೊಳಚಗುಡ್ಡದ ಕಲ್ಲನ್ನು ತುಣುಕುಗಳನ್ನಾಗಿಸಲು ಒಂದು ಬುಟ್ಟಿಗೆ ೫/- ರೂಪಾಯಿ ಕೂಲಿ ಕೊಡಬೇಕು! ಒಂದ್ ಚೀಲ ಇದ್ದಿಗೆ ೪೦೦/- ರೂಪಾಯಿ ಕೊಡಬೇಕು. ಒಂದ್ ಟ್ರ್ಯಾಕ್ಟರ್ ಟ್ರಿಪ್ ಎಳನೀರ ಪಟ್ಟಿಗೆ೮೦೦/- ತರಾಕ ಬಾಡ್ಗಿ ೧೦೦೦/- ರೂಪಾಯಿ ಕೊಡಬೇಕ್ರಿ. ಎಲ್ಲಾ ತುಟ್ಟೀ ಕಾಲ ಬಂತ್ರಿ. ಇತ್ಲಾಗ ಸುಣ್ಣಾನ ಹಚ್ಚಾವ್ರೂ ಕಮ್ಮಿ ಆಗಾಕ್ಹತ್ಯಾರ್ರಿ. ಸುಣ್ಣ ಹಚ್ಚಾವ್ರು ೧೦/- ರೂಪಾಯ್ಕ ಒಂದ್ ಸೇರು ಸುಣ್ಣ ಅಂದ್ರ..ಅಡ್ಡಾದುಡ್ಡಿಗೆ ಕೇಳ್ತಾರ್ರಿ!" ಎಂದು ದರಪಟ್ಟಿಯನ್ನು ದರದರನೇ ಹೇಳಿದ್ದು, ಸುಣ್ಣ ಸುಟ್ಟು ಸ(ತ)ಣ್ಣಗಾದ ದೇವಪ್ಪ ಕರಮುಡಿ.

**ಸುಣ್ಣ ತಯಾರಿಕೆಯ ಸಾಧನ-ಸಲಕರಣೆಗಳು :**

ಸುಣ್ಣ ತಯಾರಿಕೆಯಲ್ಲಿ ಕಚ್ಚಾವಸ್ತುಗಳು ಹಾಗೂ ಪರಿಕರಗಳೇನೂ ಅಷ್ಟಾಗಿ ಬಳಕೆಯಾಗುವುದಿಲ್ಲ. ಕೇವಲ ಬೆರಳೆಣಿಕೆಯಷ್ಟು ಕಚ್ಚಾವಸ್ತುಗಳು ಹಾಗೂ ಪರಿಕರಗಳು ಮಾತ್ರ ಸಾಕು! ಸುಣ್ಣದ ಕಲ್ಲು(ಸೀಮೆಕಲ್ಲು),ಇದ್ದಿಲು, ಸುಣ್ಣ ಸುಡುವ ಭಟ್ಟಿ, ಕೆರಕ, ಭಡಿ, ಸುತ್ತಿಗೆ, ಗೋಣಿಚೀಲ, ಸೇರು, ಬುಟ್ಟಿ, ಕುರುಳು, ಎಳನೀರಪಟ್ಟಿ (ತೆಂಗಿನ ಪಟ್ಟಿ), ಬಂಡಿ, ಟಂ ಟಂ ಇತ್ಯಾದಿ.

**ಸುಣ್ಣದ ಕಲ್ಲಿನ ವಿಧಗಳು :**

ಸುಣ್ಣದ ಕಲ್ಲಿಗೆ ಸೀಮೆಕಲ್ಲು ಎಂದೂ ಕರೆಯುತ್ತಾರೆ. ಈ ಕಲ್ಲಿನಲ್ಲಿ ಎರಡು ಪ್ರಕಾರಗಳಿವೆ.

೧)ಜವಾರಿಕಲ್ಲು   ೨) ಹೈಬ್ರಿಡ್ ಕಲ್ಲು

ಸುಣ್ಣದ ಕಲ್ಲಿನಲ್ಲೂ ಜವಾರಿ ಮತ್ತು ಹೈಬ್ರಿಡ್ ಪ್ರಕಾರಗಳಿವೆಯೇ? ರಾಜೂರಿನ ಸುಣ್ಣಗಾರರು ಹಾಗಂತ ಕರೆಯುತ್ತಾರಷ್ಟೆ! ಜವಾರಿಕಲ್ಲು ಎಂದರೆ ಹಳ್ಳ ಅಥವಾ ಹೊಲದಲ್ಲಿ ಸಿಗುವ ಕಲ್ಲು. ಹೈಬ್ರಿಡ್ ಕಲ್ಲು ಎಂದರೆ ಈಗಿನ ಚೊಳಚಗುಡ್ಡದ ಕಲ್ಲು!

**ಯಾವ ಸುಣ್ಣದ ಕಲ್ಲು ಶ್ರೇಷ್ಠ?**

ಜವಾರಿಕಲ್ಲು ಅಥವಾ ಹಳ್ಳ ಅಥವಾ ಹೊಲದಲ್ಲಿ ಸಿಗುವ ಕಲ್ಲುಗಳಿಂದ ತಯಾರಿಸಿದ ಸುಣ್ಣದ ಬಿಳುಪು ತುಸು ಕಮ್ಮಿ. ಆದರೂ ಅದರ ಬಾ(ತಾ)ಳಿಕೆ ಜಾಸ್ತಿ. ಇದು ಬಲಿಷ್ಠವಾಗಿರುವುದರಿಂದ ಗಾರೆ ಕೆಲಸಕ್ಕೆ ಬಳಕೆಯಾಗುತ್ತದೆ. ಹೈಬ್ರಿಡ್ ಕಲ್ಲು ಅಥವಾ ಚೊಳಚಗುಡ್ಡದ ಕಲ್ಲುಗಳಿಂದ ತಯಾರಿಸಿದ ಸುಣ್ಣದ ಬಿಳುಪು ತುಸು ಜಾಸ್ತಿ. ಆದರೆ..ಬಲಿಷ್ಠವಾಗಿರುವುದಿಲ್ಲ ಆದ್ದರಿಂದ ಬಾ(ತಾ)ಳಿಕೆ ಕಮ್ಮಿ.

"ಹಳೆ ಮಂದಿ ಜವಾರಿ ಸುಣ್ಣಽನ ಕೇಳ್ತಾರಿ. ಆದ್ರ.. ಈ ಹೊಸ ಮಂದಿ ಮಾತ್ರ ಹೈಬ್ರಿಡ್ ಸುಣ್ಣ ಕೇಳ್ರತಾರ್ರಿ. ಯಾಕಂದ್ರ ಅವ್ರೀಗೆ ಬಿಳುಪು ಜಾಸ್ತಿ ಬೇಕ್ರಿ. ಗ್ವಾಡಿಗೆ ಒಂಚೂರು ತಗಲಿದ್ರ ಸಾಕು ಬಟ್ಟೆ-ಬರಿ, ಮೈ-ಕೈ ಹತ್ತೇಽ ಬಿಡುತ್ರಿ!" ಎಂದು ಎರಡೂ ಪ್ರಕಾರದ ಸುಣ್ಣದ ಗುಣಮಟ್ಟವನ್ನು ತಿಳಿಸುವ ಯಲ್ಲಮ್ಮ ಸುಣ್ಣಗಾರಳ ಮಾತು ಕೇಳ್ತಿದ್ರೆ..."ಒಂದು ಕಣ್ಣಿಗೆ ಬೆಣ್ಣೆ, ಇನ್ನೊಂದು ಕಣ್ಣಿಗೆ ಸುಣ್ಣ ತುಂಬಿದಂತೆ" ಅನಿಸಲಿಲ್ಲ!!

• **ಸುಣ್ಣ ಸುಡುವ ಭಟ್ಟಿ** :- ಸುಣ್ಣ ಸುಡುವ ಸ್ಥಳದಲಿ ಸಿಲಿಂಡರ್ ಆಕಾರದ, ಸಾಮರ್ಥ್ಯಕ್ಕೆ ತಕ್ಕ ಗಾತ್ರದಲ್ಲಿ, ಕಲ್ಲು, ಮಣ್ಣಿನಿಂದ ಕಟ್ಟಿದ ಸಲಕರಣೆ. ಇವನ್ನು ಕೆಮ್ಮಣ್ಣಿನ ಕದಡದಿಂದ ಸಾರಿಸಿ ಸುಣ್ಣದ ಜೋರುಬಿಟ್ಟಿರುತ್ತಾರೆ. ಸುಮಾರು ನಾಲ್ಕೈದು ಅಡಿ ಎತ್ತರ, ಮೂರ್ನಾಲ್ಕು ಅಡಿ ವ್ಯಾಸ ಹಾಗೂ ಒಂದು ಅಡಿ ದಪ್ಪನೆಯ ಗೋಡೆಯಿಂದ ಕಟ್ಟಲ್ಪಟ್ಟ ಈ ಭಟ್ಟಿಗಳನ್ನು ಚೆನ್ನಾಗಿ ಬಳಕೆ ಮಾಡಿದರೆ ಸುಮಾರು ನಾಲ್ಕೈದು ವರ್ಷ ಇರುತ್ತವೆ. ಒಂದು ಸಲ ೧ ರಿಂದ ೧೦ ಗೋಣಿಚೀಲದ ತುಂಬ ಸುಣ್ಣ ಸುಡುವಷ್ಟು ಗಾತ್ರ ಭಟ್ಟಿಗಳಿವೆ. ವಾಹನದ ಸೌಕರ್ಯವಿದ್ದವರು, ಮಾರಾಟ ಮಾಡಲು ಹೆಚ್ಚು ಜನರಿರುವ ಕುಟುಂಬದವರು ಹೆಚ್ಚಿಗೆ ಸುಡುತ್ತಾರೆ. ಸುಣ್ಣಗಾರರಿಗೆ ಭಟ್ಟಿ 'ಲಕ್ಷ್ಮಿ' ಇದ್ದಂತೆ! ಹೀಗಾಗಿ ಇದನ್ನು ಕಾರಹುಣ್ಣಿಮೆ ಮತ್ತು ದೀಪಾವಳಿಯಂದು ಅಲಂಕರಿಸಿ ಪೂಜ್ಯ ಭಾವನೆಯಿಂದ ಪೂಜಿಸುತ್ತಾರೆ.

• **ಕೆರಕ** :– ಸುಣ್ಣದ ಕಲ್ಲು ಮತ್ತು ಇದ್ದಿಲನ್ನು ಬೆರೆಸಿ, ಬುಟ್ಟಿಯಲ್ಲಿ ತುಂಬಲು ಬಳಸುವ ಕಬ್ಬಿಣದ ತಗಡಿನ ಸಲಕರಣೆಯಾಗಿದೆ.

• **ಛಡಿ** :– ಸುಟ್ಟಿರುವ ಸುಣ್ಣವನ್ನು ಭಟ್ಟಿಯಿಂದ ಹೊರಗೆ ಎಳೆಯಲು ಬಳಸುವ ಕಬ್ಬಿಣದ ಸಲಿಕೆಯಂತಹ ಚಿಕ್ಕದಾದ ಸಾಧನ. ಕೆಲವು ಸಲ ಸುಣ್ಣವನ್ನು ಹೊರಗೆಳೆಯುವಾಗ ಇನ್ನೂ ಬಿಸಿಯಿರುವಾಗಲಂತೂ ಈ ಛಡಿಯ ಸಹಾಯ ಸರಣೀಯವಾಗಿರುತ್ತದೆ.

• **ಸುತ್ತಿಗೆ** :– ಸುಣ್ಣದ ಕಲ್ಲು ದೊಡ್ಡ ಗಾತ್ರವಾಗಿರುವುದರಿಂದ ಅದನ್ನು ಚಿಕ್ಕ ಚಿಕ್ಕ ಹರಳನ್ನಾಗಿ ಮಾಡುವಾಗ ಕುಟ್ಟಲು ಬಳಸುವ ಕಟ್ಟಿಗೆಯ ಕಾವು ಉಳ್ಳ ಕಬ್ಬಿಣದ ಸಾಧನ.

• **ಗೋಣಿಚೀಲ** :– ಸುಣ್ಣವನ್ನು ತುಂಬಿಕೊಂಡು ಬೇರೆ ಬೇರೆ ಗ್ರಾಮಗಳು, ನಗರಗಳಿಗೆ ತುಂಬಿಕೊಂಡು ಹೋಗಲು ಬಳಸುವ ಸೆಣಬಿನಿಂದ ತಯಾರಿಸಿದ ಚೀಲ. ಇದು ಸುಮಾರು ೩೫ ರಿಂದ ೪೦ ಸೇರು ಸುಣ್ಣವನ್ನು ತುಂಬುವಷ್ಟು ದೊಡ್ಡದಾಗಿರುತ್ತದೆ.

• **ಸೇರು** :–ಸುಣ್ಣವನ್ನು ಅಳೆಯಲು ಬಳಸುವ ಸಲಕರಣೆ. ಸುಮಾರು ೧ ಲೀಟರ್ ಮಾಪನಕ್ಕಿಂತಲೂ ಸ್ವಲ್ಪ ದೊಡ್ಡದಾಗಿರುತ್ತದೆ.

• **ಬುಟ್ಟಿ** :– ಹರಳು ಮಾಡಿದ ಸುಣ್ಣದ ಕಲ್ಲನ್ನು ತುಂಬಿಕೊಂಡು ಭಟ್ಟಿಯಲ್ಲಿ ಹಾಕಲು ಮತ್ತು ಸುಣ್ಣವನ್ನು ತುಂಬಿಕೊಂಡು ಗೋಣಿಚೀಲದಲ್ಲಿ ಹಾಕಲು ಬಳಸುವ ಸಲಕರಣೆ. ಇದು ಮೊದಲು ಈಚಲು ಅಥವಾ ಬಿದಿರಿನ ಬುಟ್ಟಿಯಾಗಿರುತ್ತಿತ್ತು. ಹಗುರ ಅಗುವುದೆಂಬ ಕಾರಣಕ್ಕಾಗಿ ಈಗೀಗ ಪ್ಲಾಸ್ಟಿಕ್ ಬುಟ್ಟಿಗಳನ್ನು ಬಳಸುತ್ತಿದ್ದಾರೆ.

• **ಕುರುಳು** :– ಸುಣ್ಣ ಸುಡುವಾಗ ಭಟ್ಟಿಯ ತಳಭಾಗದಲ್ಲಿ ಹಾಕಿದ ದನದ ಸಗಣಿಯಿಂದಾದ ಇಂಧನ.

• **ಎಳನೀರ ಪಟ್ಟ (ತೆಂಗಿನ ಪಟ್ಟ)** :– ಸುಣ್ಣ ಸುಡುವಾಗ ಭಟ್ಟಿಯ ತಳಭಾಗದಲ್ಲಿ ಹಾಕಿದ ತೆಂಗಿನ ಮರದ ಗರಿಯ ಒಣಗಿದ ಭಾಗವು ಇಂಧನವಾಗಿ ಬಳಕೆಯಾಗುತ್ತದೆ.

• **ಬಂಡಿ/ ಟಂ ಟಂ** :– ಸುಣ್ಣವನ್ನು ಊರಿಂದ ಊರಿಗೆ ಸಾಗಿಸಲು ಬಳಸುವ ವಾಹನಗಳಾಗಿವೆ. ಎತ್ತಿನ ಗಾಡಿಯೇ ಬಂಡಿ. ಈಗೀಗ ಈ ಬಂಡಿಗಳೂ ವಿರಳವಾಗುತ್ತಿವೆ.

ಏಕೆಂದರೆ ಎತ್ತುಗಳನ್ನು ಸಾಕುವುದು ತುಂಬಾ ಕಷ್ಟಕರವಾಗುತ್ತಿದೆ! ಹೀಗಾಗಿಟಂ ಟಂ ಎಂಬ ತ್ರಿಚಕ್ರ ವಾಹನವನ್ನು ಚಕ್ಕಡಿಯ ಬದಲಾಗಿ ಬಳಸಲಾಗುತ್ತಿದೆ.

- **ಇದ್ದಿಲು** :- ಸುಣ್ಣದ ಕಲ್ಲಿನೊಂದಿಗೆ ಇಂಧನವಾಗಿ ಬೆರೆಸುವ ವಸ್ತುವೇ ಇದ್ದಿಲು. ಹಿಗ್ಗಾಲಿಗಿಡವನ್ನು ಸರ್ಕಾರಿಜಾಲಿ, ಮುಳ್ಳುಜಾಲಿ, ಕರಿಜಾಲಿ, ಬಳ್ಳಾರಿಜಾಲಿ ಎಂಬ ಹೆಸರಿನಿಂದ ಕರೆಯಲ್ಪಡುವ ಜಾಲಿಯ ಮರವನ್ನು ಕಡಿದು, ಸುಡುವಭಟ್ಟಿಯಲ್ಲಿ ಸುಡುವ ಮೂಲಕ ಇದ್ದಿಲು ಮಾಡಿ ಮಾರಾಟ ಮಾಡುವ ಒಂದು ಉದ್ದಿಮೆಯೇ ತಲೆ ಎತ್ತಿ ನಿಂತಿದೆ. ಎರಡು ಬಗೆಯ ಇದ್ದಿಲು :- ಇದ್ದಿಲಿನಲ್ಲಿಯೂ ಎರಡು ಬಗೆಗಳಿವೆ. ೧) ಗಾಳಿ ಇದ್ದಿಲು ೨) ಭಟ್ಟಿ ಇದ್ದಿಲು. ಗಾಳಿ ಇದ್ದಿಲು ಎಂದರೆ ಒಲೆ ಉರಿದ ನಂತರ ಉಳಿಯು ಕೆಂಡಕ್ಕೆ ನೀರು ಹಾಕಿ ತಯಾರಿಸುವ ಇದ್ದಿಲು. ಭಟ್ಟಿ ಇದ್ದಿಲು ಎಂದರೆ ಭಟ್ಟಿಯಲ್ಲಿ ಉದ್ದೇಶಪೂರ್ವಕವಾಗಿಯೇ ತಯಾರಿಸುವ ಇದ್ದಿಲು. ಇದಕ್ಕೆ ಕಲ್ಲಿದ್ದಲಿನ ಶಕ್ತಿ ಇರುತ್ತದೆ.

- **ಭಟ್ಟಿ ಇದ್ದಿಲು ತಯಾರಿಕೆಯ ವಿಧಾನ** :-ಈ ಜಾಲಿ ಗಿಡವನ್ನು ತುಂಡು ತುಂಡು ಮಾಡಿ ಪಿರಾಮಿಡ್ಡಿನ ಆಕಾರದಲ್ಲಿ ಜೋಡಿಸುತ್ತಾರೆ. ಮೊದಲೇ ಅದರ ತಳಭಾಗದಲ್ಲಿ ಉರುವಲು ಒಣಕಟ್ಟಿಗೆ, ಕುರುಳು ಹಾಕಿರುತ್ತಾರೆ. ಕಟ್ಟಿಗೆಯ ಸುತ್ತಮುತ್ತ ನಾನಾ ತರಹದ ತಪ್ಪಲು ಮತ್ತು ಅರಲು (ಒದ್ದೆಮಣ್ಣು)ನಿಂದ ಹೊದಿಕೆ ಮಾಡುತ್ತಾರೆ. ಅದು ಗೂಡಿನ ಆಕಾರವಾಗುತ್ತದೆ.ಅದರಒಂದು ಸಣ್ಣ ಕಿಂಡಿಯಾಕಾರ ಜಾಗದಲ್ಲಿ ಬೆಂಕಿ ಹಚ್ಚುತ್ತಾರೆ. ಈ ದಹನ ಪ್ರಕ್ರಿಯೆ ಸಂಪೂರ್ಣ ಮುಗಿಯಲು ಮೂರ್‍ನಾಲ್ಕು ದಿನವಾದರೂ ಹಿಡಿಯುತ್ತದೆ. ಕಟ್ಟಿಗೆ ಸುಟ್ಟ ನಂತರ ಗೂಡಿನೊಳಗೇ ಇದ್ದಿಲು ತಯಾರಾಗುತ್ತದೆ. ಹೀಗೆ ದಹಿಸಿದ ಇದ್ದಿಲನ್ನು ಒಂದು ಬದಿಯಿಂದ ಹೊರಗೆಳೆದು ಗಾಳಿಗೆ ಹಾಕಿ ನಂತರ ಮಾರಾಟಕ್ಕೆ ಅಣಿಗೊಳಿಸುತ್ತಾರೆ. ಹೀಗೆ ಒಂದು ಭಟ್ಟಿಯಲ್ಲಿ ೧೦೦ ರಿಂದ ೨೦೦ ಚೀಲದವರೆಗೆ ಇದ್ದಿಲು ಪಡೆಯಬಹುದು. ಕುಷ್ಟಗಿಯ ಪರಿಸರದಲ್ಲಿ ಬಹು ಮುಖ್ಯವಾಗಿ ಜಾಲಿಮರದ ಇದ್ದಿಲನ್ನು ಸುಣಗಾರಿಕೆಯಲ್ಲಿ ಬಳಸುತ್ತಾರೆ. ಅಲ್ಲದೆ ಕಂಬಾರಿಕೆ, ಕುಂಬಾರಿಕೆಯಲ್ಲಿ ಬಳಸುತ್ತಾರೆ. ಜತೆಗೆ ಪಟ್ಟಣಗಳಲ್ಲಿ ನೀರು ಕಾಯಿಸಲು, ಉರುವಲು ಇಂಧನವಾಗಿ, ಮಡಿವಾಳರು ಬಟ್ಟೆ ಇಸ್ತ್ರಿಮಾಡಲು ಬಳಸುತ್ತಾರೆ. ಇದರಿಂದಾಗಿ ಇದ್ದಿಲಿಗೆ ಭಾರೀ ಬೇಡಿಕೆಯಿದೆ. ಒಂದು ಚೀಲ ಇದ್ದಿಲುಗೆ ೩೫೦ ರಿಂದ ೪೦೦ ರೂ. ಬೆಲೆ ಇದೆ. "ಈ ಇದ್ದಿಲಿಗೆ ಸ್ಥಳೀಯ ಮಾರುಕಟ್ಟೆಯ ಜೊತೆಗೆ ಪಕ್ಕದ ರಾಜ್ಯಗಳಾದ ಮಹಾರಾಷ್ಟ್ರ, ತಮಿಳನಾಡು, ಆಂಧ್ರಪ್ರದೇಶದಿಂದಲೂ ಬೇಡಿಕೆ ಇದೆ"- ಎನ್ನುತ್ತಾರೆ ವೃತ್ತಿಪರ ಇದ್ದಿಲು ಮಾರಾಟಗಾರ ಪರಸಪ್ಪ ಸುಣಗಾರ.

"ವಾಸ್ತವವಾಗಿ ಇದ್ದಿಲು ಉತ್ಪಾದನೆಯಿಂದ ನಮ್ಮ ಗ್ರಾಮೀಣ ಜನರು ಆರ್ಥಿಕವಾಗಿ ಸಬಲರಾಗುತ್ತಿರುವುದರಲ್ಲಿ ಅನುಮಾನವಿಲ್ಲ. ಗ್ರಾಮೀಣ ಭಾಗದಲ್ಲಿ ಇದ್ದಿಲು ಉತ್ಪಾದನೆಯನ್ನು ಸಣ್ಣ ಇಂಧನ ಉದ್ಯಮವಾಗಿ ಬೆಳಸಬೇಕು. ಆಗ ಮಾತ್ರ ಗ್ರಾಮೀಣ ಜನರ ಬದುಕು ಹಸನಾಗುವುದು"– ಎಂಬ ಮನದಾಳದ ಮಾತು ಮಾಜಿ ಸುಣ್ಣಗಾರ ಹಾಲಿ ಪಿ.ಡಿ.ಒ. ಎಫ್.ಡಿ.ಕಟ್ಟಿಮನಿಯವರು.

**ಸುಣ್ಣ ತಯಾರಿಕೆಯ ವಿಧಾನ :**

ಚೊಳಚಗುಡ್ಡದಿಂದ ಟ್ರ್ಯಾಕ್ಟರಗಳ ಮೂಲಕ ತಂದ ಸೀಮೆಕಲ್ಲನ್ನು ಸುತ್ತಿಗೆಯಿಂದ ಒಡೆದು ಸಣ್ಣ ಸಣ್ಣ ಹರಳುಗಳನ್ನಾಗಿಸಬೇಕು. ಸುಣ್ಣದ ಭಟ್ಟಿಯ ತಳದಲ್ಲಿ ೨ ಹೆಡಿಗಿ ಸೆದಿ, ಕುರುಳು ಅಥವಾ ತೆಂಗಿನಪಟ್ಟಿ ಹಾಕಬೇಕು. ನಂತರ ೧೦ ಬುಟ್ಟಿ ಸೀಮೆಕಲ್ಲಿಗೆ ೦೮ ಬುಟ್ಟಿ ಇದ್ದಿಲು ಬೆರೆಸಿ ಭಟ್ಟಿಯ ತುಂಬ ಹಾಕಬೇಕು.ನಂತರ ಭಟ್ಟಿಯ ಕೆಳಗಿನ ಕಿಂಡಿಯಲ್ಲಿ ಬೆಂಕಿಹಚ್ಚಿದಾಗ ಇಂಧನದ ಜೊತೆತಗೆ ಸೀಮೆಕಲ್ಲೂ ಸುಡುತ್ತಾ ಹೋಗುತ್ತದೆ. ಸುಟ್ಟ ಸುಣ್ಣದ ಕಲ್ಲು ಭಟ್ಟಿಯಲ್ಲಿ ಕೆಳಕ್ಕೆ ಜಾರಿದಂತೆ ಮೇಲ್ಭಾಗ ಖಾಲಿಯಾಗುತ್ತದೆ. ಆಗ ಬೇಕಾದ್ರೆ.. ಮತ್ತೊಂದಷ್ಟು ಸುಣ್ಣದಕಲ್ಲು ಮತ್ತು ಇದ್ದಿಲಿನ ಮಿಶ್ರಣವನ್ನು ತುಂಬಬಹುದು. ನಂತರ ಇಂದು ಬುಟ್ಟಿ ಬರೀ ಇದ್ದಿಲನ್ನೇ ಹಾಕಬೇಕು. ಅಂದಾಗ ಮಾತ್ರ ಹೆಚ್ಚು ಹೆಚ್ಚು ಸುಣ್ಣವನ್ನು ತಯಾರಿಸಬಹುದು. ಸುಮಾರು ಒಂದು ಹಗಲು, ಒಂದು ರಾತ್ರಿ ದಹನಕ್ರಿಯೆ ನಡೆದ ನಂತರ ಸುಣ್ಣ ತಯಾರಾಗುತ್ತದೆ! ನಂತರ ಛಡಿಯ ಮೂಲಕ ಸುಣ್ಣವನ್ನು ಕಿಂಡಿಯ ಮೂಲಕ ಹೊರಗೆಳೆಯುತ್ತಾರೆ. ಆಗ ಸುಣ್ಣ ಇನ್ನೂ ಸುಡುತ್ತಿರುವುದೂ ಉಂಟು!

**ಸುಣ್ಣ ತಯಾರಿಕೆಯಿಂದ ಬರುವ ರೋಗ–ರುಜಿನಗಳು :**

ಹೀಗೆ ಇನ್ನೂ ಸುಡುತ್ತಿರುವ ಸುಣ್ಣವನ್ನು ತೆಗೆಯುವುದರಿಂದ ಅನೇಕ ರೋಗ–ರುಜಿನಗಳೂ ಬರುವುದುಂಟು!

ಕೆಮ್ಮು, ದಮ್ಮು, ಕ್ಷಯರೋಗ, ಕ್ಯಾನ್ಸರ್, ಡಸ್ಟ್ ಅಲರ್ಜಿ ಅಲ್ಲದೇ ಸ್ತ್ರೀಯರಿಗೂ ಅನೇಕ ರೀತಿಯ ರೋಗಗಳಿಗೆ ತುತ್ತಾಗುತ್ತಾರೆ. ಭಟ್ಟಿಯ ಹೊಗೆಯಿಂದ ವಾಯುಮಾಲಿನ್ಯ ಉಂಟಾಗುತ್ತದೆಯಾದರೂ ಅನಿವಾರ್ಯವಾಗಿದೆ.

**ಸುಣ್ಣದ ವಿಧಗಳು :**

ಸುಣ್ಣದಲ್ಲಿ ಪ್ರಮುಖವಾಗಿ ಎರಡು ರೀತಿ ಇವೆ- ೧)ಗೋಡೆಗೆ ಹಚ್ಚುವ ಸುಣ್ಣ ೨) ತಿನ್ನುವ ಸುಣ್ಣ.

**ಸುಣ್ಣದ ಬಳಕೆ ಎಲ್ಲೆಲ್ಲಿ ?**

ವೈವಿಧ್ಯಮಯ ಬಣ್ಣಕ್ಕೆ ಮರುಳಾದ ಆಧುನಿಕ ನಾಗರಿಕರು ಸುಣ್ಣ ಬಳಸುವುದನ್ನು ತೀರಾ ಕಡಿಮೆ ಮಾಡುತ್ತಿದ್ದಾರೆ. ಬಣ್ಣದ ಜೊತೆಗೆ ಸುಣ್ಣದ ಹೋರಾಟ ಅಸಾಧ್ಯವೆನಿಸುತ್ತಿದೆ. ಇದನ್ನು ಗಮನಿಸಿದರೆ "ಎಂದಾದ್ರೂ ಒಂದ್ ದಿನ ಈ ಸುಣ್ಣಗಾರಿಕೆ ಸ್ಥಬ್ಧ ಆಗೂದs ಸರs! ಖಂಡಿತವಾಗ್ಲೂ ಇದಕ್ಕ ಆಯುಷ್ಯ ಇಲ್ಲ. ಸುಣ್ಣಗಾರರೆಲ್ಲ ಶಿಕ್ಷಣವಂತರಾಗಿ ಬೇರೆ ಉದ್ಯೋಗದಲ್ಲಿ ತೊಡಗುವುದು ಅನಿವಾರ್ಯವಾಗಲಿದೆ" ಎಂಬ ಆಘಾತಕಾರಿ ಹಾಗೂ ಸತ್ಯಕ್ಕೆ ಸಮೀಪದ ಅನಿಸಿಕೆಯನ್ನು ಹೊರಗೆಡವಿದವರು ಎಸ್.ಕೆ. ಕಟ್ಟಿಮನಿಯವರು. ಆದರೂ ವಿಶಿಷ್ಟವಾದ ಸಂಪ್ರದಾಯವನ್ನು ಹೊಂದಿದ ಭಾರತದಲ್ಲಿ ಕೆಲವು ಕಾರ್ಯಕ್ರಮಗಳಲ್ಲಿ ಸುಣ್ಣವನ್ನು ಬಳಸಲೇಬೇಕಾಗುತ್ತದೆ. ಇಡೀ "ಮನೆಗೆಲ್ಲ ಆಧುನಿಕ ಬಣ್ಣಗಳಿಂದ ಸಿಂಗರಿಸುವ ಮೊದಲು ಗೋಡೆ ಹಚ್ಚುವುದು ಸುಣ್ಣವನ್ನೇ ಎಂಬುದನ್ನು ಮರೆಯುವಂತಿಲ್ಲ! ಅಲ್ಲದೇ ಕೆಲವರು ದೇವರ ಕೋಣೆ ಮಾತ್ರ ೧೫ ದಿನಕ್ಕೊಮ್ಮೆ ಸುಣ್ಣದಿಂದಲೇ ಮಡಿ ಮಾಡುವ ಜನರಿನ್ನೂ ಇದ್ದಾರೆ" ಎಂಬ ಸತ್ಯವನ್ನು ಶಿಕ್ಷಕ ಬಸವರಾಜ ವ್ಯಾಪಾರಿಯವರು ಹೊರಗೆಡವಿದರು! ಒಲೆ, ಜಗಲಿ ಸಾರಿಸಲು ಸುಣ್ಣವೇ ಬೇಕು. ಲಗ್ನದ ಸಂದರ್ಭದಲ್ಲಿ ಸುಣ್ಣದ ಪಾತ್ರವೂ ಗಣನೀಯವಾಗುತ್ತದೆ. ಮನೆಗೆ ಜೋರು ಬಿಡುವುದು, ಛಟ್ಟು ಬಡಿಯುವುದು. ಹಂದ್ರಗಂಬ-ಹಾಲಗಂಬಕ್ಕೆ ಸುಣ್ಣವೂ ಬೇಕಾಗುತ್ತದೆ. ಅಲ್ಲದೇಕಾರು ಹುಣ್ಣಿಮೆಯಲ್ಲಿ ಒರಳುಕಲ್ಲು ಪೂಜೆಗೆ ಸುಣ್ಣ-ಸುರುಮ ಅಗತ್ಯವೆನಿಸುತ್ತದೆ. ಕೆಲವು ಮಿಲ್‌ಗಳಿಗೆ ಸುಣ್ಣವನ್ನೇ ಹಚ್ಚುತ್ತಾರೆ. ನೀರು ಸಂಗ್ರಹಣಾ ತೊಟ್ಟಿಗಳಲ್ಲೂ ಸುಣ್ಣ ಅನಿವಾರ್ಯ. ರೇಷ್ಮೆ ಹಾಗೂ ದಾಳಿಂಬೆ ಬೆಳೆಗೆ ಕೀಟನಾಶಕವಾಗಿ ಪರಿಣಮಿಸುತ್ತದೆ! ವೀಳ್ಯೆದೆಲೆಗೆ ಸುಣ್ಣವಿಲ್ಲದೇ ರುಚಿಸುವುದೇ ಇಲ್ಲ. ಗಚ್ಚು ಅಥವಾ ಗಾರೆ ಕೆಲಸದಲ್ಲಿ ಸುಣ್ಣ ಬೇಕೇ ಬೇಕು. ಇಷ್ಟೇ ಅಲ್ಲ ಕೋಣ, ಕುರಿಗಳ ಬಲಿಗೂ ಸುಣ್ಣದ ನೀರು ಕುಡಿಸುವುದೂ ಉಂಟು!!

**ಸುಣ್ಣಗಾರಿಕೆಯಿಂದ ವಿವಿಧ ಉದ್ಯೋಗಗಳು :**

ಸುಣ್ಣ ಸುಡುವ ಕಾಯಕ ಅನೇಕರಿಗೆ ಉದ್ಯೋಗವನ್ನೂ ನೀಡುತ್ತದೆ. ಸುಣ್ಣದ ಕಲ್ಲನ್ನು ಎಬ್ಬಿ ಟ್ರ್ಯಾಕ್ಟರಿಗೆ ತುಂಬುವ ಕೂಲಿಯವರು, ತೆಂಗಿನಪಟ್ಟಿ ತುಂಬುವವರು, ಕುರುಳು ತಯಾರಿಸುವವರು, ಟ್ರ್ಯಾಕ್ಟರ್ ಮಾಲೀಕನಿಗೆ ಬಾಡಿಗೆ, ಸುಣ್ಣದ ಕಲ್ಲನ್ನು ಕಡಿಯನ್ನಾಗಿ ಒಡೆಯುವವನಿಗೆ ಕೂಲಿ.ಇದ್ದಿಲು ತಯಾರಿಕೆಯವರು, ಕಟ್ಟಿಗೆ ಕಡಿಯುವವರು, ಸುಣ್ಣ ಮಾರಲು ಪರ ಊರಿಗೆ ಹೋದರೆ ಟಂಟಂನವರಿಗೆ ಬಾಡಿಗೆ. ಹೀಗೆ ಬಂಡವಾಳ ಕಡಿಮೆ, ಭೌತಿಕ ಶ್ರಮ ಹೆಚ್ಚಾಗಿರುವ ಸುಣ್ಣಗಾರಿಕೆಯು ಅನೇಕರಿಗೆ ಅನ್ನದಾತವಾಗಿದೆ.

*

**೩.೫.೬ ಭಾಗ್ಯನಗರದ ಕೇಶೋದ್ಯಮ :**

ಕೊಪ್ಪಳ ನಗರಕ್ಕೆ ಹೊಂದಿಕೊಂಡಂತಿರುವ ಭಾಗ್ಯನಗರದಲ್ಲಿ ಕುಷ್ಟಗಿ ಪರಿಸರದ ವಿಶಿಷ್ಟ ಪಾರಂಪರಿಕ ಕಸಬು ಕೇಶೋದ್ಯಮ ಪ್ರಗತಿ ಪಥದಲ್ಲಿದೆ. ಬಾಚುವಾಗ ತಲೆಯಿಂದ ಉದುರುವ ಕೊದಲನ್ನು ಸಿಂಬಿ ಸುತ್ತಿ (ಉಂಡೆ ಮಾಡಿ) ಎಸೆಯುವವರೇ ಹೆಚ್ಚು. ಅದು ಯಾರೂ ಅಪೇಕ್ಷಿಸದ ತ್ಯಾಜ್ಯವಾಗಿ ಪರಿಸರ ಮಾಲಿನ್ಯಕ್ಕೆ ಕಾರಣವಾಗುತ್ತಿತ್ತು. ಆದರೆ ಕೊಪ್ಪಳದ ಭಾಗ್ಯನಗರದಲ್ಲಿ ಇಂಥ ಕೂದಲಿಗೂ ಗೌರವವಿದೆ. ಆ ತ್ಯಾಜ್ಯವನ್ನೇ ಆಯ್ದುಕೊಂಡು ಅಲ್ಲಿ ಮಾಲಿನ್ಯವಾಗುವುದನ್ನು ತಪ್ಪಿಸುವುದಲ್ಲದೇ; ಅಂಥ ಕೂದಲನ್ನೇ ಸಂಗ್ರಹಿಸಿ, ಸಂಸ್ಕರಿಸಿ, ಹೊಳಪಿತ್ತು ಸಾಗರದಾಚೆಗೂ ಕಳುಹಿಸಲಾಗುತ್ತಿದೆ. ಕೋಟ್ಯಾಂತರ ರೂಪಾಯಿ ವಿದೇಶೀ ವಿನಿಮಯ ಗಳಿಸಿ ಕೊಡುವ ಈ ಉದ್ಯಮ ನೂರಾರು ಕೈಗಳಿಗೆ ಮುಖ್ಯ ಜೀವನಾಸರೆಯಾಗಿದೆ. ಈಚಿನ ದಿನಗಳಲ್ಲಿ ರೂಪಾಯಿ ಮೌಲ್ಯವರ್ಧನೆಯಿಂದಾಗಿ ಕೊಂಚ ಆತಂಕ ಅನಭವಿಸುತ್ತಿರುವ ಇದರ ಒಳ-ಹೊರ ಮಗ್ಗಲುಗಳ ಮೇಲೆ ಹೀಗೊಂದು ಸಾಮಾಜಿಕ ಹಾಗೂ ಜಾನಪದೀಯ ಸಂಶೋಧನಾತ್ಮಕ ಅಧ್ಯಯನ ಕುತೂಹಲದ ನೋಟ.

**ಭಾಗ್ಯ ನಗರದ ಹಿನ್ನೆಲೆ :**

ಗ್ರಾಮೀಣ ಸೊಗಡಿನ, ಜಾನಪದ ವಸ್ತು ಚೌರಿಕೂದಲು ಕಲೆಯನ್ನು ಕಣ್ಣಿಗೆ ಕಟ್ಟುವಂತೆ ತಯಾರಿಸಿ ಜನಮನ ಗೆದ್ದ ಕಲಾಕಾರರ ದೊಡ್ಡಪಡೆಯನ್ನೇ ತನ್ನೊಡಲೊಳಗೆ ಇಟ್ಟುಕೊಂಡಿದ್ದ ಭಾಗ್ಯನಗರಕ್ಕೂ ಕೂದಲಿಗೂ ತುಂಬಾ ನಂಟಿದೆ! ಕುಷ್ಟಗಿಯಿಂದ ೪೮ ಕಿ.ಮೀ. ಪಯಣಿಸಿದರೆ ಸಿಕ್ಕುವ ಅಪ್ಪಟ ಕೇಶೋದ್ಯಮ ಕಲಾಕಾರರು ಹಾಗೂ ಪಕ್ಕಾ

ನೇಕಾರರ ಊರು. ಇಲ್ಲಿನ ೪೫ ಕ್ಕೂ ಹೆಚ್ಚು ಕುಟುಂಬಗಳು ಕೇಶೋದ್ಯಮ ಪಾರಂಪರಿಕ ಕರಕುಶಲ ಕಲೆಯನ್ನು ವೃತ್ತಿಯನ್ನಾಗಿ ಮಾಡಿಕೊಂಡಿವೆ.

ಮೊದಲು ಇಲ್ಲಿ ಭಾಗ್ಯನಗರವೆಂಬ ಊರು ಕೂಡ ಇದ್ದಿಲ್ಲ. ಇಲ್ಲಿನ ನಿವಾಸಿಗಳು ಮೂಲತಃ ಇಲ್ಲಿಯವರಲ್ಲ ಇವರೆಲ್ಲರೂ ಕಾತರಕಿ ಗ್ರಾಮದವರು, ೧೯೫೩ರಲ್ಲಿ ತುಂಗಭದ್ರಾ ಜಲಾಶಯದ ಹಿನ್ನೀರಿನಲ್ಲಿ ಕಾತರಕಿ ಮುಳುಗಡೆಯಾಗಿದ್ದರಿಂದ ಅಲ್ಲಿಂದ ಇಲ್ಲಿಗೆ ಪುನರ್ವಸತಿಗಾಗಿ ಬಂದ ಇವರು ತಮ್ಮದೇ ಪ್ರತ್ಯೇಕ ಗ್ರಾಮವೊಂದನ್ನು ಕಟ್ಟಿಕೊಂಡರು. ಇದೇ ಇಂದಿನ ಭಾಗ್ಯನಗರ.

ಕಾತರಕಿ ಗ್ರಾಮ ನೇಕಾರಿಕೆ ಹಾಗೂ ಕೈಗಾರಿಕೋದ್ಯಮದಲ್ಲೂ ಪ್ರಗತಿ ಸಾಧಿಸಿದ ಊರಾಗಿತ್ತು. ಅಲ್ಲಿನ ನೇಕಾರರು ಆಗಿನ ಕುಣಿ ಮಗ್ಗದಲ್ಲಿ ತಯಾರಿಸುತ್ತಿದ್ದ ಬನಾರಸ್ ರೇಷ್ಮೆ ಕಣಗಳಿಗೆ ಮಹಾರಾಷ್ಟ್ರದ ನಾಂದೇಡ್, ಬನಾರಸ್ ಮುಂತಾದೆಡೆಯಲ್ಲಿ ಭಾರೀ ಬೇಡಿಕೆ ಇದ್ದಿತ್ತು. ಕಾಲಾಂತರದಲ್ಲಿ ರೇಷ್ಮೆ ಸೀರೆಗಳ ಬೇಡಿಕೆ ಕಡಿಮೆಯಾಗತೊಡಗಿತು. ಆಗ ಕುಪ್ಪಸದ ಖಣ ನೇಯ್ಯುವುದಕ್ಕೆ ಪ್ರಾರಂಭಿಸಿದರು. ಕುಣಿ ಮಗ್ಗದಲ್ಲೇ ನೋಡುಗರು ಬೆರಗಾಗುವಂಥ ಕುಪ್ಪಸದ ಖಣಗಳನ್ನು ನೇಯುತ್ತಿದ್ದರು. ಆ ಪ್ರದೇಶ ತುಂಗಭದ್ರಾ ಅಣೆಕಟ್ಟೆಯ ಹಿನ್ನೀರಿನಲ್ಲಿ ಮುಳುಗಡೆಯಾದ ಬಳಿಕ ಇವರೆಲ್ಲ ಭಾಗ್ಯನಗರಕ್ಕೆ ಬಂದರು. ಆ ಹೊತ್ತಿಗೆ ಖಣ ತನ್ನ ಮಹತ್ವವನ್ನು ಬೇಡಿಕೆಯನ್ನೂ ಕಳೆದುಕೊಂಡಿತ್ತು. ಸರಿ! ಅದೇ ಕೈಮಗ್ಗದಲ್ಲಿ ಖಣಗಳ ಬದಲಿಗೆ ಮಸರಾಯಿ ಸೀರೆಗಳನ್ನು ನೇಯಲು ಆರಂಭಿಸಿದರು! ಹತ್ತಾರು ವರ್ಷಗಳ ಬಳಿಕ ಕೈ ಮಗ್ಗಗಳೂ ಅವರ ಹೊಟ್ಟೆ ತುಂಬಿಸಲಾರದ ಪರಿಸ್ಥಿತಿ ಎದುರಾಯಿತು.

ಆಗ ಅವರೆಲ್ಲ ಕೈ ಮಗ್ಗದ ಬದಲಿಗೆ ಪವರ್‌ಲೂಮ್‌ಗಳ ಮೊರೆ ಹೋದರು. ಮಸರಾಯಿ ಸೀರೆ ನೇಯುವ ಯುಗ ಪ್ರಾರಂಭವಾಯಿತು. ನೇಕಾರಿಕೆ ನೆಲ ಕಚ್ಚುವ ಸಂಕಷ್ಟದ ಪರಿಸ್ಥಿತಿಯನ್ನು ನೇಕಾರರು ಕಾಣಬೇಕಾಯಿತು. ಆ ಗ್ರಾಮ ತುಂಗಭದ್ರೆಯಲ್ಲಿ ಲೀನವಾಗುವ ಸಮಯ ಸಮೀಪಿಸಿದಂತೆ ಕಣ ನೇಯುವ ಕುಣಿಗಳು ಮುಚ್ಚಿದವು. ನೇಕಾರರ ತೋಳುಗಳು ಉತ್ಸಾಹವೂ ಬತ್ತಿತು ಹೊಸ ಊರಿಗೆ ಬಂದ ಆನಂತರ ನೇಕಾರರೇನೋ ಸೀರೆ ನೇಯುವುದನ್ನು ಮುಂದುವರಿಸಿದರು. ಆದರೆ ವ್ಯವಸಾಯವನ್ನೇ ನಂಬಿದ್ದ ರೈತರು ಅತಂತ್ರರಾದರು. ಅನ್ನಸಂಪಾದಿಸಿ ಕೊಡುತ್ತಿದ್ದ ಹಸಿರು ಹೊಲಗಳೆಲ್ಲ ಮುಳುಗಡೆಯಾಗಿ ಹೋಗಿದ್ದವು. ಕೈಗಾರಿಕಾ ಕೆಲಸದ ಗಂಧ-ಗಾಳಿ ಗೊತ್ತಿಲ್ಲದೆ ಹೊಟ್ಟೆಗೆ

ತಣೀರ ಬಟ್ಟೆಯೇ ಗತಿ ಎಂಬತಾಗಿದ್ದ ಸಮಯದಲ್ಲಿ ಅವರ ನೆರವಿಗೆ ಬಂದದ್ದೇ ಕೂದಲು ಉದ್ದಿಮೆ. ಈ ಸಂದರ್ಭದಲ್ಲಿ ಲಾಭದಾಯಕವೆಂದು ಕಾಣಿಸಿದ ಕೂದಲು ಉದ್ಯಮದಲ್ಲಿ ಜೀವನೋಪಾಯ ಕಂಡುಕೊಂಡರು.

**ಕೇಶ ಕರಕುಶಲಕಲೆ :**

ಮಹಿಳೆಯರು ತಲೆ ಬಾಚುವಾಗ ಉದುರಿ ಹೋಗುವ ಕೂದಲನ್ನೇ ಸಂಗ್ರಹಿಸಿ ಅವುಗಳಿಗೆ ಸುಂದರ ರೂಪ ಕೊಟ್ಟು ವಿದೇಶಗಳಿಗೆ ರಫ್ತು ಮಾಡಿ ಕೋಟ್ಯಂತರ ರೂಪಾಯಿ ಗಳಿಸುವ ಉದ್ಯಮವೊಂದು ಕೊಪ್ಪಳ ಜಿಲ್ಲೆಯ ಭಾಗ್ಯನಗರದಲ್ಲಿ ಸುಮಾರು ೧೯೬೬ರಿಂದಲೂ ಕಾರ್ಯನಿರ್ವಹಿಸುತ್ತಾ ಬಂದಿದೆ. ಮುಂಬೈಯಲ್ಲಿದ್ದ ಶ್ರೀ ಟಿ. ಆರ್. ಭಾವಿಕಟ್ಟಿಯವರಿಂದಲೇ ಭಾಗ್ಯನಗರದಲ್ಲಿ ಕೂದಲು ಉದ್ಯಮ ಪ್ರಾರಂಭವಾಯಿತು. ಮೊದ ಮೊದಲು ಈ ಕೂದಲಿನಿಂದ 'ಗಂಗಮ್ಮನ ಚೌರಿ' ತಯಾರಿಸುತ್ತಿದ್ದರು. ಮೋಟು ಜಡೆಯ ಮಹಿಳೆಯರು ತಮ್ಮ ಜಡೆಯನ್ನು ಇನ್ನಷ್ಟು ಉದ್ದ ಮಾಡಿಕೊಳ್ಳಲು ಈ ಗಂಗಮ್ಮನ ಚೌರಿ ಕೂದಲು ಬಳಸುತ್ತಿದ್ದರು. ಮಹಿಳಾ ಜಾನಪದೀಯ ಅಲಂಕಾರದಲ್ಲಿ ಚೌರಿ ಕೂದಲಕ್ಕೆ ವಿಶೇಷ ಸ್ಥಾನವಿತ್ತು. ಚೌರಿ ಕೂದಲು ತಯಾರಿಕೆಯು ಗುಡಿ(ಗೃಹ) ಕೈಗಾರಿಕೆಯ 'ಕೇಶ ಕರಕುಶಲಕಲೆ' ಆಗಿತ್ತು! ಈಗ ವಿಗ್ ತಯಾರಿಸುತ್ತಾರೆ; ಆದರೆ... ಭಾಗ್ಯನಗರದಲ್ಲಿ ಅಲ್ಲ; ವಿದೇಶದಲ್ಲಿ! ಗಂಗಮ್ಮನ ಚೌರಿ ಕೂದಲು ತಯಾರಿಸುವ ಕೇಶ ಕರಕುಶಲಕಲೆಗೆ ಇಡೀ ಕರ್ನಾಟಕದಲ್ಲಿಯೇ ಪ್ರಸಿದ್ಧಿಯಾಗಿದ್ದ ಭಾಗ್ಯನಗರದಲ್ಲಿ ಇಂದು ಕಠಾರಿಯವರ ಮನೆಯಲ್ಲಿ ಬಿಟ್ಟರೆ ಇನ್ನಾರ ಮನೆಯಲ್ಲೂ ಈ ಪಾರಂಪರಿಕ ಕಸಬು ಇಲ್ಲ! ಒಂದರ್ಥದಲ್ಲಿ ಇದು ಅಲ್ಲಿಯ ನೂರಾರು ಖಾಲಿ ಕೈಗಳಿಗೆ ಕೆಲಸ ನೀಡಿ ಉದ್ಯೋಗಕ್ಕೆ ದಾರಿ ಮಾಡಿ ಕೊಟ್ಟ ಗೃಹ ಕಸಬಾಗಿತ್ತು, ಹಾಗೆಯೇ ಗ್ರಾಮ ಕೈಗಾರಿಕೆಯೂ ಆಗಿತ್ತು. ಕೇಶ ಉದ್ದಿಮೆ ಇಂದು ಭಾರಿ ಪ್ರಮಾಣದಲ್ಲಿ ಬೆಳೆದಿದೆ. ಈ ಮೂಲಕ ಅಂತರರಾಷ್ಟ್ರೀಯ ಭೂಪಟದಲ್ಲಿ ಭಾಗ್ಯನಗರ ಚಿಕ್ಕ ಚುಕ್ಕೆಯಾಗಿ ಪರಿಚಯಿಸಿಕೊಳ್ಳುತ್ತಿರುವುದು ಹೆಮ್ಮೆಯ ಸಂಗತಿ!

ಮಹಿಳೆಯರ ತಲೆ ಬಾಚಿಕೊಳ್ಳುವಾಗ ಬಾಚಣಿಕೆಯ ಬಾಯಿಗೆ ಸಿಕ್ಕು, ಕಿತ್ತು ಬಂದ ಹಾಗೂ ಸತ್ತ್ವ ಕಳೆದುಕೊಂಡು ಉದುರಿದ ಕೂದಲನ್ನು ಈಗ ಎಸೆಯುವಂತಿಲ್ಲ, ಈ ಕೂದಲೇ ಅಚ್ಚರಿ ಹುಟ್ಟಿಸುವ ರೀತಿಯಲ್ಲಿ ಉದ್ಯಮವಾಗಿ ಬೆಳೆದು ಸಾಗರದಾಚೆಯ ಜನರ ಬಹುತೇಕ ಬೊಕ್ಕ ತಲೆಯನ್ನು ಕಂಗೊಳಿಸುವಂತೆ ಮಾಡಿದೆ. ಮಾತ್ರವಲ್ಲ ಮಾನವನ ದೇಹದಿಂದ ಬೇರ್ಪಟ್ಟ ಈ ನಿರುಪಯುಕ್ತವೆಂದು ಬಿಸಾಡುತ್ತಿದ್ದ ತಲೆಗೂದಲೂ ವಿದೇಶೀ

ವಿನಿಮಯದಿಂದ ಭಾರತಕ್ಕೆ ಕೋಟ್ಯಂತರ ರೂಪಾಯಿ ಗಳಿಸಿಕೊಡುತ್ತಿದೆ ಎಂಬುದು ಹೆಚ್ಚಿನವರಿಗೆ ತಿಳಿದಿಲ್ಲ.

ಭಾಗ್ಯನಗರದ ಕೂದಲು ವ್ಯವಹಾರ ಆರಂಭವಾಗಿದ್ದು ಸಣ್ಣಪುಟ್ಟ ಮನೆ-ಗುಡಿಸಲುಗಳಲ್ಲಿಯೇ. ಈಗ ಅದು ದೊಡ್ಡದಾಗಿ ಬೆಳೆದು ಅಲ್ಲಿನ ಜನರ ಪಾಲಿಗೆ ಭಾಗ್ಯದ ಬಾಗಿಲನ್ನೇ ತೆರೆದಿದೆ! ಜಿಲ್ಲಾ ಕೇಂದ್ರ ಕೊಪ್ಪಳದ ಸೆರಗಿನಲ್ಲೇ ಇದ್ದರೂ ಈ ಊರಿನ ಪರಿಚಯ ಕರ್ನಾಟಕದ ಅದೆಷ್ಟೋ ಜನರಿಗೆ ಇನ್ನೂ ತಿಳಿದಿಲ್ಲ. ಆದರೂ ಈ ಗ್ರಾಮ ಪರ ರಾಷ್ಟ್ರಗಳ ಕೇಶ ಉದ್ಯಮಿಗಳಿಗೆ ಪರಿಚಿತ ಗ್ರಾಮವಾಗಿದೆ! ಈ ಗ್ರಾಮ ಸಾವಿರಾರು ದುಡಿಯುವ ಕೈಗಳಿಗೆ ಕೆಲಸ ನೀಡಿದೆ. ಭಾರತದ ವಿದೇಶಿ ವಿನಿಮಯ ಗಳಿಕೆಯಲ್ಲಿ ಈ ತ್ಯಾಜ್ಯ-ಕೂದಲಿನ ಪಾಲೂ ಇದೆ.

**ಕೇಶೋದ್ಯಮದಲ್ಲಿ ತೊಡಗಿಕೊಂಡ ಸಮುದಾಯಗಳು :**

ಹೊಸ ಉದ್ಯೋಗವಾಗಿದ್ದ ಈ ಕೆಲಸದಲ್ಲಿ ಪಾಲ್ಗೊಳ್ಳಲು ಕೆಲಸ ಕಳೆದಿಕೊಂಡ ರೈತರು ಹಾಗೂ ನೇಕಾರರು ಮೊದಮೊದಲು ಹಿಂದೆ-ಮುಂದೆ ನೋಡಿದ್ದರು. ಆದರೆ ಕ್ರಮೇಣ ಸಂಪೂರ್ಣವಾಗಿ ಈ ಕೆಲಸಕ್ಕೆ ಒಗ್ಗಿಕೊಳ್ಳಲಾರಂಭಿಸಿದರು. ಜಾತಿ, ಮತ, ಪಂಥ, ಧರ್ಮ ಎಂಬ ಬೇಧ-ಭಾವವಿಲ್ಲದೆ ಎಲ್ಲ ಸಮುದಾಯ, ಸ್ತ್ರೀ-ಪುರುಷರು ಕೂದಲು ಸಂಗ್ರಹ, ಹೊಸ ಹೊಳಪು ನೀಡುವ ಕಾಯಕವೂ ಒಳಗೊಂಡಂತೆ ಮಾರಾಟದ ಹಂತದವರೆಗೂ ಪಾಲ್ಗೊಳ್ಳುತ್ತಾರೆ. ಸಾಮಾನ್ಯವಾಗಿ ಜಾಡರು, ಕುರುಬರು, ಸಾವಜಿಗಳು, ಮುಸ್ಲಿಂರು, ತೆಲುಗರು ಕೇಶೋದ್ಯಮದಲ್ಲಿ ತೊಡಗಿದ್ದಾರೆ. ಹಿಂದೆ ಇದ್ದ ಸುಮಾರು ೯೦೦೦ ಕಾರ್ಮಿಕರ ಪೈಕಿ ಈಗ ಕೇವಲ ೩೦೦ ಕಾರ್ಮಿಕರು, ೪೫ ಕುಟುಂಬಗಳು ಈ ಉದ್ಯಮದಲ್ಲಿ ತೊಡಗಿದ್ದಾರೆ.

**ಕಚ್ಚಾ ವಸ್ತು ಕೂದಲು ಸಂಗ್ರಹ :**

ಕೈಯಲ್ಲೊಂದು ಬೊಂಬಾಯಿ ಮಿಠಾಯಿ ಸುತ್ತಿದ ಕೋಲು ಹಿಡಿದವರು, ಇಲ್ಲವೇ ಪ್ಲಾಸ್ಟಿಕ್, ಸ್ಟೇಯ್ನ್‌ಲೆಸ್ ಸ್ಟೀಲ್ ಅಥವಾ ಅಲ್ಯುಮಿನಿಯಮ್ ಸಾಮಾನುಗಳ ಬುಟ್ಟಿಯನ್ನು ಹೊತ್ತವರು, ಇಲ್ಲವೇ ದೊಡ್ಡ ಕೈಚೀಲದ ಮುಂಭಾಗಕ್ಕೆ ಪಿನ್ನು, ಹೇರ್‌ಪಿನ್ನು, ಟಿಕಳಿ(ಬಿಂದಿ), ರಬ್ಬರ್‌ಬ್ಯಾಂಡ್, ಬೆಂಡಾಲಿ, ಸರಗಳಿಂದ ಜೋಡಿಸಿಕೊಂಡು 'ಕೂದ್ಲದಾವೇನ್ರೀ...... ಕೂದ್ಲ...... ?' ಎಂದು ಕೂಗುತ್ತಾ ಗಲ್ಲಿ ಗಲ್ಲಿಯಲ್ಲಿ ಸಾಗುವ

ಬಾಲಕ-ಬಾಲಕಿಯರು, ಸ್ತ್ರೀ-ಪುರುಷರು, ವೃದ್ಧ-ವೃದ್ಧೆಯರನ್ನು ಆಗಾಗ್ಯ ಕುಷ್ಟಗಿ ಪರಿಸರದ ಹಳ್ಳಿಗಳಲ್ಲಿ ಇಲ್ಲವೇ ಪಟ್ಟಣದಲ್ಲಿನ ಗಲ್ಲಿ ಗಲ್ಲಿಗಳಲ್ಲಿ ಈ ದೃಶ್ಯ ಸಾಮಾನ್ಯ. ಅದರಲ್ಲೂ 'ಕುಂಚಿಕೊರವರ ಮಹಿಳೆ'ಯರೇ ಹೆಚ್ಚಾಗಿ ಈ ಕಚ್ಚಾ ಕೂದಲು ಸಂಗ್ರಹದಲ್ಲಿ ತೊಡಗಿರುವುದುಂಟು.

"ನಮ್ಮ ಮಾವನವ್ರು ಬಸ್‌ಚಾರ್ಜಿಗೆ ರೊಕ್ಕಾ ಕೊಟ್ಟು, ಒಂದಿಷ್ಟು ಈ ಸಾಮಾನುಕೊಟ್ಟು ಕಳಿಸ್ತಾರ್ರಿ, ನಾವು ಊರೂರು ತಿರಿಗಿ ಕೂದಲ ತುಂಬಿಕೊಂಡ ಹೋಗಬೇಕ್ರಿ, ಇದs ನಮ್ಮ ಮನಿತನದ ಹೆಂಗ್ಸರ ಕೆಲಸ. ಒಮ್ಮೊಮ್ಮೆ ಕೂದಲ ಸಿಗಲಾರದಾಗs ಬಸ್‌ಚಾರ್ಜಿನಷ್ಟೂ ರೊಕ್ಕ ಆಗಲಿಲ್ಲಂದ್ರ ಬೈಸಿಕೊಳ್ಬೇಕ್ರಿ, ಎಲ್ಲಾ ನಮ್ ಹಣೇಬರಹ..." ಎಂದು ಗೋಳು ತೋಡಿಕೊಳ್ಳುವ ಭಾಗ್ಯನಗರದ ಲಕ್ಷ್ಮವ್ವ ಕುಂಚಿಕೊರವರ.

ಇವರು ಬಂದೊಡನೆ ಮಕ್ಕಳು ಬಾಚಿದಾಗ ಉದುರಿದ ಉದ್ದ ಕೂದಲಿನ ಗುಂಜುಗಳನ್ನು ಕೊಟ್ಟು ಮಿಠಾಯಿ ಪಡೆದುಕೊಂಡೋ, ಪಿನ್ನು, ಹೇರ್‌ಪಿನ್ನು, ಟಿಕಳಿ(ಬಿಂದಿ), ರಬ್ಬರ್‌ಬ್ಯಾಂಡ್, ಬೆಂಡಾಲಿ, ಸರಗಳನ್ನು ಪಡೆದುಕೊಂಡೋ ಖುಷಿಪಟ್ಟರೆ, ದೊಡ್ಡವರು ಗೃಹಬಳಕೆಗೆ ಬೇಕಾದ ಪ್ಲಾಸ್ಟಿಕ್, ಸ್ಟೀಲ್ ಇಲ್ಲವೇ ಅಲ್ಯುಮಿನಿಯಮ್ ಸಾಮಾನುಗಳನ್ನು ಪಡೆದು ಖುಷಿ ಪಡುತ್ತಾರೆ. ಹೀಗೆ ಊರೂರು ಅಲೆದು, ಗಲ್ಲಿ ಗಲ್ಲಿ ತಿರುಗಿ, ಬೀದಿ ಬೀದಿ ಸುತ್ತಿ ಸಂಗ್ರಹಿಸುವ ಸಣ್ಣಪುಟ್ಟ ಕೂದಲಿನ ಗುಂಜುಗಳ ಮಾರಾಟದಿಂದಲೇ ಇವರ ಹೊಟ್ಟೆ ತುಂಬುತ್ತದೆ. 'ಹನಿ ಹನಿಗೂಡಿದರೆ ಹಳ್ಳ, ತೆನಿ ತೆನಿಗೂಡಿದರೆ ಬಳ್ಳ' ಎಂಬ ಗಾದೆಯಂತೆ ಚಿಕ್ಕ ಚಿಕ್ಕ ಗುಂಜುಗಳಿಂದಲೇ ಕಿಲೋಗ್ರಾಮ್‌ಗಳಷ್ಟು ಕೂದಲು ಸಂಗ್ರಹವಾದರೆ... ಅವರಿಗೆ ೨೦೦೦ ದಿಂದ ೨೨೦೦ ರೂಪಾಯಿಗಳಿಗೆ ಮೋಸವಿಲ್ಲ! ಹಾಗೆ ನೋಡಿದರೆ ಈ ಕೂದಲು ತುಂಬುವವರೇ ಟಾರ್ ಎಣ್ಣೆ, ಅರಲು(ಹಸಿಮಣ್ಣು), ಮ್ಯಾಂಗನೀಸ್ ಅದಿರಿನಮಣ್ಣು ಕೊಬ್ರಿ ಎಣ್ಣೆಯೊಂದಿಗೆ ಕಲಬೆರಕೆ ಮಾಡುವ ಮೂಲಕ ತೂಕವನ್ನು ಹೆಚ್ಚಿಸುವಂತಹ ಉಪಾಯವನ್ನೂ ಮಾಡುವುದುಂಟಂತೆ!

ಈ ಉದ್ಯಮಕ್ಕೆ ಬೇರೆ ಎಲ್ಲೆಡೆಯಿಂದಲೋ ಕಚ್ಚಾವಸ್ತು ತರಿಸಿಕೊಳ್ಳಬೇಕೆಂದೇನೂ ಇಲ್ಲ. ಮಹಿಳೆಯರು ದಿನನಿತ್ಯ ತಲೆ ಬಾಚಿಕೊಳ್ಳುವಾಗ ಉದುರಿದ ಕೂದಲುಗಳ ಗುಂಜೇ ಇವರಿಗೆ ಕಚ್ಚಾ ವಸ್ತು. ಹಳ್ಳಿ-ಸುತ್ತಲಿನ ಪಟ್ಟಣಗಳಲ್ಲಿ ಸಂದಿಗೊಂದಿಗಳಲ್ಲಿ ಕೂದಲಿಗೆ

ಅಲೆದು ಕೂದಲು ತುಂಬುವುದರಿಂದಲೇ ಈ ಉದ್ಯಮದ ದಿನಚರಿ ಆರಂಭವಾಗುತ್ತದೆ. ಈ ಕೂದಲನ್ನು ತಂದು ಭಾಗ್ಯನಗರದ ಸಣ್ಣ ಅಂಗಡಿಯಲ್ಲಿ ಮಾರುವ ಮೂಲಕ ಹಣ ಪಡೆಯುತ್ತಾರೆ. ಅಂಗಡಿಯ ಮಾಲೀಕರಿಂದ ಮುಂಜಾನೆ ಸಾಲದ ರೂಪದಲ್ಲಿ ನೀಡಿದ್ದ ಬೊಂಬಾಯಿ ಮಿಠಾಯಿ, ಪ್ಲಾಸ್ಟಿಕ್, ಸ್ಟೇಯ್ನ್‌ಲೆಸ್ ಸ್ಟೀಲ್ ಅಥವಾ ಅಲ್ಯುಮಿನಿಯಮ್ ಸಾಮಾನುಗಳು, ಪಿನ್ನು, ಹೇರ್‌ಪಿನ್ನು, ಟಿಕಳಿ(ಬಿಂದಿ), ರಬ್ಬರ್‌ಬ್ಯಾಂಡ್, ಬೆಂಡಾಲಿ, ಸರಗಳ ಒಟ್ಟು ಮೊತ್ತವನ್ನು ಕಡಿತಗೊಳಿಸಿ ಉಳಿದ ಹಣವನ್ನು ಕೂದಲು ಸಂಗ್ರಾಹಕರಿಗೆ ಕೊಡುತ್ತಾರೆ. ಹೀಗೆ ಕೂದಲಿನ ಗುಂಜೇ ಇವರಿಗೆ ಗಂಜಿ ನೀಡುವ ಕಸಬು.

ಇದೇ ಕೂದಲು ಮುಂದೆ ಸಾಗರದಾಚೆಗಿನ ನಾಡುಗಳಿಗೆ ಹಡಗಿನಲ್ಲೋ.... ವಿಮಾನದಲ್ಲೋ...... ಹೋಗಿ ಸಾಕಷ್ಟು ಹಣ ತರುತ್ತದೆ. ಎಂಬ ವಿಷಯ ಪಾಪ ತಲೆ ಬಾಚಿಕೊಳ್ಳುವ ಹೆಂಗಳೆಯರಿಗಾಗಲಿ, ಅದರಲ್ಲಿ ದುಡಿಯುವ ಬಡ ಕೈಗಳಿಗಾಗಲಿ ಹೇಗೆ ಗೊತ್ತಾದೀತು! ಹೀಗೆ ಸಂಗ್ರಹಿಸಿದ ಕೂದಲು ಪ್ರತಿನಿತ್ಯ ನಾಡಿನ ನಾನಾ ಮೂಲೆಗಳಿಂದ ಬಂದು ಭಾಗ್ಯನಗರದ ಬಾಗಿಲಿಗೆ ಬೀಳುತ್ತದೆ. ಇಂಥ ಕಚ್ಚಾ ಕೂದಲಿನ ಬೆಲೆ ಎಷ್ಟು ಗೋತ್ತೇ? ಪ್ರತಿ ಕಿಲೋಗೆ ಒಂದು ಸಾವಿರದಿಂದ ೨೨೦೦ ರಿಂದ ೪೪೦೦ ರೂಪಾಯಿ !

**ಕೂದಲನ್ನು ಸಂಸ್ಕರಣ ಮಾಡಿ ಮಾರಾಟಕ್ಕೆ ಸಿದ್ಧಗೊಳಿಸುವ ಕ್ರಿಯೆ :**

**ಹಿಂಜುವುದು** : ಉಂಡೆ-ಉಂಡೆಯಾಗಿ ಹಳ್ಳಿ-ಪಟ್ಟಣಗಳಿಂದ ಬಂದಿರುವ ಕೂದಲನ್ನು ಹಿಂಜುವುದು ಮೊದಲನೆಯ ಕೆಲಸ. ಈ ಹಿಂಜುವ ಕೆಲಸವನ್ನು ಮಹಿಳೆಯರೇ ಮಾಡುತ್ತಾರೆ. ನೂರಾರು ಮಹಿಳೆಯರು ಕೈಗೆ ಮುಖಕ್ಕೆ ಬಟ್ಟೆ ಕಟ್ಟಿಕೊಂಡು, ಕೈಗೆ ಗ್ಲೌಸ್ ಹಾಕಿಕೊಂಡು(ಬಹಳಷ್ಟು ಘಟಕಗಳಲ್ಲಿ ಬಳಸುವುದಿಲ್ಲ) ಕೂದಲುಗಳನ್ನು ಹಿಂಜಿ ಎಳೆಎಳೆಯಾಗಿ ಬೇರ್ಪಡಿಸಿದಾಗ ಅದನ್ನು 'ಹಂಜಿ' ಎನ್ನುತ್ತಾರೆ. ಒಬ್ಬೊಬ್ಬರೂ ದಿನವೊಂದಕ್ಕೆ ಎರಡರಿಂದ ಮೂರು ಕೆ.ಜಿ ಹಂಜಿ ಕಟ್ಟುಗಳನ್ನು ಮಾಡುತ್ತಾರೆ. ಇದೇ ಸಂದರ್ಭದಲ್ಲಿಯೇ ಬಣ್ಣದ ಆಧಾರದಲ್ಲಿ ಕೂದಲನ್ನು ಬೇರ್ಪಡಿಸುತ್ತಾರೆ. ಬಿಳಿ ಕೂದಲು ಹಾಗೂ ಕಪ್ಪು ಕೂದಲಿನ ಹಂಜಿ ಕಟ್ಟುಗಳಾಗಿ ವಿಂಗಡಿಸಲಾಗುತ್ತದೆ.

"ನಮಗ ಹೊಲ-ಗದ್ದಿ ಏನೂ ಇಲ್ರಿ, ಈ ಕೆಲಸ ಬಿಟ್ರ ಬ್ಯಾರೆ ಕೆಲಸ ಬರಾಂಗಿಲ್ರಿ. ಬ್ಯಾರೆ ಕಡೀಗೆ, ಬ್ಯಾರೆ ಕೆಲ್ಸಕ್ಕ ಹೋದ್ರೂನೂ ನಮ್ಗ ದಿನಾಲೂ ಕೆಲ್ಸ ಕೊಡಾಂಗಿಲ್ರಿ ಆದ್ರ.. ಇಲ್ಲಿ ದಿನಾಲೂ ಕೆಲ್ಸ ಕೊಡ್ತಾರ್ರಿ. ಹೊಟ್ಟಿಪಾಡಿಗೆ ಬ್ಯಾರೆ ಊರಿಗೆ ದುಡಿಯಾಕ ಹೋಗಾ ಬದ್ಲಿ ನಮ್ಮೂರಾಗs ನಾವು ದುಡುದು ಬದುಕೋದು ಚೊಲೋ ಅಲ್ಲೇನ್ರಿ?" ಎನ್ನುವುದು

ಹಿಂಜುವ ಕಾಯಕದ ದೇವಮ್ಮಳ ಅನಿಸಿಕೆ. ಇವರು ದಿನಗೂಲಿಗಳಾಗಿ ೧೦-೧೨ ವರ್ಷಗಳಿಂದಲೂ ದುಡಿಯುತ್ತಿದ್ದಾರೆ. ಕೂದಲು 'ಹಿಂಜಿದರೆ ಗಂಜಿ' ಎಂಬ ಸ್ಥಿತಿಯಲ್ಲಿ ಹಿಂಜುವ ಮಹಿಳೆಯರಿದ್ದಾರೆ.

ಹೀಗೆ ಯಾರದ್ದೋ ಕೂದಲು, ತುಂಬಾ ಕಶ್ಮಲ ಇರುವ ಕೂದಲು, ಯಾವತ್ತೋ ಬಾಚಿಕೊಂಡಾಗ ಇಲ್ಲವೇ ಮುಡಿ ಕೊಟ್ಟಾಗಿನ ಕೂದಲಿನಿಂದ ರೋಗ-ರುಜಿನಗಳು ಬರುವ ಸಾಧ್ಯತೆಗಳಿರುತ್ತವೆ. ಹೀಗೆಂದು ತಮ್ಮ ಮನೆಯಲ್ಲಿಯೇ ಕೇಶ ಕಸಬು ಮಾಡುವ ಮಹಿಳೆ ಸರೋಜಮ್ಮ ಬಂಡಿ ಇವರನ್ನು ಕೇಳಿದರೆ.. "ನಮ್ಗ ಇದರಿಂದ ಯಾವುದೇ ಕಾಯಿಲೆ ಬಂದಿಲ್ರಿ. ನಮ್ಮದು ಇದs ಕಸಬು ಆಗಿರೋದ್ರಿಂದ ರೂಢಿ ಆಗ್ಬಿಟ್ಟೈತ್ರಿ" ಎನ್ನುತ್ತಾರೆ.

ಇದೇ ಪ್ರಶ್ನೆಯನ್ನು ಶ್ರೀನಿವಾಸ ಗುಪ್ತಾರವರ ಕೂದಲು ಉದ್ಯಮದ ಕಾರ್ಖಾನೆಯ ಮ್ಯಾನೇಜರ್ ಪರಶುರಾಮರನ್ನು ಕೇಳಿದಾಗ.. "ಯಾವುದೇ ರೋಗ-ರುಜಿನ ಬರಬಾರದೆಂದೇ ನಮ್ಮ ಫ್ಯಾಕ್ಟರೀಗೆ ಸ್ವಚ್ಛ ಇದ್ದ ಮಾಲು ಮಾತ್ರ ತರಿಸಿಕೊಳ್ತೀವ್ರಿ. ಹೀಗಾಗಿ ನಮ್ಮಲ್ಲಿ ಕೆಲಸ ಮಾಡುವವರಿಗೆ ಯಾವುದೇ ರೋಗ ಈ ಕಸಬಿನಿಂದ ಬಂದಿಲ್ಲ." ಎಂದು ಸ್ಪಷ್ಟಪಡಿಸುತ್ತಾರೆ.

**ಬಾಚವುದು** : ಹಿಂಜುವ ಕೆಲಸ ಮುಗಿದ ಬಳಿಕ ಆ ಕೊದಲನ್ನು 'ಗಲ್' ಸಹಾಯದಿಂದ ಬಾಚುವ ಕಾರ್ಯ ನಡೆಯುತ್ತದೆ. ಎರಡು ಅಡಿ ಅಗಲ, ಮೂರು ಇಂಚು ದಪ್ಪ, ಮೂರ್‍ನಾಲ್ಕು ಇಂಚು ಉದ್ದದ ಮರದ ಪಟ್ಟಿಗೆ ಎರಡು ಇಂಚಿನ ಅಂತರದಲ್ಲಿ, ಎರಡು ಸಾಲುಗಳಲ್ಲಿ ಜೋಡಿಸಿದ ಮೊಳೆಯ ನಡುವಿನಿಂದ ಕೂದಲಿನ ಕಟ್ಟು ಹಿಡಿದು ಎಳೆದುಕೊಳ್ಳುವ ಕೆಲಸ ಮಾಡುತ್ತಾರೆ. ಕೂದಲಿನಲ್ಲಿ ಹರಿದ, ಸುಕ್ಕುಗಟ್ಟಿದ ಇಲ್ಲವೆ ತುಂಡಾಗಿರುವ ಕೂದಲಿನ ಎಳೆಗಳೆನಾದರೂ ಇದ್ದರೆ ಮೊಳೆಗಳಿಗೆ ಅಂಟಿಕೊಳ್ಳುತ್ತದೆ. ಅದುವೇ ಕೂದಲಿನ ತ್ಯಾಜ್ಯ! ಉದ್ದನೆಯ ಕೂದಲು ಮಾತ್ರ ಮೊಳೆಯ ಅಲಗು ದಾಟಿ ಮುಂದೆ ಬರುತ್ತದೆ; ಅದುವೇ ಸಂಸ್ಕರಣದ ಕಚ್ಚಾವಸ್ತು. ಹೀಗೆ ಕೂದಲು ಬಾಚಿ, ಉದ್ದನೆಯ ಜಡೆಯ ರೀತಿಯಲ್ಲಿ ಹೆಣೆದು ತುದಿಯಲ್ಲಿ ಹಿಡಿಯಾಕಾರದಲ್ಲಿ ಕಟ್ಟು ಹಾಕುತ್ತಾರೆ. ಹೀಗೆ ಒಬ್ಬೊಬ್ಬರೂ ದಿನಕ್ಕೇ ಆರರಿಂದ ಎಂಟು ಕೆ.ಜಿ ಯಷ್ಟು ಕೂದಲನ್ನು ಬಾಚುತ್ತಾರೆ. ಇದೇ ಸಂದರ್ಭದಲ್ಲಿ ಕೂದಲಿನ ಉದ್ದದ ಆಧಾರದಲ್ಲಿ ಕಚ್ಚಾ ರೀತಿಯಲ್ಲಿ ವಿಂಗಡಣೆಯೂ ಆಗುತ್ತದೆ.

**ತೊಳೆಯುವುದು** : ಹೀಗೆ ಬಾಚಿದ ಎಲ್ಲ ಕೂದಲಿನ ಕಟ್ಟುಗಳನ್ನು ಸೋಡಾ ಸರ್ಫ ಮಿಶ್ರಿತ ನೀರಿನಲ್ಲಿ ಒಂದು ದಿನ ನೆನೆ ಹಾಕಿ, ಮರು ದಿವಸ ಚೆನ್ನಾಗಿ ಸ್ವಚ್ಛ ನೀರಿನಲ್ಲಿ ತೊಳೆಯುತ್ತಾರೆ. ಸುಮಾರು ಏಳು ಕಿಲೋಗ್ರಾಂ ಕೂದಲಿನ ಕಟ್ಟುಗಳನ್ನು ತೊಳೆಯಲು ೪೦೦ ಗ್ರಾಂ ಸೋಡಾಸರ್ಫ್ ಹಾಗೂ ೨ ಪೌಚು ಶ್ಯಾಂಪೂ ಹಾಕುತ್ತಾರೆ. ಇನ್ನೂ ಕೆಲವರು ಈ ಕೂದಲನ್ನು ತೊಳೆಯಲು ಸೈಕಲ್‌ನಲ್ಲಿ ಹೇರಿಕೊಂಡು ಭಾಗ್ಯನಗರದ ಪಕ್ಕದಲ್ಲಿ ಹರಿಯುವ 'ಲಂಡಿಕ್ಯಾನ ಹಳ್ಳ'ಕ್ಕೆ ಹೋಗುತ್ತಾರೆ. ಪ್ರತಿದಿನ ಬೆಳಿಗ್ಗೆ ಈ ಕೂದಲನ್ನು ತೊಳೆಯುವವರಿಂದಲೇ ಈ ಹಳ್ಳ ಭರ್ತಿಯಾಗಿರುತ್ತದೆ.

**ಒಣಗಿಸುವುದು** : ಹೀಗೆ ತೊಳೆದ ಹಸಿ ಕೂದಲಿನ ಕಟ್ಟುಗಳನ್ನು ಮನೆ ಇಲ್ಲವೇ ಸಂಸ್ಕರಣಾ ಘಟಕಕ್ಕೆ ತಂದು, ಸಾಲಾಗಿ ಜೋಡಿಸಿ, ಗರಿಗರಿಯಾಗುವಂತೆ ಬಿಸಿಲಿನಲ್ಲಿ ಒಣಗಿಸುತ್ತಾರೆ. ಈಗ ಕೂದಲಿಗೆ ರೇಷ್ಮೆಯಂತಹ ಹೊಳಪು ಬರುತ್ತದೆ.

**ಪುನಃ ಬಾಚುವುದು** : ಹೀಗೆ ರೇಷ್ಮೆಯಂತಹ ಹೊಳಪುಳ್ಳ ಕೂದಲಿನ ಕಟ್ಟುಗಳನ್ನು ಗಲ್‌ನ ಮೂಲಕ ಪುನಃ ಬಾಚುತ್ತಾರೆ. ಆಮೇಲೆ ಮತ್ತೊಮ್ಮೆ ಬಾಚಿ ಮತ್ತೊಮ್ಮೆ ಕಟ್ಟು ಹಾಕುತ್ತಾರೆ. ಈ ಹಂತದಲ್ಲಿ ಇಂಥ ಕಟ್ಟುಗಳಲ್ಲಿ ಅಲ್ಲಲ್ಲಿ ಸೇರಿಕೊಂಡಿದ್ದ ತುಂಡಾದ ಕೂದಲ ತ್ಯಾಜ್ಯವನ್ನು ಮತ್ತೊಮ್ಮೆ ಬೇರ್ಪಡಿಸುತ್ತಾರೆ. ಒಟ್ಟಿನಲ್ಲಿ ಒಂದು ಕೆ.ಜಿ. ಕಚ್ಚಾ ಕೂದಲಿನಲ್ಲಿ ಶೇ.೪೦ರಷ್ಟು ಮಾತ್ರ ಸಂಸ್ಕರಣಗೊಂಡು ಮಾರಾಟಕ್ಕೆ ಸಿದ್ಧವಾಗುತ್ತದೆ.

**ಕೂದಲನ್ನು ವಿಂಗಡಿಸುವುದು** : ಹೀಗೆ ಮುಂದಿನ ಹಂತದಲ್ಲಿ ಕೂದಲನ್ನು ಆಯಾ ಅಳತೆಗಳಿಗೆ ತಕ್ಕಂತೆ ವಿಂಗಡಿಸುವ ಕೆಲಸ ನಡೆಯುತ್ತದೆ. ಕೂದಲಿನ ಕಟ್ಟುಗಳನ್ನು ಒಂದು ಕೈಯಲ್ಲಿ ಹಿಡಿದು ಮತ್ತೊಂದು ಕೈಯಿಂದ ಕೆಳಗಿನಿಂದ ಒಂದೊಂದೂ ಕೋನದಲ್ಲಿ ಕೆಳಗೆ ಎಳೆಯುತ್ತಾ ಹೋದಂತೆ ಮಧ್ಯದಲ್ಲಿ ಸಿಲುಕಿಕೊಂಡಿರುವ ವಿವಿಧ ಅಳತೆಯ ಕೂದಲು, ಉದ್ದದ ಅಳತೆಯ ಪ್ರಕಾರ ಹೊರ ಬರುತ್ತವೆ. ಇವುಗಳನ್ನು ವಿಗ್ ತಯಾರಿಸಲು ಬಳಸುವುದರಿಂದ ಮೂರರಿಂದ ಮೂವತ್ತು ಅಂಗುಲದವರೆಗೆ ವಿಂಗಡಿಸಿ, ರಬ್ಬರ್ ಬ್ಯಾಂಡ್‌ನಿಂದ ಪ್ರತ್ಯ ಪ್ರತ್ಯೇಕ ಕಟ್ಟುಗಳನ್ನು ಹಾಕುತ್ತಾರೆ. ಒಂದೊಂದು ಬಾಕ್ಸಿನಲ್ಲೂ ೨೫ ಕೆ.ಜಿ.ಯಷ್ಟು ಸಂಸ್ಕರಿಸಿದ ಕೂದಲಿನ ಕಟ್ಟುಗಳಿರುತ್ತವೆ.

**ಕೂದಲಿನ ಬೆಲೆ ನಿಗಧಿ** : ಕೂದಲಿನ ಬೆಲೆ ನಿಗಧಿಗೆ ಅವುಗಳ ಉದ್ದ ಹಾಗೂ ಬಣ್ಣಗಳಷ್ಟೇ ಅಲ್ಲ, ಅವುಗಳು ಯಾವ ಪ್ರದೇಶದಿಂದ ಬಂದಿವೆ, ಅವು ಸತ್ತ ಕೂದಲೋ? ಅಥವಾ ಜೀವಂತ ಕೂದಲೋ? ಎಂಬುದೂ ಕೂಡಾ ಬೆಲೆ ನಿಗಧಿಯ ಮೇಲೆ ಪ್ರಭಾವ

ಬೀರುತ್ತವೆ! ಸಾಮಾನ್ಯವಾಗಿ ಕೂದಲು ಎಷ್ಟು ಉದ್ದವಾಗಿರುತ್ತದೆಯೋ ಅಷ್ಟು ಉತ್ತಮ ಬೆಲೆ ಹಾಗೂ ಬೇಡಿಕೆ. ಅದರಲ್ಲೂ ಕಪ್ಪು ಕೂದಲಿಗೆ ಇನ್ನಿಲ್ಲದ ಬೇಡಿಕೆ ಹಾಗೂ ಬೆಲೆ. ಬಿಳಿ ಕೂದಲಿಗೆ ಸಹಜವಾಗಿ ಬೆಲೆ ಕಡಿಮೆ. ಇನ್ನೂ ಪ್ರಾದೇಶಿಕವಾರು ಕೂದಲಿನ ಬೆಲೆ ಹೀಗೆ ನಿಗಧಿ ಮಾಡುತ್ತಾರೆ. ಹೊಸಪೇಟೆ, ಸಂಡೂರು, ಬಳ್ಳಾರಿ, ಸಿಂಧನೂರು, ಗಂಗಾವತಿ, ಕುಷ್ಟಗಿ, ಕೊಪ್ಪಳ ಮುಂತಾದ ಸ್ಥಳೀಯ ಕೂದಲಿನ ಬೆಲೆ ತುಂಬಾ ಕಡಿಮೆ. ಹಾಸನ, ಬೆಂಗಳೂರು, ಕೊಡಗು, ಮೈಸೂರು, ಮಂಗಳೂರು, ಚಿಕ್ಕಮಗಳೂರು, ತುಮಕೂರು, ತಮಿಳುನಾಡು, ಕೇರಳ ಪ್ರದೇಶದ ಕೂದಲಿಗೆ ಬೆಲೆ ಹೆಚ್ಚು. ಇನ್ನು ತಲೆ ಬಾಚಿಕೊಂಡಾಗ ಬಾಚಣಿಗೆಯಲ್ಲಿ ಸಿಕ್ಕಿಕೊಂಡ ಕೂದಲನ್ನು ಸತ್ತ ಕೂದಲು ಎಂದು ಕರೆಯುತ್ತಾರೆ. ದೇವರಿಗೆ ಮುಡಿ ಕೊಟ್ಟ ಕೂದಲನ್ನು ಜೀವಂತ ಕೂದಲು ಎಂದು ಕರೆಯುತ್ತಾರೆ! ಇಲ್ಲಿಯೂ ಅಷ್ಟೆ, ಸತ್ತ ಕೂದಲಿಗಿಂತ ಜೀವಂತ ಕೂದಲಿನ ಬೆಲೆ ಹೆಚ್ಚಿರುತ್ತದೆ. ಇದು ಯಾವ ಗುಂಪಿಗೆ ಸೇರುವ ಕೂದಲು ಎಂಬುದನ್ನು ಕಂಡುಹಿಡಿಯುವುದೇ ಕಸಬುದಾರನ ನಿಜವಾದ ಜಾಣ್ಮೆ. "ತಿರುಪತಿಯಂತಹ ದೇವಾಲಯಗಳಲ್ಲಿ ಮಂಡೆ ಕೊಟ್ಟವರ ಕೂದಲು ಜೀವಂತ ಕೂದಲಾಗಿದ್ದು, ಅದಕ್ಕೆ ಬೆಲೆ ಹೆಚ್ಚು. ಸ್ವಾಭಾವಿಕವಾಗಿ ಉದುರಿದ ಕೂದಲುಗಳಿಗೆ ಜಪಾನ್‌ನಲ್ಲಿ ಹೆಚ್ಚಿನ ಬೇಡಿಕೆ ಹಾಗೂ ಹೆಚ್ಚಿನ ಬೆಲೆ." ಎನ್ನುತ್ತಾರೆ ಈ ಉದ್ಯಮದಲ್ಲಿ ತೊಡಗಿರುವ ಯಮನಪ್ಪ ನರಗುಂದ.

### ಅಂತರ ರಾಷ್ಟ್ರೀಯ ಉದ್ಯಮವಾಗಿ ಕೇಶೋದ್ಯಮ :

೧೯೬೫ ರಿಂದ ಇಲ್ಲಿ ಕೂದಲಿನಿಂದ 'ಗಂಗಮ್ಮನ ಚೌರಿ' ಕೂದಲು ತಯಾರಿಸುವುದು ಪಾರಂಪರಿಕ ಕಸಬಾಗಿತ್ತು. ೧೯೮೫ ರಿಂದ ಸಂಸ್ಕರಿತ ಕೂದಲಿಗೆ ವಿದೇಶದಿಂದ ಬೇಡಿಕೆ ಬರತೊಡಗಿತು. ಆಗಿನಿಂದ ಭಾಗ್ಯನಗರದ ಕೂದಲು ಅಂತರ ರಾಷ್ಟ್ರೀಯ ಉದ್ಯಮವಾಗಿ ಬೆಳೆಯ ತೊಡಗಿತು. "ಶ್ರೀನಿವಾಸ ಗುಪ್ತಾರವರು ಈ ಕೇಶ ಉದ್ಯಮಕ್ಕೆ ಬಂದ ಮೇಲೆ ಅಂತರ ರಾಷ್ಟ್ರೀಯ ಮಾರುಕಟ್ಟೆ ಕುದುರಿಸಿದರು. ಹೆಚ್ಚು ಜನರಿಗೆ ಉದ್ಯೋಗ ದೊರೆಯಿತು. ೨೦೦೯-೧೨ರವರೆಗೆ ಸತತ ಮೂರು ವರ್ಷ ಕೇಂದ್ರ ವಾಣಿಜ್ಯ ಇಲಾಖೆ ರಫ್ತು ವಹಿವಾಟಿನಲ್ಲಿ ಭಾಗ್ಯನಗರದ ಈ ಘಟಕ 'ನಿರ್ಯಾತಶ್ರೀ' ರಾಷ್ಟ್ರ ಪ್ರಶಸ್ತಿ ಮುಡಿಗೇರಿಸಿಕೊಂಡಿದೆ." ಎಂದು ಖ್ಯಾತ ಸಾಹಿತಿ ವಿಠ್ಠಪ್ಪ ಗೋರಂಟ್ಲಿ ತಿಳಿಸುತ್ತಾರೆ. ಒಂದು ತಿಂಗಳಿಗೆ ೧೦೦ ಟನ್ ರಫ್ತಾಗುತ್ತಿದ್ದ ಸಂಸ್ಕರಿಸಿದ ಕೂದಲು ಈಗ ೧೫ ಟನ್‌ಗೆ ಇಳಿದಿದೆ. ಚೀನಾ, ಅಮೇರಿಕಾ, ದಕ್ಷಿಣ ಕೋರಿಯಾ, ಇಂಡೋನೇಷ್ಯಾ, ಜಪಾನ್, ಇಟಲಿ, ಇಂಗ್ಲೆಂಡ್, ಹಾಂಕಾಂಗ್, ಮ್ಯಾನ್ಮಾರ್(ಬರ್ಮಾ), ಶ್ರೀಲಂಕಾ ಮುಂತಾದ ದೇಶಗಳಿಗೆ

ಇಲ್ಲಿಯ ಕೂದಲು ರಫ್ತಾಗುತ್ತದೆ. ಪರದೇಶಗಳಲ್ಲಿ ಭಾರತದಿಂದ ಬಂದಿರುವ ಈ ಕೂದಲಿನಿಂದ ಮಹಿಳೆಯರಿಗೆ ಹಾಗೂ ಪುರುಷರಿಗೆ ವಿವಿಧ ರೀತಿಯ ವಿವಿಧ ವಿನ್ಯಾಸಗಳಲ್ಲಿ ವಿಗ್‌ಗಳು ಐದು ಸಾವಿರದಿಂದ ೧೦ ಸಾವಿರ ರೂಪಾಯಿವರೆಗೂ ಬೆಲೆ ಬಾಳುತ್ತವೆ. ಇಡೀ ಜಗತ್ತಿನಲ್ಲೇ ಅತ್ಯಧಿಕ ಪ್ರಮಾಣದ ವಿಗ್‌ಗಳನ್ನು ಸರಬರಾಜು ಮಾಡವ ರಾಷ್ಟ್ರ ಎಂದರೆ ದ.ಕೋರಿಯಾ. ಅಲ್ಲಿನ ವಿಗ್‌ಗಳಿಗೆ ಅತ್ಯಂತ ಹೆಚ್ಚಿನ ಬೇಡಿಕೆ ಇದೆ.

"ಚೀನಾ ಭಾರತದೊಂದಿಗೆ ಪೈಪೋಟಿಗೆ ಇಳಿದಿದೆ. ಆದರೆ ಕೂದಲಿನ ಗುಣಮಟ್ಟ ಹಾಗೂ ಅಳತೆಯಲ್ಲಿ ಅದು ಭಾರತದ ಕೂದಲುಗಳಿಗೆ ಪೈಪೋಟಿ ಮಾಡಲು ಅದಕ್ಕೆ ಸಾಧ್ಯವಾಗದೆ ಇರುವುದರಿಂದ ಉತ್ತಮ ಗುಣಮಟ್ಟದ ವಿಗ್‌ಗಳನ್ನು ತಯಾರಿಸಲು ಅದು ಕಚ್ಚಾ ವಸ್ತುಗಳಿಗಾಗಿ ಮತ್ತೇ ಭಾರತವನ್ನೇ ಅವಲಂಬಿಸಬೇಕಾಗುತ್ತದೆ. ಜೊತೆಗೆ ಅಮೆರಿಕಾದಲ್ಲಿ ಈ ಮೊದಲು ಪಾಶ್ಚಾತ್ಯ ಮತ್ತು ಕಮ್ಯೂನಿಸ್ಟ್ ರಾಷ್ಟ್ರಗಳಿಂದ ಯಾವುದೇ ವಸ್ತುಗಳನ್ನು ಪಡೆಯುವುದನ್ನು ನಿರ್ಬಂಧಿಸಲಾಗಿತ್ತು. ಲಿಂಡನ್ ಜಾನ್ಸನ್ ಅಧ್ಯಕ್ಷರಾದ ಬಳಿಕ ಕೂದಲಿನ ವ್ಯಾಪಾರ ಮುಕ್ತವಾಯಿತು ಎಂದು ಹಿಂದಿನ ದಿನಗಳನ್ನು ಈ ಉದ್ಯಮಿಗಳು ನೆನಪಿಸಿಕೊಳ್ಳುತ್ತಾರೆ."[೩೬]

"ಆನ್ ಲೈನ್ ವ್ಯಾಪಾರ ನಮಗೆ ಕಷ್ಟವಾಗುತ್ತಿದೆ" ಎಂದು ಹೇಳುವ ಗೃಹ ಕೇಶ ಉದ್ಯಮಿ ಆಂಜನೇಯನಂತಹ ಭಾಗ್ಯನಗರದ ಉದ್ದಿಮೆದಾರರು ಈ ಹಿಂದೆ ದೇಶದ ದೊಡ್ಡ ದೊಡ್ಡ ರಫ್ತುದಾರರ ಮೂಲಕ ವಹಿವಾಟು ನಡೆಸುತ್ತಿದ್ದರು, ಕ್ರಮೇಣ ಮಾರುಕಟ್ಟೆ ಸ್ಥಿತಿ-ಗತಿ, ಸಾಗಾಣಿಕೆ ಹಾಗೂ ವ್ಯವಹಾರದ ತಿಳಿವಳಿಕೆ ಹಚ್ಚಾದಂತೆ ನೇರವಾಗಿ ತಾವೇ ಪರರಾಷ್ಟ್ರಗಳಿಗೆ ರಫ್ತು ಮಾಡುತ್ತಿದ್ದಾರೆ. ವಿದೇಶೀಯರಿಂದ ಕೂದಲುಗಳಿಗೆ ಹೆಚ್ಚನ ಬೇಡಿಕೆ ಬಂದಾಗ ಹೆಚ್ಚಿನ ಬೆಲೆ ಸಿಗುತ್ತದೆ. ಅಲ್ಲದೆ ಉತ್ತಮ ಸಂಸ್ಕರಣಾ ಕೂದಲಿಗೆ ಉತ್ತಮ ಬೆಲೆಯೂ ಬರುತ್ತದೆ. ಹೀಗಿದ್ದರೂ ಕೆಲವು ಉದ್ಯಮಗಳು ಈ ಕೆಲಸದಲ್ಲಿ ಕೈ ಸುಟ್ಟುಕೊಂಡಿವೆ.

**ಭಾರತದಲ್ಲಿರುವ ಕೇಶೋದ್ಯಮ ಕೇಂದ್ರಗಳು :**

ನಮ್ಮ ದೇಶದ ಪಂಜಾಬ್, ಹರಿಯಾಣ, ಗುಜರಾತ್, ಮಹಾರಾಷ್ಟ್ರಗಳಲ್ಲಿ ಇಂಥ ಉದ್ಯಮಗಳಿವೆಯಾದರೂ ಕರ್ನಾಟಕದ ಭಾಗ್ಯನಗರ, ಆಂಧ್ರಪ್ರದೇಶದ ವೇಲೂರು, ರಾಜಸ್ತಾನದ ಡಿಗ್, ನವದೆಹಲಿ, ತಮಿಳುನಾಡಿನ ಚೆನ್ನೈ ಹಾಗೂ ಪಶ್ಚಿಮ ಬಂಗಾಳದ

ಭಗವಾನ್‌ಪುರ, ಮುಶಿರಾಬಾದ್, ಕೋಲ್ಕತ್ತಾಗಳಲ್ಲಿ ಕೂದಲು ಸಂಸ್ಕರಣಾ ಘಟಕಗಳಿದ್ದು, ಈ ಉದ್ದಿಮೆ ದೊಡ್ಡ ಪ್ರಮಾಣದಲ್ಲಿವೆ.

**ಕೂದಲು ತ್ಯಾಜ್ಯವನ್ನು ಮರುಬಳಕೆ :**

ಕೂದಲನ್ನು ಹಾಗೆಯೇ ಎಲ್ಲೆಂದರಲ್ಲಿ ಬಿಸಾಡಿದರೆ ಅದು ಪರಿಸರಕ್ಕೆ ತ್ಯಾಜ್ಯವಾಗಿ, ಪರಿಸರ ಮಾಲಿನ್ಯಕ್ಕೂ ಕಾರಣವಾಗುತ್ತದೆ. 'ಕಸದಿಂದ ರಸ' ತಯಾರಿಸುವಂತೆ ಇವರು ಕೂದಲು ತ್ಯಾಜ್ಯದಿಂದ ಪರಿಸರ ಹಾಳಾಗುವುದನ್ನು ತಪ್ಪಿಸುವ ಜೊತೆಗೆ ಮರು ಬಳಕೆಗೆ ಪ್ರೋತ್ಸಾಹಿಸುವ ಈ ಉದ್ದಿಮೆಗೆ ಕೇಂದ್ರ ಸರಕಾರ ೨% ರೂಪಾಯಿ ಸಹಾಯಧನ ನೀಡುತ್ತಿದೆ. ಕೂದಲನ್ನು ಬಳಕೆ ಮಾಡಿದ ನಂತರವೂ ಉಳಿಯುವ ನಿರುಪಯುಕ್ತ ತ್ಯಾಜ್ಯವನ್ನು ಪರಿಸರಕ್ಕೆ ಹಾನಿಯಾಗದಂತೆ ತಗ್ಗು ತೋಡಿ ಮುಚ್ಚುವಂತಹ ಕೆಲಸಕ್ಕೆ ಈ ೨% ಸಹಾಯಧನ ಸಾಲದು. ಪ್ರತಿ ವರ್ಷ ಕೋಟ್ಯಂತರ ರೂಪಾಯಿ ವಿದೇಶಿ ವಿನಿಮಯ ತಂದು ಕೊಡುತ್ತಿರುವುದರ ಜತೆಗೆ ಸ್ಥಳೀಯ ನೂರಾರು ಜನರಿಗೆ ಉದ್ಯೋಗ ನೀಡಿದ ಈ ಉದ್ಯಮಕ್ಕೆ ಸರಕಾರ ಇನ್ನಷ್ಟು ನೆರವು ನೀಡಿದರೆ, ಮುಳುಗುತ್ತಿರುವ ಘಟಕಗಳು ಚೇತರಿಸಿಕೊಳ್ಳಬಹುದೇನೋ.

**ಪರ್ಯಾಯ ಉದ್ಯೋಗದ ಆಕರ್ಷಣೆ :**

ಇಂದಿಗೂ ಭಾಗ್ಯನಗರದ ೧೫೦ ರಿಂದ ೨೦೦ ಕುಟುಂಬಗಳು ಕೇಶೋದ್ಯಮವನ್ನೇ ಅವಲಂಬಿಸಿವೆ. ಕೇವಲ ೪೦ ರಿಂದ ೪೫ ಕುಟುಂಬಗಳು ಕೇಶ ಸಂಸ್ಕರಣ ಘಟಕಗಳನ್ನು ಹೊಂದಿವೆ. ಹಿಂದೆ ಕೂದಲು ಸಂಸ್ಕರಣಾ ಘಟಕಗಳಲ್ಲಿದ್ದ ಸುಮಾರು ೯೦೦೦ ಕಾರ್ಮಿಕರು ಪರ್ಯಾಯ ಉದ್ಯೋಗದತ್ತ ಮುಖಮಾಡಿದ್ದಾರೆ. ಕೂದಲು ಸಂಸ್ಕರಣೆಯಲ್ಲಿ ಆರೋಗ್ಯ ಸಮಸ್ಯೆಗಳೂ ಕಂಡು ಬರುವುದರಿಂದ ಬೇರೆ ಉದ್ಯೋಗದತ್ತ ಮುಖ ಮಾಡಿದ್ದಾರೆ. ಕಾರ್ಮಿಕರ ವಲಸೆ ಪ್ರವೃತ್ತಿಯು ಕೂಡ ಉದ್ದಿಮೆಯ ಮೇಲೆ ವ್ಯತಿರಿಕ್ತ ಪರಿಣಾಮ ಬೀರುತ್ತಿದೆ. ಇದೇ ಊರಿನ ಸೀರೆ ಉದ್ಯಮ ಈಗ ಉತ್ತಮ ಸ್ಥಿತಿಯಲ್ಲಿದೆ. ಬಹುತೇಕರು ನೇಕಾರಿಕೆಯತ್ತ ಆಸಕ್ತಿ ತೋರಿದ್ದಾರೆ. ವಿದ್ಯುತ್ ಮಗ್ಗಗಳಿಗೂ ಸರ್ಕಾರದ ನೆರವು ಸಿಗುತ್ತಿದೆ. ನಗರದಲ್ಲಿ ಸಿದ್ಧ ಉಡುಪು ಘಟಕವೂ ತಲೆಯೆತ್ತಿದೆ. ಕೇಶೋದ್ಯಮ ಕ್ರಮೇಣ ಬಂಡವಾಳಶಾಹಿಗಳ ಹಿಡಿತಕ್ಕೆ ಸಿಲುಕಿದ ಪರಿಣಾಮ ಅದು ಇಂದು 'ಗಂಗಮ್ಮ ಚೌರಿ ಕೂದಲು ತಯಾರಿಸುವ ಕೇಶ ಕರಕುಶಲಕಲೆಯಾಗಿ ಉಳಿಯುತ್ತಿಲ್ಲ!

"ನನ್ನ ತಂದೆಯಿಂದ ಈ ಕಸಬು ಒಂದು ಪರಂಪರೆಯಾಗಿ ಬಂದಿರುವುದರಿಂದ ಅದನ್ನೇ ಮುಂದುವರಿಸಿಕೊಂಡು ಹೊರಟಿರುವೆ. ನೂರಾರು ಜನರಿಗೆ ಉದ್ಯೋಗವನ್ನು ನೀಡುತ್ತಿರುವ, ಪರಿಸರವನ್ನು ಸ್ವಚ್ಛಗೊಳಿಸುವ ಈ ಕಸಬು ತೃಪ್ತಿ ತಂದಿದೆ. ಅಂತೆಯೇ ನನ್ನ ಮಗನಿಗೂ ಇದು ಪಾರಂಪರಿಕ ಕಸಬಾಗಿ ಮುಂದುವರಿಯಲಿದೆ. ಆದರೆ... ಆ ಕಸಬಿನಲ್ಲಿ ಆಧುನಿಕ ತಂತ್ರಜ್ಞಾನವೂ ಅಳವಡಿಕೆಯಾಗಲಿದೆ!" ಎಂದು ಖ್ಯಾತ ಅಂತರರಾಷ್ಟ್ರೀಯ ಕೇಶೋದ್ಯಮಿ ಶ್ರೀನಿವಾಸ ಗುಪ್ತಾ ಹೇಳುತ್ತಾರೆ. ಅವರ ಈ ಮಾತಿನಲ್ಲಿ ಸತ್ಯ ಅಡಗಿದ್ದರೂ ಈ ಕೇಶೋದ್ಯಮ ಪಕ್ಕಾ ವಸ್ತುಗಳನ್ನೇ ಸಿದ್ಧಗೊಳಿಸಿ ವಿದೇಶಕ್ಕೆ ರಫ್ತು ಮಾಡುವಂತಾದರೆ ಇನ್ನೂ ಮಹತ್ವ ಪಡೆಯುತ್ತದೆ.

ಆಧುನೀಕರಣ ಹಾಗೂ ಜಾಗತೀಕರಣದಿಂದಾಗಿ ವಿದೇಶಿ ಬೇಡಿಕೆಯನ್ನು ಪೂರೈಸಲು ದೊಡ್ಡ ಪ್ರಮಾಣದ ಉದ್ದಿಮೆದಾರರು ಕಚ್ಚಾ ಕೂದಲನ್ನೇ ಸಂಸ್ಕರಿಸಿ ರಫ್ತು ಮಾಡುತ್ತಿರುವುದರಿಂದ ಸಣ್ಣ ಕಸಬುದಾರರಿಗೆ ನಷ್ಟದ ಹೊಡೆತ ಬಿದ್ದಿದೆ. ಗ್ರಾಮಗಳನ್ನು ಸ್ವಾವಲಂಬನೆಯತ್ತ ಕೊಂಡೊಯ್ಯುವ ತಾಕತ್ತಿರುವ ಭಾಗ್ಯನಗರದ ಕೇಶ ಕರಕುಶಲಕಲೆಯ ಸ್ವರೂಪವೂ ಬದಲಾಗಿದೆ. ಒಂದು ಸಮಾಜದ ಎಲ್ಲ ಜನರ ಉತ್ಪಾದನೆ, ಹಂಚಿಕೆ ಮತ್ತು ಅನುಭೋಗದಲ್ಲಿ ತೊಡಗಬಹುದಾದ ಇಂತಹ ಪಾರಂಪರಿಕ ಕಸಬುಗಳ ಅಧ್ಯಯನ ಇಂದು ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿದೆ.

### ೩.೫.೭ ಕಿನ್ನಾಳ ಕಿಟ್ಟದ ಗೊಂಬೆ ತಯಾರಿಕೆ

ಭಾರತದ ಕರಕುಶಲಕಲೆ ಅದೆಷ್ಟು ಪುರಾತನವೋ ಅದರ ಪರಂಪರೆಯೂ ಅಷ್ಟೇ ಉಜ್ವಲವಾದದ್ದು. ನಮ್ಮ ಸಂಸ್ಕೃತಿಯ ಮೂರ್ತ ಸ್ವರೂಪವಾಗಿರುವಂತೆ ನಮ್ಮ ಕಲಾ ಪರಂಪರೆಯ ಅವಿಭಾಜ್ಯ ಅಂಗವೂ ಆಗಿದೆ. ಕಲೆಯ ಜೊತೆಗೆ ಅದಕ್ಕೆ ಜೀವಕಳೆಯನ್ನೂ ತುಂಬಿರುವುದರಿಂದ ಹೊಸತನ ಹಾಗೂ ರಮಣೀಯತೆಯಂತಹ ಉತ್ತಮ ಗುಣಮಟ್ಟದಿಂದಾಗಿ ವಿಶ್ವದಲ್ಲೇ ಬಹು ಬೇಡಿಕೆಯನ್ನು ಪಡೆದಿವೆ. ಅದರಲ್ಲೂ ಕರ್ನಾಟಕದ ಕಿನ್ನಾಳ, ಚನ್ನಪಟ್ಟಣ ಹಾಗೂ ಗೋಕಾಕಗಳು ತುಂಬಾ ಪ್ರಸಿದ್ಧಿಯನ್ನು ಪಡೆದಿವೆ.

ಪರಂಪರಾಗತವಾಗಿ ರೂಢಿಸಿಕೊಂಡು ಬಂದಿದ್ದ ಪಾರಂಪರಿಕ ಕಸಬುಗಳು ಇತ್ತೀಚಿಗೆ ನಿಧಾನವಾಗಿ ಮರೆಯಾಗುತ್ತಿವೆ. ಆದಾಗ್ಯೂ ಜನಪದರಲ್ಲಿ ಹುದುಗಿಕೊಂಡಿರುವ ಪಾರಂಪರಿಕ ಕಸಬುಗಳು ಸದಾ ಬದಲಾದ ರೂಪದಲ್ಲಿ ಪ್ರವಹಿಸುತ್ತಲೇ ಇರುತ್ತವೆ! ಉತ್ತಮ ಸಂಸ್ಕೃತಿಗೆ, ಸಾಂಸ್ಕೃತಿಕ ಬದುಕಿಗೆ ಜಗತ್ತಿಗೇ ಮಾದರಿಯಾಗಿರುವ ಭಾರತದ ಜನಪದರ

ಬದುಕು ಆಧುನಿಕತೆಯ ಸೋಗಿನಲ್ಲಿ ಸೊರಗದೇ ತನ್ನ ಬೇಡಿಕೆಯನ್ನು ದೇಶ-ವಿದೇಶಕ್ಕೂ ವಿಸ್ತರಿಸಿಕೊಂಡಿರುವ ಹೆಗ್ಗಳಿಕೆ ಕಿನ್ನಾಳ ಕಲೆಯದು! ಇದಕ್ಕೆ ವಿಜಯನಗರದಷ್ಟೇ ವೈಭವದ ಇತಿಹಾಸವಿದೆ.

**ಕಿನ್ನಾಳ ಗ್ರಾಮದ ಹಿನ್ನೆಲೆ :**

ಗ್ರಾಮೀಣ ಸೊಗಡಿನ ಕಲೆಯನ್ನು ಕಣ್ಣಿಗೆ ಕಟ್ಟುವಂತೆ ತಯಾರಿಸಿ ಜನಮನ ಗೆದ್ದ ಕಲಾವಿದರ ದೊಡ್ಡಪಡೆಯನ್ನೇ ತನ್ನೊಡಲೊಳಗೆ ಇಟ್ಟುಕೊಂಡಿರುವ ಕಿನ್ನಾಳಿಗೂ ಕಿಟ್ಟದಕಲೆಗೂ ತುಂಬಾ ನಂಟಿದೆ! ಹಿಂದೆ 'ಕಿನ್ನರಪುರ' ಎಂದು ಕರೆಯಿಸಿಕೊಳ್ಳುತ್ತಿದ್ದ ಕಿನ್ನಾಳ ಗ್ರಾಮವು ಕೊಪ್ಪಳ ತಾಲ್ಲೂಕಿನಲ್ಲಿದೆ. ಕುಷ್ಟಗಿಯಿಂದ ೪೦ ಕಿ.ಮೀ. (ಕೊಪ್ಪಳದಿಂದ ೧೧ ಕಿ.ಮೀ) ಪಯಣಿಸಿದರೆ ಸಿಕ್ಕುವ ಅಪ್ಪಟ ಕಲಾಕಾರರು ಹಾಗೂ ನೇಕಾರರ ಊರು. ೨೦೧೧ರ ಜನಗಣತಿಯ ಪ್ರಕಾರ ೧೯೯೫ ಮನೆಗಳು, ೯೮೦೭ ಜನಸಂಖ್ಯೆಯನ್ನು ಹೊಂದಿರುವ ಗ್ರಾಮವಾಗಿದೆ. ಇಲ್ಲಿನ 'ಚಿತ್ರಗಾರ' ಅಥವಾ 'ಜಿನಗಾರ'ರೆಂಬ ಸಮುದಾಯಕ್ಕೆ ಸೇರಿದ್ದರೂ ಮೂಲತಃ ಇವರು ಸೋಮವಂಶ ಆರ್ಯ ಕ್ಷತ್ರಿಯ ಜಾತಿಯ ಸುಮಾರು ೫೫ಕ್ಕೂ ಹೆಚ್ಚು ಕುಟುಂಬಗಳಿದ್ದರೂ ೨೫-೩೦ ಕುಟುಂಬಗಳು ಮಾತ್ರ ಕಿನ್ನಾಳದ ಪಾರಂಪರಿಕ ಕರಕುಶಲ ಕಲೆಯನ್ನು ವೃತ್ತಿಯನ್ನಾಗಿ ಮಾಡಿಕೊಂಡಿವೆ.

ಕಿನ್ನಾಳ ಕಲೆಗೆ ಅದೆಷ್ಟು ಕಿಮ್ಮತ್ತು ಇತ್ತೆಂದರೆ..., ಕಿನ್ನಾಳ ಕಲೆಯ ಬಗ್ಗೆ ಕೇಳಿ-ಓದಿ ತಿಳಿದುಕೊಂಡಿದ್ದ ಅಖಿಲ ಭಾರತ ಕರಕುಶಲ ಕಲಾಮಂಡಳಿಯ ಅಧ್ಯಕ್ಷೆ ಶ್ರೀಮತಿ ಕಮಲಾದೇವಿ ಛಟ್ಟೋಪಾಧ್ಯಾಯರು ೧೯೬೫ರಲ್ಲಿ ಕೊಪ್ಪಳಕ್ಕೆ ಬಂದಾಗ ಕಿನ್ನಾಳಿಗೆ ಭೇಟಿಕೊಡಲೇಬೇಕೆಂದು ಹೊರಟಾಗ ಮಳೆಗಾಲದ ಆ ಕೆಸರಿನಲ್ಲಿ ಅವರ ಕಾರು ಹೂತು ನಿಂತಿತು. ಮುಂದಿನ ಊರಿನವರೆಗೂ ನಡೆದುಕೊಂಡು ಹೋಗಿ ಅಲ್ಲಿಂದ ಎತ್ತಿನಗಾಡಿಯಲ್ಲಿ ಕಿನ್ನಾಳಿಗೆ ಅದರಲ್ಲೂ ಕಿಟ್ಟದ ಬೊಂಬೆಗಳ ಸೃಷ್ಟಿಗಾರರಾದ ಚಿತ್ರಗಾರರೆಲ್ಲರ ಮನೆ ಮನೆಗೂ ಭೇಟಿಕೊಟ್ಟರು! ಆ ಕಲೆಯ ಹಿನ್ನೆಲೆ, ತಯಾರಿಸುವ ವಿಧಾನ, ಕಲಾಕಾರರ ಸಮಸ್ಯೆಗಳನ್ನು ತಿಳಿದುಕೊಂಡು ಹೋಗಿದ್ದರಲ್ಲದೇ ಪರಿಹಾರಕ್ಕೂ ಪ್ರಯತ್ನಿಸಿದ್ದು ಈಗ ಇತಿಹಾಸ.

**ಸೀಮಾತೀತ ಕಿನ್ನಾಳ ಕಲೆ :**

ನಮ್ಮ ದೇಶದ ಕರಕುಶಲ ಕಲೆ, ಸಂಸ್ಕೃತಿ, ಆಚರಣೆಗಳೇ ಹಾಗೆ. ಒಂದಲ್ಲ ಒಂದು ಕಾರಣಕ್ಕೆ ವಿದೇಶಿಯರನ್ನೂ ಆಕರ್ಷಿಸುತ್ತವೆ. ಇದೇ ಕಾರಣಕ್ಕೆ ಕರಕುಶಲ ಕಲೆ,

ಕಲಾಕೃತಿಗಳು ವಿದೇಶಗಳಿಂದ ಸಾಕಷ್ಟು ವರಮಾನವನ್ನೂ ತಂದು ಕೊಡುತ್ತವೆ. ಪ್ರಸಕ್ತ ಹಣಕಾಸು ವರ್ಷದ ರಫ್ತು ಉತ್ತೇಜನ ಸುಮಾರು ೧೭,೦೦೦ ಕೋಟಿ ರೂಪಾಯಿ ಗಳಿಕೆಯನ್ನು ತಂದುಕೊಟ್ಟಿತೆಂಬ ಸುದ್ದಿ ಕರಕುಶಲ ಕಲೆ, ಕಲಾಕೃತಿಗಳ ವೈಭವವನ್ನು ತಿಳಿಸುತ್ತದೆ!

ಹಾಳು ಕೊಂಪೆಯಾದರೂ ಹಂಪೆ ಇಂದಿಗೂ ವಿದೇಶಿ ಪ್ರವಾಸಿಗರನ್ನು ಸೂಜಿಗಲ್ಲಿನಂತೆ ಸೆಳೆಯುತ್ತಿದೆ. ಇದಕ್ಕೆ ಮುಖ್ಯ ಕಾರಣ ಅಲ್ಲಿನ ಕಲ್ಲಿನಲ್ಲಿ ಅಡಗಿದ ಕಲೆ. ಹಂಪಿಯ ಕಲಾ ನೈಪುಣ್ಯದಲ್ಲಿ ಈ ಕಲಾವಿದರ ಶ್ರಮವಿದೆ. ಹೀಗಾಗಿ ಕಿನ್ನಾಳ ಕಲೆಯೂ ವಿದೇಶಿಗರನ್ನು ಆಕರ್ಷಿಸುವುದರಲ್ಲಿ ಆಶ್ಚರ್ಯವೇನಿಲ್ಲ!

ರಾಷ್ಟ್ರರಾಜಧಾನಿ ನವದೆಹಲಿಯಲ್ಲಿ ೨೬.೦೧.೨೦೧೩ರಂದು ಜರುಗಿದ ಭಾರತದ ಹೆಮ್ಮೆಯ ಗಣರಾಜ್ಯೋತ್ಸವ ಪರೇಡ್‌ನಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ ಕಿನ್ನಾಳ ಕಲೆಯ ಸ್ತಬ್ದಚಿತ್ರ ಅನಾವರಣಗೊಂಡಿತು. ಕಿನ್ನಾಳದ ಕಿಶೋರ್ ಚಿತ್ರಗಾರ, ನೀತಾ ಚಿತ್ರಗಾರ, ಅಜಯ್ ಚಿತ್ರಗಾರ ಹಾಗೂ ಮಂಜುನಾಥ ಚಿತ್ರಗಾರರ ಆ ಸತತ ಪರಿಶ್ರಮ ದೇಶ–ವಿದೇಶದ ಗಣ್ಯರಿಂದ ಪ್ರಶಂಸೆಗೆ ಪಾತ್ರವಾಗಿತ್ತು.

ಅದು ೨೦೦೯ರಲ್ಲಿ ಸ್ಕಾಟ್‌ಲ್ಯಾಂಡ್‌ನ ಗ್ಲಾಸ್ಗೊ ವಿಶ್ವವಿದ್ಯಾಲಯದ ಆರು ಜನ ವಿದ್ಯಾರ್ಥಿಗಳು ಕಿನ್ನಾಳಿಗೆ ಬಂದು, ೬೦ ದಿನಗಳ ಕಾಲ ನೆಲೆನಿಂತು, ಗುರುಕುಲ ಮಾದರಿಯಲ್ಲಿ ಕಿನ್ನಾಳ ಕಲೆಯನ್ನು ಕರಗತ ಮಾಡಿಕೊಂಡು ಹೋಗಿದ್ದುದನ್ನು ಇಲ್ಲಿನ ಕಲಾಕಾರರು ಹೆಮ್ಮೆಯಿಂದ ಜ್ಞಾಪಿಸಿಕೊಳ್ಳುತ್ತಾರೆ.

ಹೈದ್ರಾಬಾದಿನ ನವಾಬ ಸಾಲಾರ ಜಂಗ್‌ರು ಒಬ್ಬ ಅದ್ಭುತ ಕಲಾರಾಧಕರಾಗಿದ್ದು ತಮ್ಮದೇ ಒಂದು ಕಲಾ ಸಂಗ್ರಹಾಲಯ ಸ್ಥಾಪಿಸಿದ್ದಾರೆ. ಕಿನ್ನಾಳದ ಕಲಾಕಾರರನ್ನು ಕರೆಯಿಸಿ, ಅವರಿಂದ ಕಲಾಕೃತಿಗಳನ್ನು ಮಾಡಿಸಿಕೊಂಡು, ಅವುಗಳನ್ನು ತಮ್ಮ ಮ್ಯೂಜಿಯಮ್‌ನಲ್ಲಿ ಪ್ರದರ್ಶನಕ್ಕೆ ಇಟ್ಟಿರುವುದು ಕಿನ್ನಾಳ ಕಲೆಗೆ ಸಿಕ್ಕ ದೊಡ್ಡ ಇನಾಮು ಎಂದೇ ಹೇಳಬೇಕು. ಇವರ ಕಲೆಗೆ ಮೆಚ್ಚಿಕೊಂಡು ಪ್ರೋತ್ಸಾಹಿಸಿದರಲ್ಲದೇ ಬಹುಮಾನವನ್ನೂ ಕೊಟ್ಟು ಕಳುಹಿಸಿದ್ದರು. ಅಲ್ಲದೇ ತಮ್ಮ ಅಧೀನಕ್ಕೊಳಪಟ್ಟ ದೇಸಾಯಿಗಳು, ದೇಶಪಾಂಡೆಯವರು, ಜಾಗೀರುದಾರರು ಕಿನ್ನಾಳದ ಕಲಾಕೃತಿಗಳನ್ನು ಕೊಂಡುಕೊಳ್ಳುವ ಮೂಲಕ ಪ್ರೋತ್ಸಾಹಿಸಲೂ ಆದೇಶಿಸಿದ್ದು ಹೆಮ್ಮೆಯ ಸಂಗತಿಯಲ್ಲವೇ?

ಇವರಂತೆ ಸಂಡೂರಿನ ಮಾಜಿ ಮಾಹಾರಾಜ ಎಮ್.ವೈ.ಘೋರ್ಪಡೆಯವರು ಕಲಾಕಾರ ವೆಂಕೋಬಪ್ಪನವರನ್ನು ಕರೆಯಿಸಿಕೊಂಡು ಆಸಕ್ತ ಕಲಾವಿದರಿಗೆ ತರಬೇತಿ ಕೊಡಿಸಿದರಲ್ಲದೇ, ಕಲಾಕೃತಿಗಳನ್ನು ತಯಾರಿಸಿ ಅವುಗಳಿಗೆ ಸೂಕ್ತ ಮಾರುಕಟ್ಟೆ ವ್ಯವಸ್ಥೆ ಮಾಡಿಸಿದ್ದರು.

೧೯೬೫ರಲ್ಲಿ ೧೦ ದಿನಗಳ ಸರ್ ಎಮ್. ವಿಶ್ವೇಶ್ವರಯ್ಯ ಮ್ಯೂಜಿಯಮ್‌ನಲ್ಲಿ ಕಿನ್ನಾಳ ಕಲೆಯನ್ನು ಪ್ರದರ್ಶನಕ್ಕಿಡುವ ಮೂಲಕ ಈ ಕಲೆಗೆ ಪುನಃಶ್ಚೇತನ ನೀಡಲಾಯಿತು.

೧೯೭೦ರಲ್ಲಿ ಚಂದ್ರಿಕಾ ಗುತ್ತಲರವರು ಭಾರತ ಕರಕುಶಲ ಕಲಾಮಂಡಳಿಯ ಅಧ್ಯಕ್ಷೆಯಾಗಿದ್ದಾಗ ಸೀಜನಲ್ ಗ್ರೀಟಿಂಗ್ ಕಾರ್ಡಿಗೆ ಕಿನ್ನಾಳ ಕಲೆ ಬಳಸಿ, ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಪ್ರಖ್ಯಾತಿ ದೊರಕಿಸಿಕೊಟ್ಟರು.

ರಾಜ್ಯ ಹಾಗೂ ಹೊರ ರಾಜ್ಯಗಳಲ್ಲಿ ಇಲ್ಲಿನ ಕಲಾವಿದರು ಯುವಕರಿಗೆ ತರಬೇತಿ ಕೊಡುತ್ತಾರೆ! ಈ ಮೂಲಕ ಕುಲಕಸಬನ್ನು ಒಂದು ಪಾರಂಪರಿಕ ಕಸಬನ್ನಾಗಿಸಲು ಅಣಿಗೊಳಿಸುತ್ತಿದ್ದಾರೆಂದರ್ಥ!! "ಸರ್, ನಾವು ನಮ್ಮ ರಾಜ್ಯದಲ್ಲಿ ಮಾತ್ರವಲ್ಲದೇ, ಹೊರ ರಾಜ್ಯಗಳ ನಗರಗಳಾದ ಭೂಪಾಲ, ಉದಯಪುರ, ನಾಗಪುರ ಹಾಗೂ ಮಹಾರಾಷ್ಟ್ರದ ಸಾವಂತವಾಡಗಳಿಗೆ ಹೋಗಿ ಅಲ್ಲಿನ ಯುವ ಸಮೂಹಕ್ಕೆ ಕಿನ್ನಾಳ ಕಲೆಯ ತರಬೇತಿ ನೀಡಿ ಬಂದಿದ್ದೇವೆ." ಎಂದು ಹೆಮ್ಮೆಯಿಂದ ಶ್ರೀಮತಿ ನೀತಾ ಚಿತ್ರಗಾರ ಹೇಳುತ್ತಾರೆ.

**ಕಿನ್ನಾಳ ಕಲೆಯ ಚಾರಿತ್ರಿಕ ಹಿನ್ನೆಲೆ :**

ಕಿನ್ನಾಳ ಕಲೆಯ ಚಾರಿತ್ರಿಕ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ಈ ಕಲೆ ವಿಜಯನಗರದ್ದೇ? ಅಥವಾ ನಂತರದ್ದೇ? ಎಂಬ ಅನುಮಾನಗಳೂ ಇಲ್ಲದಿಲ್ಲ! ಒಟ್ಟಿನಲ್ಲಿ ಐತಿಹಾಸಿಕವಾಗಿ ಕಿನ್ನಾಳ ಕಲಾ ಪರಂಪರೆಯ ಮೂಲವನ್ನು ಗಟ್ಟಿಗೊಳಿಸುವಲ್ಲಿ ಒಂಚೂರು ಅಳುಕುಂಟು!

ಆದರೂ ಕಿನ್ನಾಳ ಕಲಾಪರಂಪರೆಯ ಅಸ್ತಿತ್ವದ ಹೆಜ್ಜೆಗುರುತಿನ ಜಾಡು ಹಿಡಿದು ಹೊರಟರೆ... ಅದಕ್ಕೆ ವಿಜಯನಗರ ಸಾಮ್ರಾಜ್ಯದಷ್ಟೇ ಗತವೈಭವವಿದೆ!

**ಕಿನ್ನಾಳ ಚಿತ್ರಗಾರರ ಮನೆ ದೇವರು ಕಮಲಾಪುರದ ಆಂಜನೇಯ :**

ಹೌದು. ಕಿನ್ನಾಳದ ಚಿತ್ರಗಾರರು ಹಂಪೆಯ ಮೂಲದವರೇ ಆಗಿದ್ದು, ಅಲ್ಲಿಯೇ ನೆಲೆನಿಂತಿದ್ದರೆಂಬುದಕ್ಕೆ ನಂಬಲರ್ಹವಾದ ಸಾಕ್ಷಿಯೂ ಇದೆ! ಈಗಲೂ ಕಿನ್ನಾಳದ ಚಿತ್ರಗಾರರ ಮನೆದೇವ್ರು, ಕುಲದೈವ, ಆರಾಧ್ಯದೈವ ಕನ್ನಡ ವಿಶ್ವವಿದ್ಯಾಲಯದ ಹಿಂಬದಿಯಲ್ಲಿರುವ ಕಮಲಾಪುರ(ಮೇಫ್ರಿ)ದ ಆಂಜನೇಯನೇ. ಈಗಲೂ ಪ್ರತೀವರ್ಷ ಅಲ್ಲಿಗೆ ಹೋಗಿ ಬರುವುದುಂಟು.

**ಉಜ್ಜನಿ ಮಠದಲ್ಲಿ ಈ ಪರಂಪರೆಯ ಮೂರ್ತಿಗಳ ಸುಳಿವು ಲಭ್ಯವಾಗುತ್ತದೆ :**

ಉಜ್ಜನಿ ಪೀಠಾಧಿಕಾರದ ಸಂದರ್ಭದಲ್ಲಿ ೨೦,೦೦೦ ರೂಪಾಯಿಗಳಿಗೆ ಆ ಅಮೂಲ್ಯ ಮೂರ್ತಿಗಳನ್ನು ಸ್ವಚ್ಚಗೊಳಿಸಿಕೊಟ್ಟ ಇವರು, ಅವು ಸ್ಪಷ್ಟವಾಗಿ ನಮ್ಮ ಸಾಂಪ್ರದಾಯಿಕ ಕಲೆಯೇ ಎಂದು ಹೇಳುತ್ತಾರೆ!

**ಹೊಸೂರಮ್ಮನಿಗೆ ಬಣ್ಣ ಮಾಡಲು ವಿಜಯನಗರದಿಂದ ಚಿತ್ರಗಾರರು :**

"ಹೊಸಪೇಟೆ ತಾಲ್ಲೂಕಿನ ಹೊಸೂರಮ್ಮನಿಗೆ ಬಣ್ಣ ಮಾಡಲು ಈಗಲೂ ಕಿನ್ನಾಳದಿಂದ ಹೋಗುವ ಪರಂಪರೆ ಮುಂದುವರಿದುಕೊಂಡು ಬಂದಿದೆ. ಅಲ್ಲಿಯೇ ದೊರೆತ ಶಾಸನವು Annual Reports on Indian Epgraphy ೧೯೨೨-೧೯೨೩ ನಲ್ಲಿ ಪ್ರಕಟವಾಗಿದೆ. ಕಿನ್ನಾಳ ಕಲೆ ವಿಜಯನಗರದ ಕಾಲದ್ದೆನ್ನುವತ್ತ ಈ ಶಾಸನ ನಮ್ಮ ಗಮನವನ್ನು ಸೆಳೆಯುತ್ತದೆ." [೩೭]

**ಮೂರ್ತಿಗಳ ಲಕ್ಷಣಗಳು :**

ಹಿಂದೂಪುರ ಜಿಲ್ಲೆಯ ಲೇಪಾಕ್ಷಿ ದೇವಸ್ಥಾನ ಮತ್ತು ಹಂಪೆಯ ಪಂಪಾವಿರೂಪಾಕ್ಷೇಶ್ವರ ದೇಗುಲದ ರಂಗಮಂದಿರದ ಮೇಲ್ಛಾವಣಿಯಲ್ಲಿರುವ ಭಿತ್ತಿಚಿತ್ರಗಳು ಹಾಗೂ ತಂಜಾವೂರು ಶೈಲಿಯ ಶಿವ-ಪಾರ್ವತಿಯರ ವಿವಾಹದ ಬೊಂಬೆಗಳು, ಉಜ್ಜನಿ ಪೀಠದಲ್ಲಿನ ಬೊಂಬೆಗಳು ಹಾಗೂ ಈಗ ಕಿನ್ನಾಳ ಚಿತ್ರಗಾರರಿಂದ ತಯಾರಾಗುತ್ತಿರುವ ಬೊಂಬೆಗಳಿಗೂ ತುಂಬಾ ಹೋಲಿಕೆಯ ಲಕ್ಷಣಗಳಾದ ಅರ್ಧ ತ್ರಿಕೋನಾಕಾರದ ಮೂಗು, ಚಿಕ್ಕ ಗಲ್ಲ, ಹದವಾದ ಎದೆಯ ಲಕ್ಷಣಗಳನ್ನು

ಕಾಣುವುದರಿಂದ ಖಂಡಿತವಾಗಿಯೂ ಈ ಕಲೆಗೆ, ಕಲಾಕಾರರಿಗೆ ರಾಜಾಶ್ರಯ ನೀಡಿದ್ದವರು ವಿಜಯನಗರದ ಅರಸರೇ ಎಂದು ಹೇಳಬಹುದು!

೧೫೬೫ರ ಜನವರಿ ೨೩ರಿಂದ ಪ್ರಾರಂಭವಾದ ರಕ್ಕಸ–ತಂಗಡಗಿ ಅಥವಾ ತಾಳಿಕೋಟೆ ಯುದ್ಧದಲ್ಲಿ ಗಾಯಗೊಂಡು ಶತ್ರುವಶವಾದ ರಾಮರಾಯನನ್ನು ಹುಸೇನ್ ನಿಜಾಂ ಷಾನು ಶಿರಚ್ಛೇದ ಮಾಡಿದ ನಂತರ ವಿಜಯನಗರ ಸಾಮ್ರಾಜ್ಯ ಅವನತಿಯ ಹಾದಿ ಹಿಡಿಯಿತು. ಸುಮಾರು ಆರು ತಿಂಗಳ ಕಾಲ ನಡೆದ ಲೂಟಿ, ಕೊಲೆ, ಅತ್ಯಾಚಾರ, ಮಂದಿರಗಳ ವಿಧ್ವಂಸಗಳಿಂದ ತತ್ತರಿಸಿ, ವಿಜಯನಗರ ಸಾಮ್ರಾಜ್ಯದಲ್ಲಿ ಆಶ್ರಯ ಪಡೆದಿದ್ದ ಅನೇಕ ಕಲಾವಿದರೂ ಸುರಕ್ಷಿತ ಊರಿನ ಹಾದಿ ಹಿಡಿದರು. ಅವರಲ್ಲಿ ಕೆಲವರು ಆಂಧ್ರಪ್ರದೇಶದ ಅನಂತಪುರ, ಬಳ್ಳಾರಿ ಜಿಲ್ಲೆಯ ಕಂಪ್ಲಿಗೆ ಬಂದು ನೆಲೆ ನಿಂತರು. ಅವರ್‍ಯಾರೂ ತಮ್ಮ ಪಾರಂಪರಿಕ ಕಸಬನ್ನು ಮುಂದುವರಿಸಲಿಲ್ಲ. ಆದರೆ... ಕಿನ್ನಾಳಿಗೆ ಬಂದು ನೆಲೆನಿಂತ ಭಿತ್ತಿ ಚಿತ್ರಕಲಾಕಾರ 'ಹಂಪೆಯ ಮಗ ಸಂಜೀವಪ್ಪ'[೩೮] ಮಾತ್ರ ತಮ್ಮ ಪಾರಂಪರಿಕ ಕಸಬನ್ನು ಮುಂದುವರಿಸಿದನು. ಈತನೇ ಕಿನ್ನಾಳ ಕಲೆಯ ಮೂಲಪುರುಷ. ಈ ಕಲಾಕಾರರು ಇಲ್ಲಿಗೆ ಬಂದನಂತರ ಆ ಕಾಲದ ದೇಸಾಯಿ, ದೇಶಮುಖ, ನಾಡಗೌಡರ, ಶ್ರೀಮಂತರ, ಮಾಂಡಲೀಕರ, ಪಾಳೇಗಾರರ, ಸುಬೇದಾರರ ನಿವಾಸಗಳ ಗೋಡೆಗಳಿಗೆ ಭಿತ್ತಿ–ಚಿತ್ರ ಬಿಡಿಸುತ್ತಿದ್ದರು. ವಿಜಯನಗರದ ಆ ಒಂದೇ ಶೈಲಿಯ ಭಿತ್ತಿ–ಚಿತ್ರಗಳನ್ನು ಬಿಡಿಸುತ್ತಿದ್ದ ಇವರ ಕಲೆಯನ್ನು ಕಿನ್ನಾಳ ಕಲೆ ಎಂದೇ ಪ್ರಸಿದ್ಧಿ ಪಡೆಯಿತು. ಅದೀಗ ವಿದೇಶದಲ್ಲಿ ವಿಜೃಂಭಿಸುತ್ತಿದ್ದರೂ, ವಿದೇಶಿ ಕಲಾಕಾರರು ಈ ಕಲೆಯನ್ನ ಅನುಕರಿಸುತ್ತಿದ್ದರೂ ಅದು ನಯಗಾರಿಕೆ ಮತ್ತು ವರ್ಣ ವಿನ್ಯಾಸಗಳಿಗೆ ತುಂಬಾ ಪ್ರಸಿದ್ಧಪಡದೆ ಕಿನ್ನಾಳ ಕಲೆಯೇ ಆಗಿರುತ್ತದೆ.

**ಬಳಸಲ್ಪಡುವ ಕಟ್ಟಿಗೆ :**

ಕಿನ್ನಾಳದ ಕಲಾಕಾರರು ಗೊಂಬೆಗಳ ತಯಾರಿಕೆಗೆ ಸ್ಥಳೀಯವಾಗಿ ದೊರೆಯುವ ಮತ್ತು ಇಂದರಗಿ, ಜಬ್ಬಲಗುಡ್ಡ, ಕುದುರಿಮೋತಿ, ಗಂಗಾವತಿಯ ಅಕ್ಕ–ಪಕ್ಕದ ಗುಡ್ಡದಲ್ಲಿ ದೊರೆಯುವ ಹಿರೇಬೇವು (ಹೆಬ್ಬೇವು) ಮತ್ತು ಏಸ್‌ಬೇನಿ(ವಿಷ ಬೇವು), ಹತ್ತಿಮರ, ಹಲಗತ್ತಿ ಕಟ್ಟಿಗೆ, ಪಳಕಿನಮರ, ನುಗ್ಗೆ ಕಟ್ಟಿಗೆ ಇತ್ಯಾದಿ ಜಾತಿಯ ಕಟ್ಟಿಗೆ ಅಥವಾ ಒಣಮರವನ್ನು ಬಳಸುತ್ತಾರೆ. ಗ್ರಾಹಕರು ಇಷ್ಟಪಟ್ಟಲ್ಲಿ ಗಟ್ಟಿಯಾದ ಹಾಗೂ ದೀರ್ಘ ಬಾಳಿಕೆಗೆ, ತುಂಬಾ ನಯ ನಾಜೂಕಿಗೆ ಹೆಸರಾದ ಶ್ರೀಗಂಧ ಮತ್ತು ಸಾಗವಾನಿ ಅಥವಾ

ತೇಗದ(ಟೀಕ್‌ವುಡ್) ಕಟ್ಟಿಗೆಯನ್ನೂ ಬಳಸುತ್ತಾರೆ. ಗ್ರಾಮದೇವತೆಯ ತಿಲಕದ ಜಾಗದಲ್ಲಿ ಜೀವ ತುಂಬಲು 'ರಕ್ತ ಹೊನ್ನಿ' ಕಟ್ಟಿಗೆಯನ್ನು ವಿಶೇಷವಾಗಿ ಬಳಸುತ್ತಾರೆ.

ಈ ಕಟ್ಟಿಗೆಗಳನ್ನೇ ಬಳಸಲು 'ಗುಟ್ಟಿ'ನ ಕಾರಣವೂ ಇದೆ! ಚಿಕ್ಕ ಚಿಕ್ಕ ವಸ್ತು ಅಥವಾ ಮೂರ್ತಿಯಿಂದ ಹಿಡಿದು ದೊಡ್ಡ ದೊಡ್ಡಮೂರ್ತಿಗಳ ತಯಾರಿಕೆಗೂ ಬಳಸಬಹುದು. ಜೊತೆಗೆ ತುಂಬಾ ಹಗುರವೂ ಆಗಿರುತ್ತವೆ. ವಿಷಯುಕ್ತ ಔಷಧೀಯ ಗುಣದಿಂದಾಗಿ ಹುಳುಕು ಅಥವಾ ಕೀಡೆಗೆ ತುತ್ತಾಗುವುದಿಲ್ಲ. ಇದಕ್ಕೆ ಮತ್ತೊಂದೂ ಕಾರಣವಿದೆ- ಹುಳುಕು ಹತ್ತಬಾರದೆಂಬ ನಂಬಿಕೆಯಿಂದ ಅಮವಾಸೆಯ ನಂತರ ಹುಣ್ಣಿಮೆಯೊಳಗೆ ಕಡಿಯುತ್ತಾರಂತೆ! ಹಿರೇಬೇವು (ಹೆಬ್ಬೇವು) ಮತ್ತು ಏಸ್‌ಬೇನಿ(ವಿಷ ಬೇವು) ಕಟ್ಟಿಗೆಯಿಂದ ತಯಾರಿಸಿದ ಕಲಾಕೃತಿಗಳು ಅಗ್ಗದ ದರದಲ್ಲೂ ಲಭ್ಯವಾಗುತ್ತವೆ!

**ಸೃಷ್ಟಿಸುವ ಕಲಾ ಮೂರ್ತಿಗಳು :**

ಕಿನ್ನಾಳ ಗ್ರಾಮದ ಕೀರ್ತಿ ದೇಶ-ವಿದೇಶಕ್ಕೂ ಹರಡಲು ಅವರು ತಯಾರಿಸುವ ಕಲಾಗೊಂಬೆಗಳು ಮತ್ತು ಮೂರ್ತಿಗಳೇ ಕಾರಣ. ಅವುಗಳಲ್ಲಿ ಮುಖ್ಯವಾಗಿ ಗೋಡೆಗೆ ತೂಗು ಹಾಕುವ ಫಲಕಗಳಲ್ಲಿ ಮುಖ್ಯವಾಗಿ ಎತ್ತುಗಳ ಮುಖ, ಹಣ್ಣು-ಹಂಪಲುಗಳು ತುಂಬಿದ ಬುಟ್ಟಿ, ಜಿಂಕೆ, ಸಾರಂಗ, ಎತ್ತು, ಹುಲಿ, ಸಿಂಹಗಳಂತಹ ಪ್ರಾಣಿಗಳ ತಲೆ, ದ್ಯಾಮವ್ವ, ಮಲೆಮ್ಮ, ಕೂಗಮ್ಮ, ಮೈಲಮ್ಮ, ದುರುಗಮ್ಮ, ಸುಂಕಲಮ್ಮ, ಗಾಳೆಮ್ಮ ಹಾಗೂ ಕಾಳಿಕಾಮಾತೆಯಂತಹ ಗ್ರಾಮದೇವತೆಯ ವಿಗ್ರಹಗಳು, ದ್ವಾರಪಾಲಕರ ಮೂರ್ತಿಗಳು, ಗರುಡ, ಆಂಜನೇಯ, ನಂದಿ, ರಾಧಾ-ಕೃಷ್ಣ, ಗೌರಿ-ಗಣೇಶ, ಶಿವ-ಪಾರ್ವತಿ, ಕಾಮ-ರತಿ, ಲಕ್ಷ್ಮಿ, ಕೊಂತಿ, ಸರಸ್ವತಿ, ಸೂರ್ಯ, ಚಂದ್ರ, ಗ್ರಾಮದೇವತೆಯ ಪಲ್ಲಕ್ಕಿ, ದಶಾಮಿಯ ದಿಂಡು, ಉಚ್ಚಾಯ, ಗೊಂಡೆ ಇಳಿಬಿಟ್ಟ ರೇಷ್ಮೆ ಕೆಂಪು ಹೊದಿಕೆಯ ಛತ್ರಿ, ಹಿಮಾಲಯದಿಂದ ತರಿಸಿದ ಚಮರೀಮೃಗದ ಕೂದಲು ಕಲಾಕೃತಿಯುಳ್ಳ ಕಟ್ಟಿಗೆಯ ಹಿಡಿಕೆಯ ಚಾಮರ, ದಸರಾಕ್ಕೆ ಬೇಕಾದ ಮತ್ತು ಗ್ರಾಮದೇವತೆಯ ವಾಹನ(ಪ್ರಾಣಿ)ಗಳಾದ ಕುದುರೆ, ಸಿಂಹ, ಹುಲಿಗಳು,

'ಕಿನ್ನಾಳ ಚೌಕಿ' ಎಂದೇ ಪ್ರಸಿದ್ಧಿ ಪಡೆದ ಸಿಂಹಾಸನಚೌಕಿ, ಟೇಬಲ್‌ಚೌಕಿ, ಚತುರ್ಭುಜ, ಅಷ್ಟಭುಜ, ನಕ್ಷತ್ರಾಕಾರ, ವೃತ್ತಾಕಾರದ ವಿನ್ಯಾಸವುಳ್ಳ ಚೌಕಿಗಳು ತುಂಬಾ ವೈಶಿಷ್ಟ್ಯತೆಯಿಂದ ಗುರುತಿಸಿಕೊಂಡಿವೆ. ರಾಜಸ್ಥಾನಿಯರು ಅಥವಾ ಮಾರ್ವಾಡಿಗಳು ಮದುವೆಗೆ ಬಳಸಲೇಬೇಕಿರುವ ಚೌಕಿಮಣೆ, ದೇವರ ಪೀಠ(ಚೌಕಿ), ಕಟ್ಟಿಗೆಯ

ಸ್ಟ್ಯಾಂಡ್‌ಗಳಿರುವ ದೇವರ ಉಯ್ಯಾಲೆ ತೊಟ್ಟಿಲು, ಮಕ್ಕಳ ತೊಟ್ಟಿಲುಗಳು, ಚೈತ್ರ ಮಾಸದ ತೊಟ್ಟಿಲು (ಉಯ್ಯಾಲೆ ಅಥವಾ ತೂಗುಯ್ಯಾಲೆ) ಗೌರಿ, ಕೀಲದಗೌರಿ, ಮೊದಲಾದ ವಸ್ತುಗಳನ್ನು ಸೃಷ್ಟಿ ಮಾಡುತ್ತಾರೆ. ಜಾತ್ರೆಗಳಲ್ಲಿ ಮಕ್ಕಳಿಗೆಂದೇ ತಯಾರಿಸಿದ ಆಟಿಕೆಗಳಾದ ಬಸವ, ಬಂಡಿ, ರೈತ, ಪೌರಾಣಿಕ ನಾಟಕ ಅಥವಾ ಉತ್ತರ ಕರ್ನಾಟಕದ ಬಯಲಾಟಗಳಿಗೆ ಬೇಕಾಗುವ ಕಿರೀಟ, ಭುಜಕೀರ್ತಿ, ಕೈತೋಳು, ಎದೆಗವಚ, ಮುಖವಾಡ ಮತ್ತು ಉಡುಗೆ–ತೊಡುಗೆಗಳಂತಹ ರಂಗ ಪರಿಕರಗಳ ತಯಾರಿಕೆಯಲ್ಲಿ ಕೂಡಾ ಈ ಚಿತ್ರಗಾರರು ಅಪೂರ್ವ ಸಿದ್ಧಿಯನ್ನು ಪಡೆದಿದ್ದಾರೆ.

ಇವುಗಳಲ್ಲದೇ ಚಿತ್ರಗಾರರ ಮಹಿಳೆಯರು ಮತ್ತು ಮಕ್ಕಳು ತಮ್ಮ ಬಿಡುವಿನ ವೇಳೆಯಲ್ಲಿ ಸಗಣಿ, ಕಟ್ಟಿಗೆಯ ಪುಡಿ, ಕಟ್ಟಿಗೆಯಕಡ್ಡಿ ಹಾಗೂ ಬಟ್ಟೆಯಿಂದ ತಯಾರಿಸಿದ ತಾಯಿ–ಮಗು, ರೈತ–ಮಹಿಳೆ, ಎತ್ತುಗಳು, ಬಂಡಿ, ಕುದುರೆ, ಕಿಸುಗಾಲಿನ ಗೊಂಬೆಗಳಂತಹ ಆಟಿಕೆಗಳು ತುಂಬಾ ಆಕರ್ಷಕವಾಗಿದ್ದು, ಜಾತ್ರೆ, ಉರುಸು, ಸಂತೆಗಳಲ್ಲಿ ಅಗ್ಗದ ದರದಲ್ಲಿಯೂ ದೊರೆಯುತ್ತವೆ.

ಕಿನ್ನಾಳ ಕಲೆಯು ಚಿತ್ರಕಲೆ ಮತ್ತು (ಮರ)ಶಿಲ್ಪ ಎರಡರ ಸಂಯೋಜನೆಯಾಗಿರುವುದರಿಂದ ಈ ಕಲಾಕಾರರು ಕೇವಲ ಗುಡಿಗಾರರು ಮಾತ್ರವಲ್ಲದೇ ಬಡಗಿಗಳೂ ಕೂಡ ಆಗಿದ್ದಾರೆ! ಇವರು ಪೌರಾಣಿಕ, ಧಾರ್ಮಿಕ, ಸಾಮಾಜಿಕ, ಜಾನಪದೀಯ ಅಂಶಗಳೊಂದಿಗೆ ಭಾರತೀಯರ ಭಾವನಾತ್ಮಕ ಸಂವೇದನೆಗಳಾದ ಭಕ್ತಿ, ಪ್ರೇಮ, ಕರುಣೆ, ವಾತ್ಸಲ್ಯಗಳನ್ನು ತಮ್ಮ ಕಲೆಯ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ.

**ಕಿನ್ನಾಳ ಕಲೆಗೆ ಆಧುನಿಕ ಸ್ಪರ್ಶ..! :**

ದಸರೆಯಲ್ಲಿ ದುರ್ಗಾದೇವಿ, ಗೌರಿ ಹುಣ್ಣಿಮೆಗೆ ಗೌರಿ, ದೀಪಾವಳಿಗೆ ಲಕ್ಷ್ಮೀದೇವಿ, ಗಣೇಶ ಚತುರ್ಥಿಗೆ ಗಜಾನನ ಹೀಗೆ ವಿವಿಧ ಹಬ್ಬಗಳಲ್ಲಿ ಮೂರ್ತಿ ತಯಾರಿಸಿಕೊಡುತ್ತಿರುವ ಪಾರಂಪರಿಕ ಕಿನ್ನಾಳ ಕಲೆ ಕಾಲಕ್ಕೆ ತಕ್ಕಂತೆ ಬದಲಾಗುತ್ತಾ ಆಧುನಿಕ ಸ್ಪರ್ಶ ಪಡೆಯುತ್ತಿದೆ. ಮೂಲತಃ ಹಣ್ಣಿನ ತಟ್ಟೆ, ಗ್ರಾಮದೇವತೆ ಹಾಗೂ ಗೊಂಬೆಗಳನ್ನು ತಯಾರಿಸುತ್ತಿದ್ದ ಕಲಾವಿದರು ಮಾರುಕಟ್ಟೆ ದೃಷ್ಟಿಯಿಂದ ಆಧುನಿಕ ವಸ್ತುಗಳನ್ನೂ ತಯಾರಿಸುತ್ತಿದ್ದಾರೆ!

ಇತ್ತೀಚಿಗಂತೂ ಟೀಪಾಯ್ ಮೇಲೆ ಉಬ್ಬುಚಿತ್ರ (ಎಂಬೋಸಿಂಗ್ ವರ್ಕ್) ತಯಾರಿಕೆಯ ಬಗ್ಗೆ ಯುವಕರು ಹೆಚ್ಚು ಆಸಕ್ತಿ ಹೊಂದಿದ್ದಾರೆ. "ಸರ್, ಈ ಟೀಪಾಯ್‌ಗಳಿಗೆ ಇದೀಗ ಆನ್ ಲೈನ್ ಮೂಲಕ ಬೇಡಿಕೆ ಹೆಚ್ಚಾಗಿದೆ. ಮೊನ್ನೆ ಮೊನ್ನೆ ಒಂದನ್ನು ಇಂಗ್ಲೆಂಡಿಗೂ, ಮತ್ತೊಂದನ್ನು ಅಮೇರಿಕಾಕ್ಕೂ ಕಳಿಸಿದ್ದೇವೆ. ಗಣ್ಯರ ಮನೆಗಳಿಗೆ ಅಲಂಕಾರಿಕ ವಸ್ತುಗಳ ತಯಾರಿಕೆಗೂ ಬೇಡಿಕೆ ಬರುತ್ತಿದೆ. ಈಗೆಲ್ಲಾ ಇ–ಬ್ಯಾಂಕಿಂಗ್ ವ್ಯವಹಾರ ನಡೆಯುವುದರಿಂದ ಉತ್ತಮ ಕಲೆಗೆ ಖಂಡಿತಾ ಬೆ(ನೆ)ಲೆ ಇದೆ." ಎಂಬ ತೃಪ್ತಿಯ ಭಾವದಿಂದ ಕಿಶೋರ ಚಿತ್ರಗಾರ ಹೇಳಿಕೊಳ್ಳುತ್ತಾರೆ. ಮೊದಲಿನಂತೆ ಗ್ರಾಮೀಣ ಕಲೆಯ ತಯಾರಿಕೆ ಕಡಿಮೆಯಾಗಿದ್ದರೂ ಕೆಲವರು ಆಧುನಿಕತೆಗೆ ತಕ್ಕಂತೆ ಹೊಸ ಹೊಸ ಕಲಾಕೃತಿಗಳಾದ ಎಲೆ‌ಅಡಿಕೆ ತಟ್ಟೆ ನೆನಪಿನ ಕಾಣಿಕೆಗಳು ತರಕಾರಿ ತಟ್ಟೆ, ಗೋಡೆಫಲಕಗಳು, ಶೋಕೇಸ್ ಫಲಕಗಳು, ಮೊಮೆಂಟಮ್ಸ್ ಇತ್ಯಾದಿಗಳನ್ನು ತಯಾರಿಸುತ್ತಿದ್ದಾರೆ.

"ಈ ಕಲೆಗೆ ಇನ್ನಷ್ಟು ಆಧುನಿಕ ಸ್ಪರ್ಶ ನೀಡುವ ವಿಶಿಷ್ಟ ಪ್ರಯೋಗವೀಗ ಕೇಂದ್ರ ಲಲಿತಕಲಾ ಅಕಾಡೆಮಿ ಹಾಗೂ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಸಹಯೋಗದಲ್ಲಿ ನಡೆಯಿತು. ಇದರ ಮೊದಲ ಶಿಬಿರದಲ್ಲಿ ಹೊರಾಜ್ಯಗಳ ಕಲಾವಿದರನ್ನು ಕರೆಸಿ ಅವರ ಯೋಚನೆಧಾರೆಯನ್ನು ಈ ಕಲೆಗೆ ಅಳವಡಿಸಿ ಹೊಸ ಪ್ರಯೋಗಕ್ಕೆ ನಾಂದಿ ಹಾಡಲಾಗಿದೆ. ಒಬ್ಬೊಬ್ಬರದೂ ಒಂದೊಂದು ತೆರನಾದ ಶಿಲ್ಪ–ಕೇರಳದ ಜೋಸೆಫ್ ಫನಾತಂಡಿಸ್ ಅವರ 'ಮೀನಿನ ಮೇಲೆ ಸವಾರಿ', ಬರೋಡದ ಸಿದ್ಧಾರ್ಥ್ ಅವರ 'ರಥದಲ್ಲಿ ರಾಕ್ಷಸ', ಒಡಿಶಾದ ವೀರೇಂದ್ರ 'ಪಾಣಿ ಕರ್ನಾಟಕದ ನಕ್ಷೆ', ದೆಹಲಿಯ ಶಾಂಭವಿಸಿಂಗ್ ಅವರ 'ಆಧುನಿಕ ಬಾತ್‌ಟಬ್' ಬೆಂಗಳೂರಿನ ಶಾಂತಾಮಣಿಯವರ 'ಕಿನ್ನಾಳ ಕಿಸಗಾಲು', ಛತ್ತೀಸ್‌ಗಡದ ಶಿವಕುಮಾರ್‌ವರ್ಮ ಅವರ 'ಕಣ್ಣಿನೊಳಗೆ ಕಾಮಧೇನು'... ಸೇರಿದಂತೆ ಕಲಾವಿಧರ ಕಲ್ಪನೆಯ ಮೂಸೆಯಿಂದ ಹತ್ತು ಹಲವಾರು ವಿಭಿನ್ನ ರೀತಿಯಲ್ಲಿ ಕಿನ್ನಾಳ ಕಲೆ ಮೂಡಿಬಂತು."[೩೭]

**ಕಿಟ್ಟದ ಗೊಂಬೆ ತಯಾರಿ ಹೇಗೆ? :**

ಮೊದಲು ಕಟ್ಟಿಗೆಯಿಂದ ಮೂರ್ತಿ ಅಥವಾ ಗೊಂಬೆಯನ್ನು ತಯಾರಿಸಿಕೊಳ್ಳುತ್ತಾರೆ. ಬಳಿಕ ಅಂತಿಮ ರೂಪಕ್ಕೆ ತಮ್ಮದೇ ಆದ ಸರಕು ಮೆದು ಅಂಟಿನಂತಹ ಪದಾರ್ಥ **'ಕಿಟ್ಟ'** ದಿಂದ ಕಿವಿ, ಮೂಗು, ಕಣ್ಣಿನ ಹುಬ್ಬು ಸೇರಿದಂತೆ ಮೂರ್ತಿಯ ವಿವಿಧ ಭಾಗಗಳಿಗೆ ಹಚ್ಚಿ

ಅಂತಿಮ ರೂಪ ನೀಡುತ್ತಾರೆ. ನಂತರ ಅವುಗಳ ಆಕಾರ ನೈಜತೆಯ, ನಯ-ನಾಜೂಕಿನ ಮೆರಗು ಬರಲು ಹಾಗೂ ಒಣಗಿದ ನಂತರ ಬಿರುಕು ಬಿಡದಿರಲು(ಸೀಳದಿರಲು), ಒಡೆದು ಹೋಗದಿರಲು ಈ ಕಿಟ್ಟವನ್ನು ಮೆತ್ತುತ್ತಾರೆ, ನಯಗೊಳಿಸುತ್ತಾರೆ. ತಾ(ಬಾ)ಳಿಕೆ ಬರುವಂತೆ ಮಾಡುತ್ತಾರೆ. ಇದಕ್ಕೆ ಕಾರಣವೇ ಕಿಟ್ಟ! ಕಟಿಗೆಯಲ್ಲಿ ಮಾಡಿದ ಮೂರ್ತಿಯ ಬಾಗು ಬಳಕುಗಳನ್ನು, ಉಬ್ಬು-ತಗ್ಗುಗಳನ್ನು ಕಿಟ್ಟದಿಂದ ಸ್ಪಷ್ಟ ರೂಪ ಕೊಡುತ್ತಾರೆ. ಈ ಕಿಟ್ಟವೇ ಮೂರ್ತಿಗಳ ಮಾಂಸ-ಖಂಡಗಳೆನ್ನ ಬಹುದು!

ಹಾಗಾದರೆ ಕಿಟ್ಟದ ತಯಾರಿಕೆ ಹೇಗೆ? ಹುಣಸೆ ಹಣ್ಣಿನ ಬೀಜ, ಕಟ್ಟಿಗೆಯಪುಡಿ, ಗೋಣಿ(ಸೆಣಬಿನ)ಚೀಲದ ತುಣುಕುಗಳು ಹಾಗೂ ಮರದ ಅಂಟನ್ನು ನೀರಿನಲ್ಲಿ ನೆನೆಯಿಟ್ಟು, ನಂತರ ಅದನ್ನು ಗುಂಡುಕಲ್ಲಿನಲ್ಲೋ, ಒರಳುಕಲ್ಲಿನಲ್ಲೋ ರುಬ್ಬುತ್ತಾರೆ, ಅರಲಿನಂತೆ ಹದಗೊಳಿಸುತ್ತಾರೆ. ಇದೇ ಕಿಟ್ಟ. ನಂತರ ಗಾಳಿಗೆ ಆರಿದ, ಬಿಸಿಲಿಗೆ ಒಣಗಿದ ಆ ಮೂರ್ತಿಗಳಿಗೆ ತಕ್ಕಂತೆ ಬಣ್ಣ ಬಳಿದು ನೈಜತೆಗೆ ಅಣಿಗೊಳಿಸಿದರೆ ಅದು ಮಾರಾಟಕ್ಕೆ ಸಿದ್ಧ!

**ಕಿನ್ನಾಳದ ವಿಶೇಷ ಕಲ್ಲುಗಳ ಬಣ್ಣ :**

ಕಿನ್ನಾಳದ ಕಲಾ ಮೂರ್ತಿಗಳು ವಿಶ್ವವಿಖ್ಯಾತವಾಗಲು ಕಿನ್ನಾಳದ ಈ ಚಿತ್ರಗಾರರೇ ಸ್ವತಃ ತಯಾರಿಸಿದ ಕಿನ್ನಾಳದ ಮಾಸದ ಬಣ್ಣವೂ ಕಾರಣ! ಸ್ಥಳೀಯವಾಗಿ ಸಿಕ್ಕುವ ಬಳಪದಕಲ್ಲು ಇಲ್ಲವೇ ಸುಣ್ಣದಕಲ್ಲುಗಳನ್ನು ಹೆಕ್ಕಿ ತಂದು ತಿಳಿನೀರಿನಿಂದ ಸ್ವಚ್ಛಗೊಳಿಸಿ, ಒಣಗಿಸಿ, ಪು(ಹು)ಡಿ ಮಾಡುತ್ತಾರೆ. ಅದನ್ನು ಒಂದು ಬಟ್ಟೆಯಿಂದ ಗಡಿಗಿಯಲ್ಲಿ ಸೋಸಿಕೊಳ್ಳುತ್ತಾರೆ. ಅದಕ್ಕೆ ಜಾಲಿ ಇಲ್ಲವೇ ಬೇವಿನ ದ್ರವರೂಪದ ಅಂಟನ್ನು ಬೆರೆಸುತ್ತಾರೆ. ನಂತರ ಹದಕ್ಕೆ ತಕ್ಕಂತೆ ನೀರನ್ನು ಬೆರೆಸಿ ತಾವೇ ತಯಾರಿಸಿದ ಕುಂಚದಿಂದ ಗೊಂಬೆಗಳಿಗೆ ಲೇಪಿಸುತ್ತಾರೆ. ಇದು ಬಿಳಿ ಬಣ್ಣದ ಪ್ರಥಮ ಕೋಟಿಂಗ್. ನಂತರ ದೀಪದ ಕಾಡಿಗೆ ಹಾಗೂ ಇದ್ದಿಲುಗಳಿಂದ ಕಪ್ಪು ಬಣ್ಣವನ್ನೂ, ಬಳಪದಕಲ್ಲು ಇಲ್ಲವೇ ಸುಣ್ಣದಕಲ್ಲಿನಿಂದ ಬಿಳಿ ಬಣ್ಣವನ್ನೂ, ಹಳದಿಕಲ್ಲು ಮತ್ತು ಕೆಂಪುಕಲ್ಲುಗಳ ಪುಡಿಯಿಂದ ತಯಾರಿಸಿದ ಬಣ್ಣದ ಲೇಪನ ಮಾಡಿದ ನಂತರ ಅಂಚಿನ ನೀರನ್ನು ಲೇಪಿಸಿ, ಕಲಾಕೃತಿಯನ್ನು ಕೈಯಿಂದ ತಿಕ್ಕಿ ತಿಕ್ಕ ಹೊಳಪುಗೊಳಿಸುತ್ತಾರೆ. ಅನಂತರ ಆಕಾರಕ್ಕೆ ತಕ್ಕಂತೆ ಸುಂದರವಾದ ಹಲವು ಬಣ್ಣಗಳಿಂದ ಅಂದಗೊಳಿಸುತ್ತಾರೆ. ಚಿತ್ರಗಾರರು ಈಗೀಗ ಈ ಬಣ್ಣಗಳ ತಯಾರಿಯ

ಗೋಜಿಗೆ ಹೋಗದೇ ಮಾರುಕಟ್ಟೆಯಲ್ಲಿ ಲಭ್ಯವಾಗುವ ಬಣ್ಣಗಳನ್ನೇ ಉಪಯೋಗಿಸುತ್ತಿದ್ದಾರೆ.

**ಕಿನ್ನಾಳದ ಬಣ್ಣಗಳ ರಾಣಿ–ಲಜಾವರ ಬಣ್ಣ :**

ಮಾರುಕಟ್ಟೆಯಲ್ಲಿ ಸಿಕ್ಕುವ ತವರದ ಲೋಹವನ್ನು ವಜ್ರಸರೀಸ(ಮೀನಸರೀಸ)ದಲ್ಲಿ ಮಿಶ್ರಣ ಮಾಡಿ, ದೊಡ್ಡ ಗನ್ನು(ಸುತ್ತಿಗೆ)ಗಳಿಂದ ಕುಟ್ಟುತ್ತಾರೆ. ಈ ಕುಟ್ಟುವಿಕೆಯಿಂದ ರೂಪುಗೊಳ್ಳುವ ಧಾತುಮಿಶ್ರಣದ ಮುದ್ದೆಗೆ ಇನ್ನಷ್ಟು ವಜ್ರಸರೀಸ(ಮೀನಸರೀಸ)ನ್ನು ನೀರಿನೊಂದಿಗೆ ಮಿಶ್ರಣ ಮಾಡಿದಾಗ ಮೊದಲು ಬೆಳ್ಳಿಯ ಬಣ್ಣವೂ ನಂತರ ಮಿಶ್ರಣವನ್ನು ವಿಶೇಷ ಹೊಳಿಕಲ್ಲಿನಿಂದ ತಿಕ್ಕುವುದನ್ನು ಮುಂದುವರಿಸಿದರೆ ಸಿಕ್ಕುವುದೇ ನೈಜ ಬಂಗಾರದ ಬಣ್ಣ! ಇದನ್ನೇ 'ಲಜಾವರ' ಎಂದೂ ಕರೆಯುತ್ತಾರೆ. "ಲಜಾವರವನ್ನೇ 'ಕಿನ್ನಾಳದ ಬಣ್ಣಗಳ ರಾಣಿ' ಎಂದು ತಮ್ಮ ಪುಸ್ತಕ 'ಕಿನ್ನಾಳದ ಗೊಂಬೆಗಳು' ಪುಸ್ತಕದಲ್ಲಿ ಗವಿಸಿದ್ಧ ಎನ್. ಬಳ್ಳಾರಿಯವರು ಬಣ್ಣಿಸಿದ್ದಾರಂತೆ!"[೪೦] ಎಲೆ, ಹೂ–ಬಳ್ಳಿಗಳ ರೇಖಾ ಚಿತ್ರಗಳಿಗೆ ಈ ಬಣ್ಣವನ್ನು ಉಪಯೋಗಿಸುತ್ತಾರೆ.

**ಕುಂಚ ತಯಾರಿಸುವ ಚಿತ್ರಕಾರರು :**

ತಮ್ಮ ಕಲೆಯಲ್ಲಿ ಸೂಕ್ಷ್ಮ ಬಣ್ಣದ ಲೇಪನಕ್ಕೆ ಅತ್ಯಂತ ಹೆಚ್ಚು ಬಳಕೆಯಾಗುವ ಕುಂಚವನ್ನು ಇದೇ ಚಿತ್ರಕಾರರು ತಯಾರಿಸಿಕೊಳ್ಳುವುದೂ ಸೋಜಿಗದ ವಿಷಯ! ಮಾರುಕಟ್ಟೆಯಲ್ಲಿ ಸಾಕಷ್ಟು ಕುಂಚಗಳು ಲಭ್ಯವಾಗುತ್ತಿದ್ದರೂ ಇವರಿಗೆ ಮಾತ್ರ ಅತೀ ಸೂಕ್ಷ್ಮವಾದ ಕುಂಚಗಳಿಗೆ ಬರವಂತೆ! ಅಂತೆಯೇ ಅಳಿಲುಗಳ ಬಾಲದ ರೋಮಗಳಿಂದ ಅತೀ ಸೂಕ್ಷ್ಮವಾದ ಕುಂಚಗಳನ್ನು ತಾವೇ ತಯಾರಿಸಿಕೊಳ್ಳುತ್ತಾರೆ. ತುಂಬಾ ಸೂಕ್ಷ್ಮವಾದ ರೇಖೆಗಳನ್ನು ಎಳೆಯಲು ಈ ಕುಂಚ ತುಂಬಾ ಸಹಕಾರಿಯಂತೆ.

**ಕಿನ್ನಾಳ ಕಲೆಯೂ 'ಫ್ರೆಸ್ಕೋ ಮಾಧ್ಯಮ ಕಲೆ' :**

ಕಿನ್ನಾಳ ಕಲೆಯನ್ನು 'ಫ್ರೆಸ್ಕೋ ಮಾಧ್ಯಮ ಕಲೆ' ಎಂದೂ ಕರೆಯುತ್ತಾರೆ. ಈಗಾಗಲೇ ತಿಳಿದಿರುವಂತೆ ಕಿನ್ನಾಳ ಕಲೆಯ ಮೂಲ ವಿಜಯನಗರದ ಅರಸರ ಕಾಲದಷ್ಟು ಪ್ರಾಚೀನ ಹಾಗೂ ಪ್ರಸಿದ್ಧವಾಗಿದೆ. ಮೊದಲು ರೇಖಾಚಿತ್ರಗಳನ್ನು ಬಿಡಿಸಿ, ಅವುಗಳಿಗೆ 'ಹೊಳಪದ ಕಲ್ಲು' ಬಳಸಿಕೊಂಡು ತಿಕ್ಕಿ ತಿಕ್ಕಿ ಹೊಳಪುಗೊಳಿಸುವುದು. ನಂತರ

ನಿಸರ್ಗದತ್ತವಾದ ವಸ್ತುಗಳನ್ನೇ ಬಣ್ಣವಾಗಿ ಬಳಸಿಕೊಂಡು ಲೇಪಿಸುವ ಮೂಲಕ ಉಬ್ಬುಚಿತ್ರಗಳನ್ನಾಗಿಸುವ ಕಲೆಯ ಪ್ರಕಾರವನ್ನು ಫ್ರೆಸ್ಕೊ ಮಾಧ್ಯಮ ಕಲೆ ಎನ್ನುವರು.

**ಪ್ರಶಸ್ತಿ ವಿಜೇತ ಕಿನ್ನಾಳ ಕಲಾವಿದರು :**

ಕಿನ್ನಾಳ ಕಲೆಯ ಕಲಾಕಾರರಿಗೆ 'ಕರ್ನಾಟಕದ ಶಿಲ್ಪಾಚಾರ್ಯ' ಪ್ರಶಸ್ತಿಗಳೂ ಅರಸಿಬಂದಿವೆ! ಕೃಷ್ಣಪ್ಪ ಚಿತ್ರಗಾರ ೧೯೬೯ರಲ್ಲಿ ಪ್ರಪ್ರಥಮ ವಿಜೇತರು, ನಂತರ ೧೯೭೮ರಲ್ಲಿ ರಾಮಚಂದ್ರಪ್ಪ ಪರಶುರಾಮಪ್ಪ ಚಿತ್ರಗಾರ, ೧೯೮೪ರಲ್ಲಿ ನಾರಾಯಣಪ್ಪ ಶೀನಪ್ಪ ಚಿತ್ರಗಾರ, ೧೯೮೫ರಲ್ಲಿ ವೆಂಕೋಬಪ್ಪ ಕೃಷ್ಣಪ್ಪ ಚಿತ್ರಗಾರ, ೧೯೯೨ರಲ್ಲಿ ಸೋಮಣ್ಣ ವೆಂಕೋಬಪ್ಪ ಚಿತ್ರಗಾರ, ೧೯೯೩ರಲ್ಲಿ ಕಾಂತಪ್ಪ ಶೀನಪ್ಪ ಚಿತ್ರಗಾರ, ೧೯೯೪ರಲ್ಲಿ ರಾಮಣ್ಣ ಚಿತ್ರಗಾರ. ೨೦೦೭-೦೮ರಲ್ಲಿ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮದಿಂದ 'ಕಿನ್ನಾಳ ಕಲೆ-ಎತ್ತಿನ ಗಾಡಿ'ಗೆ ರಾಜ್ಯ ಪ್ರಶಸ್ತಿಯನ್ನು ಪಡೆದವರು ಕಿಶೋರ್.ಎನ್. ಚಿತ್ರಗಾರ. ಇವರಲ್ಲದೇ ಇನ್ನೂ ಅನೇಕ ಸಂಘ-ಸಂಸ್ಥೆಗಳ ಪ್ರಶಸ್ತಿಗಳನ್ನು ಪಡೆದ ಕಿನ್ನಾಳ ಕಲಾವಿದರೂ ಇದ್ದಾರೆ.

**ಕಿನ್ನಾಳ ಕಲೆಯ ವೈಶಿಷ್ಟತೆ :**

೧. ಶೃಂಗಾರ, ವಿರಹ, ಸಂಗೀತ, ನಯನಾಜೂಕು, ಸಸ್ಯ, ಪ್ರಾಣಿ ಸಂಪತ್ತುಗಳಿಂದ ಕೂಡಿ ಚಿಕಣಿಕಲೆಯಾಗಿದೆ. ಅಕ್ಬರ ಮತ್ತು ಅಮೀರ್ ಖುಸ್ರು ಇವರ ಕೊಡುಗೆಯಾಗಿರುವ ಈ ಚಿಕಣಿ ಕಲೆಯು ಮೊಘಲ್-ಆದಿಲ್‌ಶಾಹಿಗಳ ಸಂಬಂಧದಿಂದಾಗಿ ಕರ್ನಾಟಕಕ್ಕೆ ಕಾಲೂರಿತು.

೨. ದೇವಾನು ದೇವತೆಗಳಿಗೂ ಮನುಜ ಸಹಜ ಅಂಗಸೌಷ್ಠವ ಚಿತ್ರಿಸುವುದು.

೩. ನೀಳವಾದ ಅರ್ಧ ತ್ರಿಕೋನಾಕಾರದ ಮೂಗು, ಚಿಕ್ಕ ಗಲ್ಲ, ವಿಶಾಲವಾದ ಎದೆ, ಬಾದಾಮಿಯಾಕಾರದ ಕಣ್ಣು, ಸುಸ್ಪಷ್ಟ ಅಂಗಸೌಷ್ಠವ, ಆಭರಣಗಳನ್ನು ಹಾಕಿದ ಲಕ್ಷಣಗಳಿರುವ ಬಾಶೋಲಿ ಶೈಲಿ.

೪. ಸಮತಲ ರೇಖಾತ್ಮಕ ಆಕೃತಿಗಳು.

೫. ಜಾನಪದ ಶೈಲಿಯನ್ನು ಬಿಂಬಿಸುವುದು.

"ಸುಪ್ರಸಿದ್ಧ ಕಲಾವಿಮರ್ಶಕರಾದ ಈ. ವಿ. ಹ್ಯಾವೆಲ್‌ರು 'ಯಾವ ಪ್ರತಿಷ್ಠಿತ ಕಲಾ ಸಂಸ್ಥೆಯ ಪದವೀಧರರಿಗೂ ಕಡಿಮೆಯಿಲ್ಲದ ಕಲಾ ಪ್ರಾವಿಣ್ಯತೆಯನ್ನು ಕಿನ್ನಾಳ ಕಲಾವಿದರು ಹೊಂದಿದ್ದಾರೆ' ಎಂದು ಮುಕ್ತ ಕಂಠದಿಂದ ಪ್ರಶಂಸಿದ್ದಾರೆ."[೪೧]

ಸರ್ಕಾರವೂ ಹಲವು ರೀತಿಯಲ್ಲಿ ಕರಕುಶಲ ಕ್ಷೇತ್ರಕ್ಕೆ ಸ್ಪಂದಿಸುತ್ತಿದೆ; ಉತ್ತೇಜನ ನೀಡುತ್ತಿದೆ. ಕಲಾಕಾರರಿಗೆ ಸರ್ಕಾರ ಕಲಾಕಾಲೋನಿಯನ್ನೂ (ಮನೆಗಳನ್ನೂ) ಕಟ್ಟಿಸಿಕೊಟ್ಟಿದೆ. ಸಾಲಸೌಲಭ್ಯ ನೀಡಿದೆ.

ಕೌಶಲ ವೃದ್ಧಿಗೆ ತರಬೇತಿ ನೀಡಲಾಗುತ್ತಿದೆ. ಅದಕ್ಕೂ ಬೆರಳೆಣಿಕೆಯಷ್ಟು ಕಲಾಸಕ್ತರು ಮಾತ್ರ ತರಬೇತಿಗೆ ಹೋಗುತ್ತಾರೆ. ದೇಶ-ವಿದೇಶದ ವಿವಿಧೆಡೆ ನಡೆಯುವ ಕರಕುಶಲ ಪ್ರದರ್ಶನವನ್ನು ಸರ್ಕಾರವೇ ಪ್ರಾಯೋಜಕತ್ವ ವಹಿಸಿದರೂ ಅದರಲ್ಲಿ ಪಾಲ್ಗೊಳ್ಳಲು ಕ್ಷಣಕಾಲ ಯೋಚಿಸುತ್ತಾರೆ, ನಿರಾಸಕ್ತಿ ತೋರಿಸುತ್ತಿರುವುದು ಆತಂಕಕ್ಕೆಡೆಮಾಡಿಕೊಟ್ಟಿದೆ.

ಇಷ್ಟೆಲ್ಲಾ ಆತಂಕಗಳ ನಡುವೆಯೂ ಅನೇಕ ಸಕಾರಾತ್ಮಕ ಅಂಶಗಳಿವೆ. ಎಲ್ಲರನ್ನೂ ಆಕರ್ಷಿಸುವ ಕರಕುಶಲ ಕಲಾಕೃತಿಗಳು ಕಲಾವಿದ ನೈಪುಣ್ಯತೆಯನ್ನು ಅನಾವರಣಗೊಳಿಸುತ್ತವೆ. ಮನೆ, ಹೋಟೆಲ್, ವಸತಿಗೃಹಗಳು, ಕಚೇರಿ ಸೇರಿದಂತೆ ಎಲ್ಲೆಡೆ ಅಲಂಕರಿಸುವ ವೈವಿಧ್ಯಮಯ ಈ ಕಲಾಕೃತಿಗಳು ಮನಮೋಹಕ. ಇವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ನೆಲೆಗಳನ್ನು ಸುಧಾರಿಸುವುದರ ಜೊತೆ ಜೊತೆಗೆ ಇವರ ಜನ್ಮಜಾತ ವಿಶಿಷ್ಟ ಸಾಂಸ್ಕೃತಿಕ ಶಕ್ತಿ(ಕಸಬು)ಗಳನ್ನು ಗುರುತಿಸುವ, ಅವುಗಳಿಗೆ ವಿಶಿಷ್ಟ ಹಾಗೂ ನಿರ್ದಿಷ್ಟ ಪ್ರೋತ್ಸಾಹವನ್ನು ಕೊಡುವ ಮೂಲಕ ಅವುಗಳನ್ನು ಮಾರುಕಟ್ಟೆಗೆ ಪರಿಚಯಿಸಿ, ಅವುಗಳ ಮೌಲ್ಯ ಹಾಗೂ ಆಕರ್ಷಣೆಯನ್ನು ವಿಕಾಸಗೊಳಿಸುವ ಪ್ರಯತ್ನಗಳ ನಿರೀಕ್ಷೆಯಲ್ಲಿದ್ದಾರೆ!

*

### ೩.೫.೮ ಹನಮಸಾಗರ ಕೌದಿ ಹೊಲಿಗಾರಿಕೆ

**ಕೌದಿ ಹೊಲಿಯುವವರ ಹಿನ್ನೆಲೆ ಮತ್ತು ಮೂಲ :**

ಭಾರತದಲ್ಲಿ ಜಾತಿಗೂ ವೃತ್ತಿಗೂ ನಿಕಟ ಸಂಬಂಧವಿದೆ. ವೃತ್ತಿಯೇ ಜಾತಿಯ ಉಗಮಕ್ಕೆ ಕಾರಣವೂ ಆಗಿದೆ. ಅಂತಹ ಜಾತಿಗಳಲ್ಲಿ 'ಮೋಚಿ' ಜನಾಂಗವೂ ಒಂದು. ಇವರ ಕುಲ ಕಸಬು ಅಥವಾ ಪಾರಂಪರಿಕ ಕಸಬು ಚರ್ಮಗಾರಿಕೆಯಾದರೂ, ಹೆಂಗಸರು

ಕೌದಿ ಹೊಲಿಯುವ ಕಸಬನ್ನೂ ಮಾಡುತ್ತಿದ್ದಾರೆ. ಕೌದಿ ಎನ್ನುವ ನೆನಪಿನ ಹೊದಿಕೆಯ ನೆನಪು ಮಾಸುವಂತೆ ಮಾಡಿದ್ದು ಆಧುನಿಕತೆಯ ಸೋಗು! ಜನಪದರ ಜೀವನದಲ್ಲಿ ಹಾಸಿಗೆಯಾಗಿಯೂ ಹಾಸುಹೊಕ್ಕಾಗಿದ್ದ ಕೌದಿಯ ನೆನಪು ನೇಪಥ್ಯಕ್ಕೆ ಸರಿಯುತ್ತಿದೆ. ಕೌದಿ ಹೊಲಿಗೆ ಎಂಬ ಕೌತುಕದ ಕಲರ್‌ಫುಲ್ ಕಸಬು Someಕಷ್ಟಕ್ಕೆ ಸಿಲುಕಿದೆ. ಕೌದಿ ಹೊಲಿಯುವವರ ಬದುಕು ಮೂರಾಬಟ್ಟೆಯಾಗಿದೆ; ಮನಸ್ಸು ಕುದಿಯುವ ಕುಲುಮೆಯಂತಾಗಿದೆ. ಕುಟುಂಬದವರ ಹಳೆಯ ಬಟ್ಟೆಗಳೊಂದಿಗಿನ ಅಪ್ಯಾಯಮಾನದ ಬದುಕು ಗಟ್ಟಿಗೊಳ್ಳಬೇಕಿದೆ; ಕಟ್ಟಿಕೊಳ್ಳಬೇಕಿದೆ. ಎಲ್ಲ ಕಾಲಕ್ಕೂ ರಕ್ಷಾಕವಚದಂತಿರುವ ಜನಪದರ ಕೌದಿ ಪುನಃ ಜನಪ್ರಿಯಗೊಳ್ಳಬೇಕಿದೆ.

**ಹನಮಸಾಗರ ಹಾಗೂ ಕೌದಿ ಹೊಲಿಯುವವರ ಹಿನ್ನೆಲೆ :**

ಚಿಕ್ಕ ಚಿಕ್ಕ ಹೋರಿ ಚಿಲಾರಿ ಹೋರಿ
ಸಂಜೀಕ ಬರತೈತಿ ಕಿಲಾರಿ ಹೋರಿ ।

ಕೃಷ್ಣಾ ನದೀ ತೀರದ ಈ ಒಗಟಿಗೂ ಹನಮಸಾಗರಕ್ಕೂ ತುಂಬಾ ನಂಟಿದೆ! ಅಂದರೆ ಒಗಟಿನ ಉತ್ತರ – ಕೌದಿಗೂ, ಆ ಕೌದಿ ತಯಾರಿಸುವ ಗ್ರಾಮ ಹನಮಸಾಗರಕ್ಕೂ ಅವಿನಾಭಾವ ಸಂಬಂಧವಿದೆ! "ಯಕ್ಕ ಹ್ಯಾಂಗ್ ಹೊಲ್ದಿವ್ರಿ ಕೌದಿ ಅಂದ್ರ... ಹೊತ್ಕೊಂಡು ನೋಡು ತಮ್ಮಾ ಅಂದ್ಲಂತ!!" ಎಂಬ ಮಾತಿನ ಸೊಗಡು ಸೊಗಸಾಗಿ ಕೇಳವುದು ಈ ಹನಮಸಾಗರದಲ್ಲಿಯೇ. ಕುಷ್ಟಗಿ ಪರಿಸರದಲ್ಲಿ ಕೌದಿ ತಯಾರಿಕೆಗೆ ಪ್ರಸಿದ್ಧಿ ಪಡೆದಿರುವ ಹನಮಸಾಗರ ಎಂಬ ಗ್ರಾಮವು ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನಲ್ಲಿದೆ. ಕುಷ್ಟಗಿಯಿಂದ ೨೧ ಕಿ.ಮೀ. ಪಯಣಿಸಿದರೆ ಸಿಕ್ಕುವ ನೇಕಾರರ ಹಾಗೂ ಕೌದಿ ಹೊಲಿಯುವವರ ಊರು. ೨೦೧೧ರ ಜನಗಣತಿಯ ಪ್ರಕಾರ ೨೭೯೧ ಮನೆಗಳು, ೧೪೮೭೪ ಜನಸಂಖ್ಯೆಯನ್ನು ಹೊಂದಿರುವ ಈ ಗ್ರಾಮದಲ್ಲಿ ೭೫೪೨ ಪುರುಷರು ಹಾಗೂ ೭೩೩೨ ಸ್ತ್ರೀಯರಿದ್ದಾರೆ.

**ಹನಮಸಾಗರದ ಕೌದಿ ಹೊಲಿಯುವವರ ಹಿನ್ನೆಲೆ :**

ಹನಮಸಾಗರದಲ್ಲಿ ಕೌದಿ ಹೊಲಿಯುವವರು **ಮೋಚಿ** ಜನಾಂಗದವರು. ಐತಿಹಾಸಿಕವಾಗಿ ಈ ಸಮುದಾಯವು ಸೈನಿಕರಿಗೆ ರಕ್ಷಣಾತ್ಮಕ ಚರ್ಮದ ಉಡುಪು ತಯಾರಿಸುತ್ತಿದ್ದರು. ನಂತರ ಪಾದರಕ್ಷೆಗಳ ತಯಾರಿಕೆಯನ್ನೇ ಪುರುಷರು ತಮ್ಮ ಪಾರಂಪರಿಕ ಕಸಬನ್ನಾಗಿಸಿಕೊಂಡರು.

ಸುಮಾರು ನಾಲ್ಕೈದು ತಲೆಮಾರುಗಳ ಹಿಂದಿನ ಮಾತು. ಹನಮಸಾಗರದಲ್ಲಿ ಆಗ ಇದ್ದ ಹತ್ತಾರು ಮೋಚಿ ಜನಾಂಗದ ಕುಟುಂಬಗಳು ಬೆಳೆದು ದೊಡ್ಡದಾಗ ತೊಡಗಿದವು. ಮೋಚಿ ಜನಾಂಗದ ಕುಲಕಸಬು ಚಮ್ಮಾರಿಕೆಗೆ ಕ್ರಮೇಣ ಇಂಬು ಸಿಕ್ಕದಾಯಿತು. ಮಹಿಳೆಯರು ಏನಾದರೂ ಸ್ವಂತ ಕೈಕೆಲಸ ಆರಂಭಿಸಬೇಕೆಂದು ಆಲೋಚಿಸುತ್ತಿರವಾಗ.... ಬಂಡವಾಳವೂ ಇಲ್ಲದ ಬೇಡಿಕೆಯೂ ಹೆಚ್ಚಾಗಿದ್ದ ಕಸಬು ಕೌದಿ ತಯಾರಿಕೆಯ ಬಗ್ಗೆ ಥಟ್ಟನೆ ಹೊಳೆಯಿತು! ಆಗ ಶುರುವಾದ ಕೌದಿ ತಯಾರಿಕೆ ಇಂದಿಗೂ ಪಾರಂಪರಿಕ ಕಸಬಾಗಿ ಮುಂದುವರಿದಿದೆ! ಈ ಕೌದಿ ಹೊಲಿಯುವವರಿಗೆ ಶಾರೀರಿಕ ಶ್ರಮವೇ ಸಂಪತ್ತು. ಶ್ರಮ ಸಂಸ್ಕೃತಿಯೇ ಇವರ ಬಂಡವಾಳ ಹಾಗೂ ಜೀವಾಳ.

ಹೀಗೇ ಮುಂದುವರಿದುಕೊಂಡು ಬಂದ ಹನಮಸಾಗರದ ಕೌದಿ ಇಂದು ತನ್ನ ಉತ್ತಮ ಗುಣಮಟ್ಟದಿಂದಾಗಿ ಸುತ್ತ-ಮುತ್ತಲ ಜಿಲ್ಲೆಗಳ ಹತ್ತು ಹರದಾರಿಗೂ ಇದರ ವಹಿವಾಟು ವ್ಯಾಪಿಸಿದೆ. ಕುಷ್ಟಗಿ, ಕೊಪ್ಪಳ, ಗಂಗಾವತಿ, ಮುದ್ದೇಬಿಹಾಳ, ಹುನಗುಂದ, ಬಾದಾಮಿ, ಯಲಬುರ್ಗಾಗಳಂತಹ ಪೇಟೆಗಳಲ್ಲೂ ಹಾಗೂ ಅವುಗಳ ಸುತ್ತ-ಮುತ್ತಲ ಹಳ್ಳಿಗಳಲ್ಲೂ ಪ್ರವೇಶ ಪಡೆದಿದೆ. ಹಳ್ಳಿಗಳಲ್ಲಂತೂ ಕೆಲವೊಂದು ವಿಶೇಷ ಸಂದರ್ಭಗಳಲ್ಲಿ ರಗ್ಗು, ಚಾದ್ದರ, ಕಂಬಳಿಗಳಿಗೂ ಸೆಡ್ಡು ಹೊಡೆದು ನಿಂತು ಜನಮನ ಸೂರೆಗೊಂಡಿದೆ. ನಿಜವಾದ ಜನಪದ ಕೌದಿ ಎಂದರೆ ಅದು ಹನಮಸಾಗರದ ಕೌದಿ ಮಾತ್ರ ಎಂಬ ಹಂತಕ್ಕೆ ತಲುಪಿದೆ!

**ಕೌದಿ ತಯಾರಿಕೆಯ ಸಾಧನ-ಸಲಕರಣೆಗಳು :**

ಕೌದಿ ತಯಾರಿಕೆಯಲ್ಲಿ ಕಚ್ಚಾವಸ್ತುಗಳು ಹಾಗೂ ಪರಿಕರಗಳೇನೂ ಅಷ್ಟಾಗಿ ಬಳಕೆಯಾಗುವುದಿಲ್ಲ. ಕೇವಲ ಬೆರಳೆಣಿಕೆಯಷ್ಟು ಕಚ್ಚಾವಸ್ತುಗಳು ಹಾಗೂ ಪರಿಕರಗಳು ಮಾತ್ರ ಸಾಕು! ಹಳೆಯ ಬಟ್ಟೆ, ದಾರ, ಕತ್ತರಿ, ಸೂಜಿ ಇತ್ಯಾದಿ.

**ಕೌದಿ ಪದದ ಅರ್ಥ :**

ಭಾರತೀಯ ಜನಪದ ಸಂಸ್ಕೃತಿಯಲ್ಲಿ ಕೌದಿಕಲೆಯೂ ಒಂದು. ಕೌದಿ ಪದಕ್ಕೆ ಕೌಂದಿ, ಕವುಂದಿ, ಕವದಿ, ಕವುದಿ, ಕವಿದಿ, ಕಂತೆ, ಹಳೆಯ ಅರಿವೆಯ ಹೊಸ ಹೊದಿಕೆ, ತುಂಡು ಬಟ್ಟೆಗಳನ್ನು ಕೂಡಿಸಿ ಹೊಲಿದ ಹಚ್ಚಡವೆಂಬ ಅರ್ಥಗಳಿವೆ. ಆಂಗ್ಲಭಾಷೆಯಲ್ಲಿ (Blanket) ಎಂದೂ, ಮರಾಠಿಯಲ್ಲಿ ಕಂಥಾ ಎಂದೂ, ತಮಿಳಿನಲ್ಲಿ ಕವನ್ನಿ, ಕವನ್ನಿನ್ನೈ

ಎಂದೂ, ಮಲಯಾಳಂನಲ್ಲಿ ಕವಿಯನ್ ಎಂದು ಕರೆಯಲ್ಪಡುವ ಕೌದಿ ಪ್ರಾಚೀನ ಕಾಲದಿಂದಲೂ ಜನಪದ ಬದುಕಿನಲ್ಲಿ ಹಾಸುಹೊಕ್ಕಾಗಿತ್ತು.

**ಕೌದಿಯ ಉಪಯೋಗಗಳು :**

➢ ಕೌದಿಯು ಸಾಮಾನ್ಯವಾಗಿ ಎಲ್ಲ ಋತುಮಾನಗಳಲ್ಲಿಯೂ ಹೊದಿಕೆ ಹಾಗೂ ಹಾಸಿಗೆಯಾಗಿ ಬಳಕೆಯಾಗುತ್ತದೆ. ಅಂದರೆ ಕೌದಿಯು ಬೇಸಿಗೆಯಲ್ಲಿ ತಂಪು, ಚಳಿಗಾಲದಲ್ಲಿ ಬೆಚ್ಚನೆಯ ಅನುಭವ ನೀಡಿ ಚರ್ಮವನ್ನು ರಕ್ಷಿಸುತ್ತದೆ!

➢ ಹಳೆಯ ಬಟ್ಟೆಯಿಂದ ತಯಾರಾಗುವ ಹೊಸ ಕೌದಿಗಳು ಮೊದಲು ಹೊದಿಕೆಯಾಗಿಯೂ, ಹಳೆಯದಾದಂತೆ ಹಾಸಿಗೆಯಾಗಿಯೂ ಬಳಕೆಯಾಗುವ ಅಗತ್ಯ ವಸ್ತುಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ!

➢ ಹಿಂದಿನ ಕಾಲದಲ್ಲಿ ಕೌದಿಯನ್ನೂ 'ವಧು ದಕ್ಷಿಣೆ'ಯಾಗಿ ಕೊಟ್ಟು ಮದುವೆ ಮಾಡಿಕೊಳ್ಳುವ ಸಂಪ್ರದಾಯವೂ ಇತ್ತು! "ನಿಮ್ಮಜ್ಜ ನನಗ ಇಂದು ಹತ್ತು ಮೊಳದ ಕೌದಿನ ತೆರವು(ವಧು ದಕ್ಷಿಣೆ) ಕೊಟ್ಟು ಲಗ್ನ ಮಾಡ್ಕೆಂಡಿದ್ದ" ಎಂದು ಆಗಾಗ್ಯೆ ಹೇಳುತ್ತಿದ್ದ ನನ್ನ ಅಜ್ಜಿ ದಿ॥ ಮಾಸಮ್ಮ ಗುಳಗುಳಿ ಮಾತು ಅಚ್ಚರಿ ಮೂಡಿಸಿತ್ತು!!

➢ ಹಾಸಿಗೆಯಾದ ಕೌದಿಯೂ ಹರಿದಾಗ ಅದನ್ನು ತುಂಡಾಗಿ ಕತ್ತರಿಸಿದರೆ... ಪುನಃ ಚಿಕ್ಕ ಮಕ್ಕಳ ಹಾಸಿಗೆಯಾಗಿಯೂ, ಕೆಲವೊಮ್ಮೆ ತೊಟ್ಟಿಲದ ತಳದಲ್ಲಿ ಹಾಸುವ ಮೆತ್ತನೆಯ ಹಾಸಿಗೆಯಾಗಿಯೂ ರೂಪಾಂತರ ಹೊಂದುವ ವೈಶಿಷ್ಠತೆ ಮೆರೆಯುತ್ತದೆ!

➢ ರೈತರ ಧಾನ್ಯದ ಸಂಗ್ರಹಣಾ ತಾಣವಾದ ಕಣಜ ಅಥವಾ ಹಗೇವುಗಳ ತಳದಲ್ಲಿ ಹಳೆಯ ಕೌದಿ ತುಂಡನ್ನು ಹಾಕುವುದುಂಟು. ಹೀಗೆ ಹಾಕುವುದರಿಂದ ತಳವು ಚಳಿಗಾಲದಲ್ಲಿ ಬೆಚ್ಚಗೆ, ಬೇಸಿಗೆಯಲ್ಲಿ ತಣ್ಣಗಿದ್ದು ಧಾನ್ಯಗಳು ಬಹುಕಾಲ ಕೆಡದಂತೆ ರಕ್ಷಿಸುತ್ತದೆ!

➢ ಸಂಪೂರ್ಣ ಚಿಂದಿಯಾದ ಕೌದಿಯ ತುಂಡುಗಳನ್ನೂ ಜನಪದ ಮಹಿಳೆಯರು ಬಿಸಾಡುವುದಿಲ್ಲ. ಬಿದಿರಿನ ಬುಟ್ಟಿ, ಧಾನ್ಯವನ್ನು ಹಸನು ಮಾಡುವ ಮೊರಗಳಿಗೆ ಕುಸುಬಿಯ ಎಣ್ಣೆ ಮಾಡಲು ಕೌದಿಯ ತುಣುಕುಗಳನ್ನು ಸುಟ್ಟು, ಅದರ ಬೂದಿಯನ್ನು ಬಳಸುತ್ತಾರೆ!

ಹೀಗೆ ಕೌದಿಯು ಜನಪದರ ಜೀವನದಲ್ಲಿ ಬಹುಪಯೋಗಿಯಾಗಿ ಬಳಕೆಯಾಗುತ್ತದೆ.

**ಕೌದಿ ಬಗ್ಗೆ ಇರುವ ನಂಬಿಕೆಗಳು :**

ಭಾರತೀಯ ಸಂಸ್ಕೃತಿಯಲ್ಲಿ ಆಚರಣೆಗಳಿಗೆ ಕೊನೆಯಿಲ್ಲ, ಸಂಪ್ರದಾಯದಲ್ಲಿ ನಂಬಿಕೆಗಳಿಗೆ ಬರವಿಲ್ಲ! ಹಳೆಯ ಕೌದಿಗಳು ಪೂಜೆಗೊಳ್ಳುವ ಸಂಪ್ರದಾಯ, ಹೊಸ ಕೌದಿಯನ್ನು ದೇವರಿಗೆ ಅರ್ಪಿಸುವ ಸಂಪ್ರದಾಯ, ತವರಿನ ಉಡುಗೊರೆಯಾಗಿ ಕೌದಿಯನ್ನು ನೀಡುವ ಸಂಪ್ರದಾಯಗಳೂ ಉಂಟು !

**ಹಳೆಯ ಕೌದಿಗಳು ಪೂಜೆಗೊಳ್ಳುವ ಸಂಪ್ರದಾಯ :**

ಕೆಲವು ಕಡೆಗಳಲ್ಲಿ ಕೌದಿಗಳು ಪೂಜೆಗೊಳ್ಳುವ ಸಂಪ್ರದಾಯಗಳೂ ಉಂಟು ! ಈಗ್ಯೆ ಸುಮಾರು ಎರಡು ಶತಮಾನಗಳ ಹಿಂದಿನ ಘಟನೆ. ದಾರವಾಢ ಜಿಲ್ಲೆ ಹಾನಗಲ್ ತಾಲ್ಲೂಕಿನ ಶೇಷಗಿರಿ ಗ್ರಾಮದಲ್ಲಿದ್ದ ಕಬ್ಬೇರ ಮನೆತನದ ವೃದ್ಧ ದಂಪತಿಗಳು ತಮ್ಮ ಮುಪ್ಪಿನ ಕಾಲದಲ್ಲಿ ತೀರ್ಥಯಾತ್ರೆ ಕೈಗೊಳ್ಳಲು ಆಗದೇ ಇದ್ದಾಗ ತೀರ್ಥಯಾತ್ರೆಗೆ ಹೋಗಿ ಬಂದವರ ಬಾಯಿಂದಲೇ ಪುಣ್ಯಕ್ಷೇತ್ರಗಳಾದ ಮೈಲಾರ, ಗೋಕರ್ಣ, ಶ್ರೀಶೈಲ, ರಾಮೇಶ್ವರ, ವೆಂಕಟಗಿರಿ ಇತ್ಯಾದಿ ಕ್ಷೇತ್ರಗಳ ಮಹತ್ವವನ್ನು ಕೇಳಿ ತಿಳಿದುಕೊಂಡು ಅದನ್ನೇ ಕೌದಿಯಲ್ಲಿ ಹೊಲಿಗೆಯ ಮೂಲಕ ಭಕ್ತಿಭಾವದಿಂದ ಚಿತ್ತಾರಗೊಳಿಸಿದರು! ಜೊತೆಗೆ ರಾಮಾಯಣ ಹಾಗೂ ಮಹಾಭಾರತದ ಕೆಲವು ಸನ್ನಿವೇಶಗಳನ್ನೂ ದಾರದ ಮೂಲಕ ಚಿತ್ರಿಸಿ, ಪವಿತ್ರವಾದ ಹಾಗೂ ಸುಂದರವಾದ ೨ ಕೌದಿಗಳನ್ನು ಹೊಲಿದರು. ಇವರು ಮರಣದ ನಂತರ ತಮ್ಮ ಕುಟುಂಬದವರ ಕನಸಿನಲ್ಲಿ ಬಂದು “ಈ ಕೌದಿಗಳಲ್ಲಿ ದೇವರ ಎಲ್ಲಾ ಕುರುಹುಗಳಿವೆ. ಅವುಗಳನ್ನು ಭಯ-ಭಕ್ತಿ-ಭಾವದಿಂದ ಪೂಜಿಸುತ್ತಾ ಹೋದರೆ ಭವಿಷ್ಯದಲ್ಲಿ ಒಳ್ಳೆಯದಾಗುತ್ತದೆ” ಎಂದು ಹೇಳಿದರಂತೆ!

ಹೀಗಾಗಿ ಕಬ್ಬೇರ ಕುಟುಂಬದವರು ಪ್ರತೀ ವರ್ಷ ಎಳೆ ಅಷ್ಟಮಿ ಮಾಸದ ಸರ್ವ ಪಿತೃ ಅಮವಾಸ್ಯೆಗಳಂದು ಮಾತ್ರ ಆ ಕೌದಿಗಳನ್ನು ಪೆಟ್ಟಿಗೆಯಿಂದ ಹೊರತೆಗೆದು ಪೂಜಿಸುತ್ತಾರೆ. ಅಕ್ಕ-ಪಕ್ಕದ ಊರುಗಳಿಂದಲೂ ಅಂದು ಆಗಮಿಸಿ, ದರ್ಶನ ಭಾಗ್ಯ ಪಡೆಯುತ್ತಾರೆ. ಹೀಗೆ ಒಮ್ಮೆ ದರ್ಶನ ಮಾಡಿದವರು ಸತತ ೩ ವರ್ಷ ಹೋಗಲೇ ಬೇಕು! ಇಲ್ಲದಿದ್ದರೆ ಕೇಡು ಖಂಡಿತಾ!! ಎಂಬ ನಂಬಿಕೆಯಿದೆ.

**ಹೊಸ ಕೌದಿಯನ್ನು ದೇವರಿಗೆ ಅರ್ಪಿಸುವ ಸಂಪ್ರದಾಯ :**

ಹುಬ್ಬಳ್ಳಿಯ ಜಾತ್ಯಾತೀತ ಮಹಿಮಾ ಪುರುಷ ಶ್ರೀ ಸಿದ್ಧಾರೂಢ ಸ್ವಾಮಿಗಳ ಮಠದಲ್ಲಿ ಕೌದಿ ಪೂಜೆ ದಿನ ಉಂಟು! ಪ್ರತೀ ವರ್ಷ ಶಿವರಾತ್ರಿಯ ಹಿಂದಿನ ದಿವಸ ಹೊಸ ಕೌದಿಯನ್ನು ಭಕ್ತಿಯಿಂದ ಸಮರ್ಪಿಸಿ ಪೂಜೆ ಸಲ್ಲಿಸುವ ಸಂಪ್ರದಾಯ ಬಹುವರ್ಷಗಳಿಂದಲೂ ಬಂದಿರುವುದರಿಂದ ಈ ದಿನವನ್ನು ಪವಿತ್ರವಾದ ಕೌದಿ ಪೂಜೆ ದಿನ ಎನ್ನುತ್ತಾರೆ. ಸರಳ ಸಜ್ಜನಿಕೆಯ ಶ್ರೀ ಸಿದ್ಧಾರೂಢ ಸ್ವಾಮಿಗಳು ಬದುಕಿದ್ದಾಗ ಹಾಸಲು, ಹೊದೆಯಲು ಕೌದಿಯನ್ನೇ ಬಳಸುತ್ತಿದ್ದರಂತೆ. ಅಲ್ಲದೇ "ಕೌದಿ ಸರಳ ಜೀವನದ ಪ್ರತೀಕ" ಎಂದು ಭಕ್ತರಿಗೆ ಸದಾ ಹೇಳುತ್ತಿದ್ದರು. ಅಂತೆಯೇ ಅವರು ದೈವಾಧೀನರಾದ ನಂತರ ಭಕ್ತರು ಹೊಸ ಕೌದಿಯನ್ನು ತಂದು ಸಿದ್ಧಾರೂಢರ ಹಾಗೂ ಗುರುನಾಥರೂಢರ ಗದ್ದುಗೆಗೆ ಅರ್ಪಿಸಿ ಅವರ ಕೃಪೆಗೆ ಪಾತ್ರರಾಗುವ ಆಚರಣೆ ಇಂದಿಗೂ ಮುಂದುವರಿದಿದೆ.

**ತವರಿನ ಉಡುಗೊರೆಯಾಗಿ ಕೌದಿ :**

ಹಿಂದಿನ ಕಾಲದಲ್ಲಿ ಮಹಿಳೆಯ ಚೊಚ್ಚಲ ಹೆರಿಗೆಯ ನಂತರ ಗಂಡನ ಮನೆಗೆ ಕಳುಹಿಸುವಾಗ ತವರಿನ ಬಣ್ಣವಾಗಿ ಸೀರೆಯ ಜೊತೆ ಕೌದಿಯನ್ನೂ ಉಡುಗೊರೆಯಾಗಿ ನೀಡುವ ಸಂಪ್ರದಾಯವಿತ್ತು! ಇದರಿಂದ ತವರಿನ ಸಕಲೈಶ್ವರ್ಯವೂ ವೃದ್ಧಿಯಾಗುತ್ತದೆಂಬ ನಂಬಿಕೆಯಿತ್ತು.

ಹೀಗೆ ಹುಡುಕಿದರೆ ಇನ್ನೂ ಅನೇಕ ನಂಬಿಕೆಗಳು ಆಚರಣೆಗಳಾಗಿ, ಸಂಪ್ರದಾಯವಾಗಿ ಜನಪದರ ಬದುಕಿನಲ್ಲಿ ಹಾಸುಹೊಕ್ಕಾಗಿದೆ. ಅದು ಆಧ್ಯಾತ್ಮಿಕ ಲೋಕಕ್ಕೂ ಹೊಕ್ಕು ಪಾವನ ಭಾವನೆ ಮೂಡಿಸುತ್ತಿರುವುದು ಮಹತ್ವವನ್ನು ಬಿಂಬಿಸುತ್ತದೆ.

**ಕೌದಿ ಇತಿಹಾಸ :**

"ಕೌದಿಯ ಪ್ರಾಚೀನ ಉಲ್ಲೇಖ ಕ್ರಿ.ಶ.ಸು. ೨ನೇ ಶತಮಾನದ ಆಯುರ್ವೇದ ಶಾಸ್ತ್ರ ಕೃತಿಯಾದ 'ಚರಕ ಸಂಹಿತಾ'ದಲ್ಲಿ ಕಂಡು ಬರುತ್ತದೆ. ಇಲ್ಲಿ ಕೌದಿಯನ್ನು 'ಕಂಥಾ' ಎಂದು ಕರೆಯಲಾಗಿದೆ." ಪಾಟೀಲ್ ಎಸ್.ಸಿ., ೨೦೦೦, ಕೌದಿಕಲೆ (ಇದರಲ್ಲಿ ; ಕನ್ನಡ ವಿವಿ ವಿಶ್ವಕೋಶ : ೨ ಕರಕುಶಲ ಕಲೆಗಳು. ಸಂಪಾದಕ–ಕರೀಗೌಡ ಬೀಚನಹಳ್ಳಿ), ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ–೧೦೨ 'ಕನ್ನಡ ಕನ್ನಡ ಶಬ್ದಾರ್ಥಕೋಶ':– ೨೦೧೨ರಲ್ಲಿ ಮೆ॥ ಪಿ.ಸಿ.ಶಾಬಾದಿಮಠ, ಗದಗರವರು ಪ್ರಕಟಿಸಿದ ಅರವಿಂದ ಸುಗೂರರವರ ಸಂಪಾದಕತ್ವದಲ್ಲಿ

ಹೊರಬಂದ 'ಕನ್ನಡ ಕನ್ನಡ ಶಬ್ದಾರ್ಥಕೋಶ' ಪುಟ-೧೦೭ ರಲ್ಲಿ ಹೀಗಿದೆ : ಕವುದಿ – ಹಳೆಯ ಬಟ್ಟೆಗಳ ತುಂಡುಗಳಿಂದ ಮಾಡಿದ ಹೊದಿಕೆ ಎಂದೂ, ಕೌದಿ – ಕಂತೆ, ಚೀಲ ಎಂದೂ ಇದೆ. ಆದರೆ ಎಲ್ಲರೂ 'ಕೌದಿ' ಪದವನ್ನೇ ಬಳಸುತ್ತಿರುವುದರಿಂದ ಇಲ್ಲಿಯೂ ಕೌದಿ ಪದವನ್ನು ಬಳಸುತ್ತಿದ್ದೇನೆ.

**ಕೌದಿ ತಯಾರಿಕಾ ವಿಧಾನ :**

ಮನೆಯಲ್ಲಿನ ಕೆಲಸ ಮುಗಿಸಿಕೊಂಡ ಕುಟುಂಬದ ಮಹಿಳೆಯರು ಹಾಗೂ ಮಕ್ಕಳೆಲ್ಲರ ಬಿಡುವಿನ ಸಮಯದ ಸದುಪಯೋಗದ ಉದ್ಯೋಗದಲ್ಲಿ ಕೌದಿ ತಯಾರಿಕೆಯೂ ಒಂದು. ಹೌದು! ಮಹಿಳೆಯರು ಊರೂರು ಸುತ್ತಿ ಹೊತ್ತು ತಂದ ಲ್ಯಾವಿ (ಹಳೆಯ ಬಟ್ಟೆಯ) ಗಂಟನ್ನೂ, ಕೌದಿಗಳ ಬೇಡಿಕೆಯ ನಂಟನ್ನೂ ಬಿಚ್ಚಿ, ಹಳೆಯ ಬಟ್ಟೆಗಳಿಂದ ಹುಟ್ಟಿದ ಕೂಸಿಗೆ ಹಾಸುವ ಕೌದಿಯಿಂದ ಹಿಡಿದು ದೊಡ್ಡ ಕುಟುಂಬದ ಹತ್ತಾರು ಜನರು ಒಟ್ಟಿಗೆ ಮಲಗುವ ಅಥವಾ ಹೊದ್ದುಕೊಳ್ಳುವಷ್ಟು ವಿಶಾಲವಾದ ಕೌದಿಯನ್ನು ಹೊಲಿಯುವುದು ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಹನಮಸಾಗರ ಗ್ರಾಮದ ಮೋಚಿ ಜನಾಂಗದ ಮಹಿಳೆಯರ ನಿತ್ಯದ ಕಾಯಕ. ಕೌದಿ ತಯಾರಿಕೆಯು ಸಾಮಾನ್ಯವಾಗಿ ೨ ಹಂತಗಳಲ್ಲಿ ನಡೆಯುತ್ತದೆ.

**ಪೂರ್ವ ತಯಾರಿ ಹಂತ** :- ಮಹಿಳೆಯರು ಊರೂರು ಸುತ್ತಿ ಹೊತ್ತು ತಂದ ಲ್ಯಾವಿ (ಹಳೆಯ ಬಟ್ಟೆಯ) ಗಂಟನ್ನೂ, ಕೌದಿಗಳ ಬೇಡಿಕೆಯ ನಂಟನ್ನೂ ಮನೆಗೆ ಬಂದ ನಂತರ ಬಿಚ್ಚುತ್ತಾರೆ. ಕುಟುಂಬದ ಮಕ್ಕಳು ಆ ಬಟ್ಟೆಗಳನ್ನು ತೊಳೆದು ಒಣಗಿಸುತ್ತಾರೆ. ಜಾಣೆ ಮಹಿಳೆಯು ಹಳೆಯ ಬಟ್ಟೆಗಳೆಲ್ಲವನ್ನೂ ಹರಡಿಕೊಂಡು ಗಟ್ಟಿಯಾದ ಭಾಗವನ್ನು ಕಲಾತ್ಮಕವಾಗಿ ಕತ್ತರಿಸಿ ತೆಗೆಯುತ್ತಾಳೆ. ಬಣ್ಣ ಹಾಗೂ ಗಾತ್ರವಾರು ವಿಂಗಡಿಸಿ ಜೋಡಿಸುತ್ತಾರೆ. ತಳದಲ್ಲಿ ತೋಯಿಸಿದ ಗಟ್ಟಿಯಾದ ಸೀರೆ, ಧೋತಿಗಳನ್ನು ಅಳತೆಗೆ ತಕ್ಕಂತೆ ಜೋಡಿಸಿಕೊಳ್ಳುತ್ತಾರೆ. ಅದರ ಮೇಲೆ ಕತ್ತರಿಸಿಕೊಂಡ ಬಟ್ಟೆಯ ತುಣುಕುಗಳನ್ನು ಒಪ್ಪ ಓರಣವಾಗಿ ಮೂರ್ನಾಲ್ಕು ಪದರು ದಪ್ಪ ಎಲ್ಲಿಯೂ ಹೆಚ್ಚೂ ಕಡಿಮೆಯಾಗದಂತೆ ಜೋಡಿಸಿಕೊಂಡು, ಮೇಲ್ಭಾಗ ವಿವಿಧ ರೀತಿ ಚಿತ್ರವಿನ್ಯಾಸಗಳು ಕಾಣುವಂತೆ ಹೊಂದಿಸಿ, ಅದರ ಮೇಲೆ ಎಂಟು ಅಥವಾ ಆರು ಇಂಚಿಗೊಂದು ದಾರದ ದೊಡ್ಡ ಹೊಲಿಗೆಯ ಮೂಲಕ ತೇಪೆ ಹಾಕುತ್ತಾರೆ. ಇದನ್ನು 'ಲ್ಯಾವಿ' ಎಂತಲೂ ಕರೆಯುವುದುಂಟು. ಇಲ್ಲಿಗೆ ಕಚ್ಚಾಕೌದಿ ತಯಾರಾದಂತೆ.

**ಕೌದಿಯ ಹೊಟ್ಟೆ ತುಂಬಿಸುವ ಹಂತ :**

ಲ್ಯಾವಿಯನ್ನು ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿದ ನಂತರ ಓಣಿಯಲ್ಲಿರುವ ಮರದ ನೆರಳಿಗೋ ಅಥವಾ ಮನೆ–ಗುಡಿ–ಗುಂಡಾರಗಳ ಚಾಟಿ(ರಕ್ಷಣೆ)ಗೋ ತಂದು ಗುಂಪು ಗುಂಪಾಗಿ ಕುಳಿತು, ಕೌದಿ ಹೊಲಿಯಲು ಪ್ರಾರಂಭಿಸುತ್ತಾರೆ. ಇದಕ್ಕೇ ಇರಬೇಕೇನೋ 'ಬೇಸಿಗೆಕಾಲ ಕೌದಿ ಹೊಲಿಯೋಕೆ ಚೆಂದ, ಚಳಿಗಾಲ ಕೌದಿ ಹೊದಿಯೋಕೆ ಚೆಂದ' ಎಂಬ ಗಾದೆ ಹುಟ್ಟಿಕೊಂಡಿದ್ದು! ಸಾಮಾನ್ಯವಾಗಿ ಸಣ್ಣ–ಪುಟ್ಟ ಕೌದಿಗಳನ್ನು ಒಬ್ಬರೇ ಹೊಲಿಯುತ್ತಾರೆ. ವಿಶಾಲವಾದ ಕೌದಿಗಳನ್ನು ಏಕಕಾಲದಲ್ಲಿ ನಾಲ್ಕು ಜನರು ಒಂದೊಂದು ಮೂಲೆಯನ್ನು ಹಿಡಿದು ಹೊಲಿಯುವುದುಂಟು. ಒಮ್ಮೆ ಕೌದಿಯನ್ನು ಹೊಲಿಯಲು ಕುಳಿತರೆ ಕೌದಿಯ ನಾಲ್ಕೂ ಬದಿಗೂ ಅಂದರೆ ಚೌಕಾಕಾರ ಇಲ್ಲವೇ ಆಯತಾಕಾರವಾಗಿ ಹೊಲಿಗೆ ಸುತ್ತುವರಿದು ಬರಲೇಬೇಕು. ಅದು ಪೂರ್ಣಗೊಳ್ಳುವವೆರಗೂ ಹೊಲಿಯುವುದನ್ನು ಬಿಟ್ಟು ಮೇಲೇಳಬಾರದು. ಹಾಗೊಂದು ನಿಯಮವಿದೆಯಂತೆ! ಒಂದು ವೇಳೆ ಹೊಲಿಯುವ ಸಂದರ್ಭದಲ್ಲಿ ಕೌದಿಯ ಮೇಲೆ ಬೆಕ್ಕು ಅಡ್ಡ ಬಂದರೆ, ಬೆಕ್ಕುಗಳು ಕಡಿದಾಡುತ್ತಾ ಬಂದರೆ ಹಾಕಿದ ಹೊಲಿಗೆಯನ್ನೆಲ್ಲಾ ಬಿಚ್ಚಿ ಪುನಃ ಹೊಲಿಯುತ್ತಾರೆ!!

"ಸಾಮಾನ್ಯವಾಗಿ ಕೌದಿ ಅಂಚುಗಳಿಗೆ ಸೀರೆಯ ಅಂಚು(ದಡಿ)ಗಳನ್ನೇ ಹಚ್ಚುತ್ತಾರೆ. ಅದರಲ್ಲೂ ಒಂದೇ ಬಣ್ಣ ಇಲ್ಲವೇ ಒಂದೇ ಆಕಾರ, ಅಳತೆ ಬರುವಂತೆಯೂ ನೋಡಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಮನಸ್ಸಿ ಬಂದರೆ ವಿವಿಧ ಬಣ್ಣಗಳ ಅರಿವೆಯ ತುಣುಕುಗಳನ್ನು ಚಿತ್ರವಿನ್ಯಾಸಗಳಾಗಿ ಜೋಡಿಸುತ್ತಾ ಸಾಗುತ್ತಾರೆ. ಕೌದಿ ಪೂರ್ಣ ಮುಗಿಯುವ ಪೂರ್ವದಲ್ಲಿ, ಮಧ್ಯದಲ್ಲಿ ಐದುಕಾಳು ಯಾವುದೇ ಧಾನ್ಯ ಇಲ್ಲವೇ ರೊಟ್ಟಿಯ ಸಣ್ಣ ತುಣುಕುಗಳನ್ನು ಇಟ್ಟು ಅದರ ಮೇಲೆ ಮತ್ತೊಂದು ಅರಿವೆ ಹಾಕಿ ಹೊಲಿಯುತ್ತಾರೆ. ಇದಕ್ಕೆ ಕೌದಿಯ ಹೊಟ್ಟೆ ತುಂಬಿಸುವುದು ಎನ್ನುತ್ತಾರೆ."[೬೨] ಇಲ್ಲಿಗೆ ಕೌದಿ ತಯಾರಿಕೆಯು ಸಂಪೂರ್ಣವಾದಂತೆ.

**ಕೌದಿಯ ಪ್ರಕಾರಗಳು :**

ಕೌದಿಗಳಲ್ಲಿ ಅನೇಕ ವಿಧಗಳಿವೆ. ಅವುಗಳನ್ನು ಯಾರು ಬಳಸುತ್ತಾರೆ ಮತ್ತು ವಿನ್ಯಾಸ ಎಲ್ಲಿವೆ, ಎಷ್ಟು ಜನ ಬಳಸುತ್ತಾರೆ, ಯಾವ ರೀತಿ ಬಳಸುತ್ತಾರೆ ಎಂಬ ಆಧಾರದ ಮೇಲೆ ಕೌದಿಗಳ ಪ್ರಕಾರ ನಿರ್ಧಾರವಾಗುತ್ತದೆ.

**ಚಿಕ್ಕವರ(ಮಕ್ಕಳ) ಕೌದಿ ಮತ್ತು ದೊಡ್ಡವರ ಕೌದಿ :-** ಅವುಗಳನ್ನು ಯಾರು ಬಳಸುತ್ತಾರೆ ಎಂಬುದನ್ನು ಆಧಾರವಾಗಿಟ್ಟುಕೊಂಡು ಚಿಕ್ಕವರ(ಮಕ್ಕಳ) ಕೌದಿ ಮತ್ತು ದೊಡ್ಡವರ ಕೌದಿ ಎಂದು ತಯಾರಿಸುತ್ತಾರೆ.

ದೊಡ್ಡವರ ಕೌದಿಗಳು ಸಾಮಾನ್ಯವಾಗಿ ೭ ಮೊಳ ಉದ್ದ, ೫ ಮೊಳ ಅಗಲವಿರುತ್ತವೆ. ಜೊತೆಗೆ ಹೊದಿಕೆ ಕೌದಿಯ ಒಳಮೈಯಲ್ಲಿ ಮಾತ್ರ ಚೆಲುವಿನ ಚಿತ್ತಾರಗಳು ಕಂಡು ಬಂದರೆ, ಹಾಸಿಗೆ ಕೌದಿಯ ಮೇಲ್ಬದಿಯಲ್ಲಿ ಮಾತ್ರ ಚೆಲುವಿನ ಚಿತ್ತಾರಗಳು ಕಂಡು ಬರುತ್ತವೆ. ಒಂದು ವೇಳೆ ಉಲ್ಟಾ ಆಯಿತೋ ಕೆಟ್ಟ ಕನಸುಗಳು ಬೀಳುತ್ತವೆಯಂತೆ! ಹೀಗೊಂದು ನಂಬಿಕೆಯಿದೆ. ಮನೆಯಲ್ಲಿ ಹೆಚ್ಚು ಜನರಿದ್ದರೆ ಇನ್ನೂ ದೊಡ್ಡ ದೊಡ್ಡ ಕೌದಿಗಳನ್ನು ಹೊಲಿಸುತ್ತಾರೆ.

ಚಿಕ್ಕವರ ಕೌದಿಗಳು ಸಾಮಾನ್ಯವಾಗಿ ೩ ಮೊಳ ಉದ್ದ, ೨.೫ ಮೊಳ ಅಗಲವಾಗಿರುತ್ತವೆ. ಜೊತೆಗೆ ಹೊದಿಕೆ ಹಾಗೂ ಹಾಸಿಗೆ ಕೌದಿಗಳೆರಡರ ಎರಡೂ ಬದಿಯಲ್ಲಿ ಚೆಲುವಿನ ಚಿತ್ತಾರಗಳು ಕಂಡು ಬರುತ್ತವೆ.

**ಸಿಂಗಲ್, ಡಬಲ್ ಹಾಗೂ ದೊಡ್ಡ ಕೌದಿ :-** ಅವುಗಳನ್ನು ಎಷ್ಟು ಜನ ಬಳಸುತ್ತಾರೆ ಎಂಬುದನ್ನು ಆಧಾರವಾಗಿಟ್ಟುಕೊಂಡು ಒಬ್ಬರು ಬಳಸಿದರೆ ಸಿಂಗಲ್- ಇದು ಸಾಮಾನ್ಯವಾಗಿ ೫ ಮೊಳ ಉದ್ದ, ೩ ಮೊಳ ಅಗಲವಾಗಿರುತ್ತವೆ. ಇಬ್ಬರು ಬಳಸಿದರೆ ಡಬಲ್- ಇದು ಸಾಮಾನ್ಯವಾಗಿ ೫ ಮೊಳ ಉದ್ದ, ೪ ಮೊಳ ಅಗಲವಾಗಿರುತ್ತವೆ. ಐದಾರು ಜನರು ಬಳಸಿದರೆ ದೊಡ್ಡಕೌದಿ- ಇದು ಸಾಮಾನ್ಯವಾಗಿ ೭ ಮೊಳ ಉದ್ದ, ೫ ಮೊಳ ಅಗಲವಾಗಿರುತ್ತವೆ.

**ಹೊದಿಕೆ ಕೌದಿ ಮತ್ತು ಹಾಸಿಗೆ ಕೌದಿ :-** ಅವುಗಳನ್ನು ಹೇಗೆ ಬಳಸುತ್ತಾರೆ ಎಂಬುದನ್ನು ಆಧಾರವಾಗಿಟ್ಟುಕೊಂಡು ಹೊದಿಕೆ ಹಾಗೂ ಹಾಸಿಗೆ ಕೌದಿ ಎಂದು ತಯಾರಿಸುವುದುಂಟು. ಹೊದ್ದುಕೊಳ್ಳಲು ಬಳಸುವ ಹೊದಿಕೆ ಕೌದಿಯ ಒಳಮೈಯಲ್ಲಿ ಮಾತ್ರ ಚೆಲುವಿನ ಚಿತ್ತಾರಗಳು ಕಂಡು ಬಂದರೆ, ಹಾಸಲು ಮಾತ್ರ ಬಳಸುವ ಹಾಸಿಗೆ ಕೌದಿಯ ಮೇಲ್ಬದಿಯಲ್ಲಿ ಮಾತ್ರ ಚೆಲುವಿನ ಚಿತ್ತಾರಗಳು ಕಂಡು ಬರುತ್ತವೆ. ಸಾಮಾನ್ಯವಾಗಿ ಹೊಸ ಕೌದಿಗಳು ಮೊದಲು ಹೊದಿಕೆಯಾಗಿಯೂ, ಹಳೆಯದಾದಂತೆ ಹಾಸಿಗೆಯಾಗಿಯೂ ಬಳಕೆಯಾಗುತ್ತವೆ ಎಂಬುದಿಲ್ಲಿ ಗಮನಾರ್ಹ ಸಂಗತಿ.

**ಹೊದಿಕೆ ಕೌದಿ ಮತ್ತು ಹಾಸಿಗೆ ಕೌದಿ :-** ಅವುಗಳನ್ನು ವಿನ್ಯಾಸ ಎಲ್ಲಿವೆ ಎಂಬುದನ್ನು ಆಧಾರವಾಗಿಟ್ಟುಕೊಂಡು ಹೊದಿಕೆ ಹಾಗೂ ಹಾಸಿಗೆ ಕೌದಿ ಎಂದು ತಯಾರಿಸುವುದುಂಟು.

**ಮಜೂರಿ :-** ಒಂದು ಚದರ ಮೊಳ ಕೌದಿ ಹೊಲಿಯಲು ಇಂತಿಷ್ಟು ಮಜೂರಿ(ಕೂಲಿ) ಎಂದಿರುತ್ತದೆ. ಕುಷ್ಟಗಿ ಪರಿಸರದಲ್ಲಿನ ಹನಮಸಾಗರ, ಕುಷ್ಟಗಿ, ಗಜೇಂದ್ರಗಡ, ಕೋಡಿಹಾಳಗಳಲ್ಲಿ ಕೌದಿಯನ್ನು ಹೊಲಿಯುವವರು ಅಧಿಕ ಜನರಿದ್ದಾರೆ. ಇವರು ಕೌದಿ ಹೊಲಿಯಲು ಒಂದು ಚ.ಮೊಳಕ್ಕೆ ೫೦ ರಿಂದ ೬೦ ರೂಪಾಯಿಗಳನ್ನು ನಿಗಧಿ ಮಾಡಿದ್ದಾರೆ. ಗ್ರಾಮದಲ್ಲಿರುವ ಮೋಚಿ ಜನಾಂಗದವರೆಲ್ಲಾ ಸೇರಿ ಊರುಗಳನ್ನು ಹಂಚಿಕೊಂಡಿರುತ್ತಾರೆ. ಒಬ್ಬರಿಗೆ ಹಂಚಿಕೆಯಾದ ಊರಿಗೆ ಮತ್ತೊಬ್ಬರು ಹೋಗಿ ಕೌದಿಯ ಬೇಡಿಕೆಯನ್ನು ತರುವಂತಿಲ್ಲ!

"ನಮಗೆ ಹಂಚಿಕೆಯಾದ ಊರು ನಮಗ ತವರು ಮನಿ ಇದ್ಹಾಂಗ್ರಿ, ನಮಗೆಲ್ಲ ಎರಡು, ಮೂರು ಊರು ಬಂದಾವ್ರಿ. ಒಂದೊಂದು ಊರು ದೂರ ಇದ್ರ ಅಲ್ಲಿ ಐದ್ಹತ್ತು ರೂಪಾಯಿ ಹೆಚ್ಚು ತೊಗೊಂತೀವ್ರಿ. ಲಗೇಜು, ಬಸ್ ಚಾರ್ಜs ಭಾಳಾ ಐತ್ರಿ, ಕಷ್ಟ ಪಟ್ಟು ದುಡಿದ್ದು ಇದ್ಕs ಬಡೀಬೇಕ್ರಿ. ಈ ಕಸಬಿನ್ಯಾಗ ಏನೂ ಇಲ್ಲಂದ್ರೂ ನಮ್ಮ ಮನೆತನ ಕಸಬು ನೋಡ್ರಿ ಬಿಡಾಂಗಿಲ್ಲ. ಹಾಂಗಂತ ಇದರ ಮ್ಯಾಲೆs ನಂಬಿ ಕೂರಂಗಿಲ್ಲ. ಹೊಟ್ಟೆಗ್ಯೆ ಬಟ್ಟೆಗ್ಯೆ ಚಿಂತೆಯಿಲ್ಲ ಇಲ್ರಿ, ಆದ್ರ ಗಳಿಕಿ ಆಗಂಗಿಲ್ರಿ. ಮಕ್ಕಳಿಗೆ ಸಾಲಿ ಕಲ್ಸಾಕ, ಮದ್ವಿ ಗಿದ್ವಿಗೆ ನಾವ್ ಸಾಲ ಮಾಡs ಬೇಕ್ರಿ." ಎಂದು ತಮ್ಮ ಪಾರಂಪರಿಕ ಕಸಬಿನ ಸ್ಥಿತಿಯನ್ನು ಬಿಚ್ಚಿಡುವ ವೃದ್ಧೆ ರೇಣುಕವ್ವ ಕೊಪ್ಪಳರವರ ಧ್ವನಿಯಲ್ಲಿ ನೋವಿದೆ.

ಒಂದು ೪ × 5 ಮೊಳದ ಕೌದಿ ತಯಾರಾಗಲು ಇಬ್ಬರು ಎರಡು ದಿನ ಶ್ರಮಿಸಬೇಕು. ಹಾಗೆಯೇ ಒಂದು ೩ × 2.5 ಮೊಳದ ಕೌದಿ ತಯಾರಾಗಲು ಒಬ್ಬರು ಎರಡು ದಿನ ಶ್ರಮಿಸಬೇಕು. ಇಂದು ಕೆ.ಜಿ. ಕಾಟನ್ ದಾರಕ್ಕೆ ೧೭೦ ರಿಂದ ೧೮೦ ರೂಪಾಯಿಗಳನ್ನು, ಪಾಲಿಸ್ಟರ್ ದಾರಕ್ಕೆ ೧೧೦ ರಿಂದ ೧೨೦ ರೂಪಾಯಿಗಳನ್ನು ತೆತ್ತಬೇಕು.

"ನಾವೂ ದೂರದ ಮಹಾರಾಷ್ಟ್ರದ ಲಾಥೂರದಿಂದ ಕೌದಿ ದಾರ ತರಿಸಿ ಕೊಡಬೇಕ್ರಿ. ಕಾಟನ್ ದಾರ, ಪಾಲಿಸ್ಟರ್ ದಾರಗಳ ರೇಟು ಒಂದs ನಮೂನಿ ಇರೂದಿಲ್ರಿ. ರೇಟು ಹೆಚ್ಚೂ ಕಮ್ಮೀ ಆಗುತ್ತ. ಇದ್ರಗs ನಾನೂ ಖರ್ಚು ತಗೀಬೇಕ್ರಿ. ಇಂಥಾದ್ರಾಗ ಲಾಭ ಹ್ಯಾಂಗ ಮಾಡ್ಕೋಬೇಕ್ರಿ?" ಎಂದು ತನ್ನ ಗೋಳನ್ನು ತೋಡಿಕೊಳ್ಳುತ್ತಾರೆ ದಾರದ ವಿತರಕ ಹಾಗೂ ಮಾರಾಟಗಾರ ರಾಮಣ್ಣ ಪೂಜಾರಿ.

**ಕೌದಿ ತಯಾರಿಕೆಯಿಂದ ಬರುವ ರೋಗ ರುಜಿನಗಳು :**

ಕೌದಿ ತಯಾರಿಕೆಯಿಂದ ಅನೇಕ ರೋಗ-ರುಜಿನಗಳೂ ಬರುವುದುಂಟು! "ಒಂದs ಕಡೀಕ ದೃಷ್ಟಿ ನೆಟ್ಟೂ.. ನೆಟ್ಟೂ.. ಕಣ್ಣು ಮಂಜ್(ಮಂದ) ಆಗ್ಯಾವ್ರಿ, ಒಂದs ಕಡೀಕ ಕುಂತೂ.. ಕುಂತೂ ನಡ ಬಿದ್ದೋಗ್ಯಾವ್ರಿ. ನೆತ್ತಿ ಮ್ಯಾಲ ಕೌದಿ, ಬಟ್ಟಿ ಗಂಟು ಹೊತ್ತೂ.. ಹೊತ್ತೂ.. ಕುತ್ತಿಗಿ ಬ್ಯಾನಿ ಬರ್‍ತಾವ್ರಿ." ಇದು ಶರಣಮ್ಮ ಕಬ್ಬರಗಿಯವರ ಅಭಿಪ್ರಾಯ. ಇವುಗಳಲ್ಲದೇ ಹಳೆಯ ಬಟ್ಟೆ ಗಂಟಿನಿಂದ ಬರುವ ಧೂಳು, ಘಮುಟು ವಾಸನೆಯಿಂದ ಡಸ್ಟ್ ಅಲರ್ಜಿ ಅಲ್ಲದೇ ಕೆಮ್ಮು, ದಮ್ಮುಗಳಂತಹ ರೋಗಗಳಿಗೆ ತುತ್ತಾಗುತ್ತಾರೆ. ಆದರೂ ಇವರಿಗೆ ತಮ್ಮ ಪಾರಂಪರಿಕ ಕಸಬು ಕೌದಿ ಉದ್ಯಮ ಅನಿವಾರ್ಯವಾಗಿದೆ.

ಮೂರೆಳೆಯನಿಟ್ಟು ತಾ ಹಾರುವರೆ ಸ್ವರ್ಗಕ್ಕೆ
ನೂರೆಂಟುಯೆಳೆಯ ಕೌದಿಯನು ಹೊದ್ದಾತ
ಹಾರನೇಕಯ್ಯ ಸರ್ವಜ್ಞ ॥

ಸರ್ವಜ್ಞ ಕವಿಯ ಈ ತ್ರಿಪದಿಯು ಕೌದಿ ಹೊದ್ದಾತನ ಬಗ್ಗೆ ಮುದ್ದಾದ ಕರುಣೆ ತೋರಿದಂತಿದೆ! ಅಲ್ಲವೇ?

ಒಟ್ಟಿನಲ್ಲಿ ಒಂದು ಸಮುದಾಯದ ಕಲೆ ಹಾಗೂ ಬದುಕಿನ ಸಂಕೇತವಾಗಿರುವ ಕೌದಿಯ ತಯಾರಕರ ಬದುಕಲ್ಲಿ ಭೀತಿ, ಅಭದ್ರತೆ ಹಾಗೂ ಅಸಹಾಯಕತೆಗಳು ಇಣುಕುತ್ತಿದ್ದು, ಬದುಕು ತೀರಾ ಅಸಹನೀಯವಾಗುತ್ತಿರುವ ದೃಶ್ಯಗಳು ಸಮಾಜದಲ್ಲಿ ಹಾಗೂ ಮಾರುಕಟ್ಟೆಯಲ್ಲಿ ಕಣ್ಣಿಗೆ ಕಟ್ಟುತ್ತಿವೆ. ಇವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ನೆಲೆಗಳನ್ನು ಸುಧಾರಿಸುವುದರ ಜೊತೆ ಜೊತೆಗೆ ಇವರ ಜನ್ಮಜಾತ ವಿಶಿಷ್ಟ ಸಾಂಸ್ಕೃತಿಕ ಕಲಾತ್ಮಕ ಕಸಬುಗಳನ್ನು ಗುರುತಿಸುವ, ಅವುಗಳಿಗೆ ವಿಶಿಷ್ಟ ಹಾಗೂ ನಿರ್ದಿಷ್ಟ ಪ್ರೋತ್ಸಾಹವನ್ನು ಕೊಡುವ ಮೂಲಕ ಅವುಗಳನ್ನು ಮಾರುಕಟ್ಟೆಗೆ ಪರಿಚಯಿಸಿ, ಅವುಗಳ ಮೌಲ್ಯ ಹಾಗೂ ಆಕರ್ಷಣೆಯನ್ನು ವಿಕಾಸಗೊಳಿಸುವ ಪ್ರಯತ್ನಗಳ ನಿರೀಕ್ಷೆಯಲ್ಲಿ ಹನಮಸಾಗರದ ಕೌದಿ ಹೊಲಿಯುವವರಿದ್ದಾರೆ!*

**೩.೫.೯ ಕೊಪ್ಪಳ ಮಂಡಾಳು ತಯಾರಿಕೆ**

ದಾವಣಗೆರೆ ಮಂಡಾಳನ್ನುಬಿಟ್ಟರೆ ; ಇವುಗಳಷ್ಟೇ ಪ್ರಸಿದ್ಧವಾಗಿರುವ ಮತ್ತೊಂದು ನಗರ ಕೊಪ್ಪಳ. ಕೊಪ್ಪಳದಲ್ಲಿ ತಾಯಾರಾಗುವ ಸುಪ್ರಸಿದ್ಧ ಮಂಡಾಳು ತನ್ನ

ವಿಶಿಷ್ಟ ತಾಜಾತನ ಹಾಗೂ ವಿಶೇಷ ಒಗ್ಗರಣಿ ಸ್ವಾದದೊಂದಿಗೆ ಪ್ರತಿದಿನವೂ ನೂರಾರು ಮೈಲು ದೂರ ಸಾಗುತ್ತಿದೆ! ಇದು ಮಂಡಾಳು ತಯಾರಿಕಾ ಪಾರಂಪರಿಕ ಕಸಬಿನಲ್ಲಿ ಮತ್ತೊಂದು ಮೈಲುಗಲ್ಲು!!

**ಕೊಪ್ಪಳ ಮಂಡಾಳು ತಯಾರಕರ ಹಿನ್ನೆಲೆ ಮತ್ತು ಮೂಲ :**

ಕೊಪ್ಪಳ ನಗರದ ೧೫, ೧೬ ಹಾಗೂ ೧೯ನೇ ವಾರ್ಡುಗಳಲ್ಲಿರುವ ಹಟಗಾರು ಓಣಿ, ಸರ್ದಾರ ಓಣಿ, ಕುರುಬರ ಓಣಿ, ಹಾಳುಬಾವಿ ತಗ್ಗುಗಳಲ್ಲಿ ಕೆಲವು ಕುರುಬರು, ಪರಿಶಿಷ್ಠ ವರ್ಗದವರು ಹಾಗೂ ಮುಸ್ಲಿಂರ ಕುಟುಂಬಗಳೂ ಮಂಡಾಳನ್ನು ತಯಾರಿಸುತ್ತಾರೆ. ಇದು ಅವರ ಪಾರಂಪರಿಕ ಕಸಬು.

ಕೊಪ್ಪಳ ಮಂಡಾಳು ತಯಾರಕರ ಹಿನ್ನೆಲೆ ಮತ್ತು ಮೂಲದ ಬಗ್ಗೆ ಕೇಳಿದಾಗ "ಕೊಪ್ಪಳದ ಮಂಡಾಳಿನ ಮೂಲ ತಯಾರಕರು ಯಾರು ಅಂತಾ ನಿಖರವಾಗಿ ಹೇಳೋದು ಕಷ್ಟ. ಆದರೂ... ತೆಗ್ಗಿನಕೇರಿಯಲ್ಲಿದ್ದ ಈರಬಸಪ್ಪ ಏಳುರೊಟ್ಟಿ ಅನ್ನೋ ಯಜಮಾನ ಅಂತಾ ನಾವು ಚಿಕ್ಕವರಿದ್ದಾಗಿನಿಂದಲೂ ಕೇಳೀವಿ ಮತ್ತ...ನೋಡೀವಿ." ಎನ್ನುತ್ತಾರೆ ಕೊಪ್ಪಳದ ಜನತಾ ಇಂಡಸ್ಟ್ರೀಸ್‌ನ ಮಾಲೀಕ ಶಹಾಬುದ್ದೀನ್.

ಬಿದಿರಿನ ಸಣ್ಣ ಸಣ್ಣ ತಟ್ಟಿಗಳಿಂದಲೇ ಕಟ್ಟಿಕೊಂಡ ಕೈಬಟ್ಟಿಯಲ್ಲಿ ಸುಪ್ರಸಿದ್ಧ ಬೆಳ್ಳನೆಯ ಮಂಡಾಳು ತಯಾರಾಗುತ್ತವೆ. ಆದರೆ... ಆ ತಯಾರಕರ ಬದುಕು ಮಾತ್ರ ಕಗ್ಗಗಿದೆ! ಮಂಡಾಳು ಉತ್ಪಾದಿಸಿ ಮಾರಾಟ ಮಾಡುವ ಮೂಲಕ ಬದುಕನ್ನು ದೂಕುತ್ತಿದ್ದಾರೆ.

**ಕೊಪ್ಪಳ ನಗರದ ಮಾಹಿತಿ :**

'ಕೊಪ್ಪಳ' ಎಂಬ ನಗರವು ಜಿಲ್ಲಾ ಕೇಂದ್ರವಾಗಿದ್ದು, ಕುಷ್ಟಗಿಯಿಂದ ೪೯ ಕಿ.ಮೀ. ಪಯಣಿಸಿದರೆ ಸಿಕ್ಕುವ ಮಂಡಾಳು ತಯಾರಕರ ಊರು.

೨೦೧೧ರ ಜನಗಣತಿಯ ಪ್ರಕಾರ ೧೪೦೫೮ ಮನೆಗಳನ್ನೂ, ೭೦೬೯೮ ಜನಸಂಖ್ಯೆಯನ್ನು ಹೊಂದಿರುವ ಈ ನಗರದಲ್ಲಿ ೩೫೩೬೦ ಪುರುಷರು ಹಾಗೂ ೩೫೩೩೮ ಸ್ತ್ರೀಯರಿದ್ದಾರೆ. ೧೯೭೭ರಲ್ಲಿ ಕೊಪ್ಪಳದ ತೆಗ್ಗಿನಕೇರಿ, ಸರ್ದಾರಗಲ್ಲಿ ಏರಿಯಾದಲ್ಲಿ ಸುಮಾರು ೨೫೦ ಕೈಬಟ್ಟಿಗಳು ಇದ್ದವು. ಈಗ ಮುಸ್ಲಿಂರು, ಕುರುಬರು, ಪರಿಶಿಷ್ಠ ವರ್ಗದವರೂ ಒಳಗೊಂಡಂತೆ ೮೦ಕ್ಕೂ ಅಧಿಕ ಕುಟುಂಬಗಳು ಮಂಡಾಳನ್ನು

ತಯಾರಿಸುತ್ತಿದ್ದಾರೆ. ಅಲ್ಲದೇ ನಗರದಿಂದ ೭ ಕಿ.ಮೀ. ಅಂತರದಲ್ಲಿ 'ಜನತಾ ಇಂಡಸ್ಟ್ರೀಸ್' ಎಂಬ ಮಂಡಾಳು ಉತ್ಪಾದಿಸುವ ಕೈಗಾರಿಕೆಯಾಗಿ ರಾರಾಜಿಸುತ್ತಿದೆ, ಗ್ರಾಹಕರನ್ನು ಕೈಬೀಸಿ ಕರೆಯುತ್ತಿದೆ. ಮಂಡಾಳು ತಯಾರಕರ ಮೂಲವನ್ನು ಹುಡುಕುವಾಗ ಅವರೆಲ್ಲರೂ ಇದೇ ಊರಿನವರೆಂಬುದು ಸ್ಪಷ್ಟವಾಗುತ್ತದೆ. 'ಕೊಪ್ಪಳ ಮಂಡಾಳು' ಎಂದು ಕರೆಯಿಸಿಕೊಳ್ಳುವಷ್ಟು ಸ್ಥಾನ ಗಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ!

**ಕೊಪ್ಪಳ ಮಂಡಾಳಿನ ವೈಶಿಷ್ಟ್ಯ :**

"ಕೊಪ್ಪಳದ ಮಂಡಾಳನ ಭೊಲೋ ಕ್ಲೀನ್ ಮಾಡಿರ್ತಾರ, ಒಳ್ಳೆ ನೀರು ಬಳಕೆ ಮಾಡ್ತಾರ, ಸಮುದ್ರದ ಉಪ್ಪುನs ಬಳಸತಾರ. ಹೀಂಗಾಗಿ ನಮ್ಮೂರಿನ ಮಂಡಾಳಿನಿಂದ ಮಾಡಿದ ವಗ್ಗರಣಿನ ಬಿಸಿ ಆರಿದ್ಮ್ಯಾಲೂ ತಿನ್ನಬಹುದು. ಯಾಕಂದ್ರ ಇವು ಕೈಬಟ್ಟಿಯಿಂದ ತಯಾರಾಗಿರ್ತಾವ್ರಿ." ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ ಸಗಟು ಖರೀದಿದಾರ ಸಿದ್ದಣ್ಣ ಚೌಡಿಯವರ ಮಾತಿನಲ್ಲಿಯೇ ಕೊಪ್ಪಳ ಮಂಡಾಳಿನ ವೈಶಿಷ್ಟತೆಯಿದೆ.

ಬೇರೆ ಕಡೆ ತಯಾರಾಗುವ, ಮಂಡಾಳಿನಿಂದ ಮಾಡಿದ ಒಗ್ಗರಣೆಯ ಆಯಸ್ಸು ಎರಡ್ಮೂರು ತಾಸುಗಳು ಮಾತ್ರ, ಏನಿದ್ರೂ ಬಿಸಿ ಇದ್ದಾಗಲೇ ತಿನ್ನಬೇಕು. ಇಲ್ಲದಿದ್ದರೆ ಮುಗ್ಗು ವಾಸನೆ ಬರುತ್ತದೆ. ಆದರೆ... ಕೊಪ್ಪಳದ ಮಂಡಾಳಿನಿಂದ ಮಾಡಿದ ಒಗ್ಗರಣೆಯನ್ನು ಸಂಜೆವರೆಗೂ ತಿನ್ನಬಹುದು! ಯಾಕೆ ಹೀಗೆಂದು ಪ್ರಶ್ನಿಸಿದರೆ.... ಬಿಸಿ ಮಂಡಾಳನ್ನು ತಟ್ಟಿನ(ಗೋಣಿ) ಚೀಲದಲ್ಲಿ ತುಂಬಿ, ನೀರು ಚಿಮುಕಿಸಿ, ನಂತರ ಫ್ಯಾನ್ ಗಾಳಿ ಹೊಡಿಯುತ್ತಾರೆ. ಇದರಿಂದ ದೂರದಿಂದ ಲಾರಿಗಳಲ್ಲಿ ಸಾಗಿ ಬರುವಾಗ ಅವು ಪುಡಿಯಾಗಬಾರದೆಂದು ಹಾಗೆ ಮಾಡುವುದಾಗಿಯೂ ತಿಳಿಸುತ್ತಾರೆ. "ಮಂಡಾಳು ಉತಾರ ಬರ್ಲಿ, ಲಾಭ ಆಗ್ಲಿ ಅಂತಾನೂ ಹಾಂಗ ನೀರು ಹೊಡಿತಾರ್ರಿ... ನಾವ್ ಮಾತ್ರ ಬಿಸಿ ಬಿಸಿ ಮಂಡಾಳ್ನs ಮಾರ್ಕೇಟಿಗೆ ಕಳಿಸ್ತೀವ್ರಿ" ಎನ್ನುತ್ತಾರೆ ಕಮೀಷನ್ ಏಜೆಂಟ್ ಕಾಸಿಂಸಾಬ ಲೇಬಗೇರಿ. ಹೀಗೆ ಕೊಪ್ಪಳದಲ್ಲಿ ತಾಯಾರಾಗುವ ಸುಪ್ರಸಿದ್ಧ ಮಂಡಾಳು ತನ್ನ ವಿಶಿಷ್ಟ ತಾಜಾತನ ಹಾಗೂ ವಿಶೇಷ ಒಗ್ಗರಣಿ ಸ್ವಾದದೊಂದಿಗೆ ನೂರಾರು ಮೈಲು ಸಾಗುತ್ತಿದೆ!

**ಮಂಡಾಳಿನ ಅರ್ಥ ಮತ್ತು ಉಪಯೋಗಗಳು :**

ಅರ್ಥ– ಮಂಡಾಳು ಬೇಯಿಸಿದ ನೆಲ್ಲ(ಭತ್ತ)ನಿಂದ ತಯಾರಾದ ಅಕ್ಕಿಯನ್ನು ಹುರಿದು ತಯಾರಿಸಲಾದ 'ಉಬ್ಬಿಸಿದ ಖಾದ್ಯ ಧಾನ್ಯ'. ಮಂಡಾಳು ಒಂದೊಂದು

ಪ್ರದೇಶದಲ್ಲಿ ಒಂದೊಂದು ಹೆಸರಿನಿಂದ ಕರೆಯಲ್ಪಡುತ್ತದೆ. ಇದನ್ನು 'ಮಂಡಕ್ಕಿ' ಎಂದು ಕೆಲವೆಡೆ ಕರೆದರೆ 'ಪುರಿ', 'ಮುರಿ' ಎಂದೂ ಕರೆಯುವುದುಂಟು. ಇಂಗ್ಲೀಷಿನಲ್ಲಿ 'ಪಫ್ಡ್ ರೈಸ್' (Puffed rice), 'ಕ್ರಿಸ್ಪ್ಡ್ ರೈಸ್' ('Crisped rice'- Rice puffed like crisp, and known as 'Crisped rice'). ಹಿಂದಿಯಲ್ಲಿ 'ಫೂಲಾ ಹುವಾ ಚಾವಲ್' ಎಂದೂ ಕರೆಯುತ್ತಾರೆ.

ಉಪಯೋಗಗಳು – ಮಂಡಾಳು ಲಘು ಉಪಹಾರ ಖಾದ್ಯವಾಗಿದ್ದು, ಇದರಲ್ಲಿ ಸುಮಾರು ೭೩ ತರಹದ ಪಾಕಗಳನ್ನು ತಯಾರಿಸಬಹುದಾಗಿದೆಯಂತೆ! ರಾಯಲಸೀಮಾ, ಓಡಿಸ್ಸಾ, ತ್ರಿಪುರ, ಪಶ್ಚಿಮ ಬಂಗಾಳ, ಹಾಗೂ ಬಾಂಗ್ಲಾದೇಶಗಳಲ್ಲಿ ಹೆಚ್ಚಾಗಿ ಉಪಯೋಗಿಸಲ್ಪಡುತ್ತದೆ. ಅದರಲ್ಲೂ ಉತ್ತರ ಕರ್ನಾಟಕದಲ್ಲಂತೂ ಚುರುಮುರಿ, ಚೂಡಾ, ಗಿರ್ಮಿಟ್ಟ, ಒಗ್ಗರಣೆ ತುಂಬಾ ಪ್ರಸಿದ್ಧಿ ಪಡೆದಿವೆ. ಭೇಲ್‌ಪುರಿ ಬೀದಿ ಬದಿಯ ಸ್ವಾದಿಷ್ಟ ತಿಂಡಿಯಾಗಿದ್ದು, ಸಂಜೆಯ ಸಮಯ ಅನೇಕ ತಿಂಡಿಪ್ರಿಯರನ್ನು ಆಕರ್ಷಿಸುತ್ತದೆ. ಜಾತ್ರೆಗಳಲ್ಲಿ ಬಂಧು–ಮಿತ್ರರಿಗೆ ಹಾಕಿ ಕಳುಹಿಸುವ ಫಳಾರದಲ್ಲಿಯೂ ಮಂಡಾಳಿನದೇ ಅಗ್ರಸ್ಥಾನ! ಶಬರಿ ಮಲೈ ಅಯ್ಯಪ್ಪ ಸ್ವಾಮಿಯ ಇರುಮುಡಿಯಲ್ಲಿ ಸ್ಥಾನವನ್ನು ಗಳಿಸಿಕೊಂಡಿದೆ. ನಾಮಕರಣ, ಶಂಕುಸ್ಥಾಪನೆ, ಹೊಸ್ತಿಲ ಪೂಜೆ, ಗೌರಿ ಪೂಜೆ, ಗಣೇಶ ಪೂಜೆ ಮುಂತಾದ ಪೂಜೆಗಳ ನಂತರ ಪ್ರಸಾದದ ರೂಪದಲ್ಲಿಯೂ ಮಂಡಾಳನ್ನು ಹಂಚುತ್ತಾರೆ. ಮೊಹರಂನಲ್ಲಿ ಹೆಜ್ಜೆಕುಣಿತದಲ್ಲಿ, ಕರಡಿಮಜಲು ವಾದನದಲ್ಲಿ ಮಂಡಾಳನ್ನು ಅವರ ತಲೆ ಮೇಲೆ ಹಾಕುವುದರ ಮೂಲಕ ಹುರುಪು ತುಂಬುತ್ತಾರೆ. ಶವಯಾತ್ರೆಯಲ್ಲಿಯೂ ಮಂಡಾಳನ್ನು ಶವದ ಮೇಲೆ ಉಗ್ಗುತ್ತಾ ಹೋಗುವುದುಂಟು! ಹೀಗೆ ಅನೇಕ ಪ್ರಸಂಗಗಳಲ್ಲಿ ಮಂಡಾಳು ಉಪಯೋಗಿಸಲ್ಪಡುತ್ತದೆ.

**ಮಂಡಾಳಿನಲ್ಲಿರುವ ಪೋಷಕಾಂಶಗಳು–ಪ್ರತಿ ೧೦೦ ಗ್ರಾಂಗಳಿಗೆ :**

(Nutrition Facts of Puffed rice)

- Calories - ४೦೨
- Fats - ೦.೫ grams
- Carbohydrate - ೯೦ grams
- Protein - ೬ grams

ಮಂಡಾಳನ್ನು ತಯಾರಿಸುವಾಗ ನೆಲ್ಲನ್ನು ೯೫ ಡಿಗ್ರಿ ಸೆಲ್ಸಿಯಸ್ ನೀರನಲ್ಲಿ ಕುದಿಸುವುದರಿಂದ, ಅದನ್ನು ಎರಡು ಸಲ ಹುರಿಯುವುದರಿಂದ ವೈವಿಧ್ಯಮಯ ಪೋಷಕಾಂಶಗಳು ನಷ್ಟವಾಗಿರತ್ತವೆ. ಇದರಲ್ಲಿ ಪ್ರೋಟಿನ್ ಮತ್ತು ಫೈಬರ್‌ಗಳು ತುಂಬಾ ಕಡಿಮೆ ಇರುವುದರಿಂದ ಹಸಿವಿನ ಭಾವನೆ ಬಿಡಬಹುದಾಗಿದೆ. ಬೇರೆ ಬೇರೆ ಪೌಷ್ಠಿಕಾಂಶಗಳನ್ನು ಸೇರಿಸುವ ಮೂಲಕ ತಯಾರಿಸುವ ತಿಂಡಿ ದೇಹಕ್ಕೆ ಪೂರಕವಾಗಬಹುದು.

**ಮಂಡಾಳು ತಯಾರಿಕೆ :**

ದೈಹಿಕ ಶ್ರಮವೇ ಅಧಿಕವಾಗಿರುವ ಮಂಡಾಳು ತಯಾರಿಕೆ ಅರೆಬೆಂದ ಅಕ್ಕಿಯೇ ಜೀವಾಳ. ಬಿಸಿ ಬಾಣಲೆಯಲ್ಲಿ ಜಿನುಗು ಮರಳಿನೊಡನೆ ಬೆರೆತ ಉಪ್ಪಿನಲ್ಲಿ ಮಿಂದೆದ್ದ ಹಸಿ ಅಕ್ಕಿ ಕೆಲವೇ ಕ್ಷಣಗಳಲ್ಲಿ ಚಟಪಟ ಸದ್ದು ಮಾಡುತ್ತಾ ಅರಳಿ ಮೇಲೆ ಬರುತ್ತದೆ. ಸಾಣಿಗೆಯಿಂದ ಮೇಲೆತ್ತಿ ಜರಡಿ ಹಿಡಿದಾಗ ಉಸುಕು ಪುನಃ ಬಾಣಲಿಯ ತಳ ಸೇರಿದರೆ, ಮಂಡಾಳು ಪಕ್ಕದಲ್ಲಿರುವ ಚಾಪೆಯ ಮೇಲೆ ರಾಶಿಯಾಗುತ್ತಾ ಹೋಗುತ್ತದೆ.

**ಬೇಕಾಗುವ ಕಚ್ಚಾ ಸಾಮಗ್ರಿಗಳು :**

- ಭತ್ತ (ಸಾಮಾನ್ಯವಾಗಿ ೧೦೧೦ ತಳಿಯ ಭತ್ತ)
- ಉಪ್ಪು

**ಬೇಕಾಗುವ ಸಲಕರಣೆಗಳು :**

- ಬಟ್ಟಿ
- ನಿರುಪಯುಕ್ತ ಟೈರು
- ನೆಲ್ಲು ತೌಡು(ಹೊಟ್ಟು)
- ಬಾಣಲಿ
- ಗುರುಮಾ
- ಸಾಣಗಿ (ಜರಡಿ)
- ತಟ್ಟು (ಗೋಣಿ ಚೀಲದ ತುಂಡು)
- ಬುಟ್ಟಿಗಳು

- ಜಿನುಗು ಕರಿ ಉಸುಕು (ಸಣ್ಣನೆಯ ಕಪ್ಪು ಮರಳು)
- ಬ್ಯಾರಲ್
- ಗಡಗಿ / ಹಂಡೆಗಳು
- ಚಾಪೆಗಳು

**ಮಂಡಾಳು ತಯಾರಿಕಾ ವಿಧಾನ :**

ಕೊಪ್ಪಳ ಮಂಡಾಳಿನ ತಯಾರಿಕೆಯೂ ವಿಶೇಷತೆಯಿಂದ ಕೂಡಿದೆ. ಮೊದಲು ನಿರುಪಯುಕ್ತವಾದ ಟೈರು ಸುಟ್ಟು, ಹೊಗೆ ಕಕ್ಕಿಸಿ, ಬಾಣಲಿಯನ್ನು ಕಾಯಿಸುವ ಮೂಲಕ ಕುದಿಸಿದ ಅಕ್ಕಿಯನ್ನು ಹುರಿಯುತ್ತ ಮಂಡಾಳು ತಯಾರಿಸುತ್ತಿದ್ದ ಸಾಂಪ್ರದಾಯಿಕ ತಯಾರಿಕೆ ಕ್ರಮೇಣ ತುಸು ನಯ-ನಾಜೂಕಿನತ್ತ ಹೊರಳುತ್ತಿದೆ. ಹುರಿಯುವಾಗ ಅರಳುವ ಮಂಡಾಳು ತಿರುವಲು ಗುರುಮಾ ಬಳಸುವವರು ಇದೀಗ ಕಡಿಮೆಯಾಗಿದ್ದು, ಅವುಗಳ ಜಾಗವನ್ನು ತಿರುಗುವ ಯಂತ್ರಗಳು ತುಂಬುತ್ತಿವೆ. ಕುದಿಸಿದ ಭತ್ತವನ್ನು ಹುರಿಯಲು ರೋಸ್ಟರ್ ಯಂತ್ರ ಬಂದಿದೆ. ಆ ಭತ್ತದ ಸಿಪ್ಪೆ(ಹೊಟ್ಟು ಅಥವಾ ತೌಡು)ಯನ್ನು ಬೇರ್ಪಡಿಸಲು ಗಿರಣಿ ಬಂದಿದೆ. ಶ್ರಮ ಕೊಂಚ ಕಡಿಮೆಯಾಗಿದೆ.

ಸುಮಾರು ೯೫° ಸೆಲ್ಸಿಯಸ್‌ನಷ್ಟು ಕುದಿಸಿದ ನೀರಿಗೆ ಅಗತ್ಯಕ್ಕೆ ತಕ್ಕಷ್ಟು, ಸ್ವಚ್ಛ ಮಾಡಿದ ಭತ್ತವನ್ನು ಕುದಿಯುವ ನೀರು ತುಂಬಿದ ಆ ಹಂಡೆ ಅಥವಾ ಕಬ್ಬಿಣದ ಬ್ಯಾರಲ್‌ಗೆ ಸುರಿಯುತಾರೆ. ೪ ತಾಸಿನ ಬಳಿಕ ಅಂದರೆ ತಣ್ಣಗಾದ ಬಳಿಕ ಅದರಲ್ಲಿರುವ ನೀರನ್ನು ಬಸಿಯುವ ಮೂಲಕ ಹೊರ ತೆಗೆಯುತ್ತಾರೆ. ಆನಂತರ ಭತ್ತವನ್ನು ಹುರಿಯಬೇಕು. ಆಗ ಆ ಭತ್ತದ ಸಿಪ್ಪೆ(ಹೊಟ್ಟು ಅಥವಾ ತೌಡು) ಬೇರ್ಪಡುತ್ತದೆ. ಹೀಗೆ ಬೇರ್ಪಟ್ಟ ಅಕ್ಕಿಯನ್ನು ಉಪ್ಪು ನೀರಿನಲ್ಲಿ ಬೆರೆಸಿ, ಅಕ್ಕಿಯನ್ನು ಹೊರತೆಗೆದು ಬಯಲಿನಲ್ಲಿ ಒಣಗಿಸುತ್ತಾರೆ. ಉರಿವ ಒಲೆಯ ಮೇಲೊಂದು ಬಾಣಲಿ. ಅದರಲ್ಲೊಂದಷ್ಟು ನುಣ್ಣನೆಯ ಉಸುಕು(ಮರಳು) ಹಾಕಲಾಗಿರುತ್ತದೆ. ಈಗ ಒಣಗಿದ ಅಕ್ಕಿಯನ್ನು ಬಾಣಲಿಯಲ್ಲಿ ಹಾಕುತ್ತಿದ್ದಂತೆ ಅಕ್ಕಿಯು ಅರಳಿ ಮಂಡಾಳು ಆಗುತ್ತದೆ. ಈ ಸಂದರ್ಭದಲ್ಲಿ ಬಾಣಲಿಯಲ್ಲಿನ ಅಕ್ಕಿಯನ್ನು ತಿರುವಲು ಕೆಲವರು ಖಡ್ಗದಂತಿರುವ ಗುರುಮಾ ಎಂಬ ಸಲಕರಣೆಯನ್ನು ಬಳಸಿದರೆ ಇನ್ನೂ ಕೆಲವರು ಯಂತ್ರವನ್ನು ಬಳಸುತ್ತಾರೆ. ನಂತರ ಹೀಗೆ ಒಲೆ ಉರಿಯುತ್ತಲೇ ಇರಬೇಕು, ಬಾಣಲಿ ಕಾಯುತ್ತಲೇ ಇರಬೇಕು, ಅಕ್ಕಿ ಅರಳಿ ಮಂಡಾಳು ಆಗುತ್ತಲೇ ಇರಬೇಕು, ಅಂದಾಗ ಮಾತ್ರ ಮಂಡಾಳು ತಯಾರಕರ ಬಾಳೂ ಅರಳುತ್ತದೆ!

ಇದೀಗ ಈ ಮಂಡಾಳು ಉದ್ಯಮಕ್ಕೂ ಯಂತ್ರ ಕಾಲಿಟ್ಟಿದೆ. ಕೊಪ್ಪಳ ನಗರದಿಂದ ೭ ಕಿ.ಮೀ. ದೂರದಲ್ಲಿರುವ ಚಿಲವಾಡಗಿ ಗ್ರಾಮದಲ್ಲಿ 'ಜನತಾ ಇಂಡಸ್ಟ್ರೀಸ್' ಎಂಬ ಫ್ಯಾಕ್ಟರಿಯೂ ತಲೆಯೆತ್ತಿದೆ. ೨೦೦೪ರಲ್ಲಿ ೩೦ ಜನ ಕಾರ್ಮಿಕರಿಂದ ದಿವೊಂದಕ್ಕೆ ೩೦೦ ಚೀಲ (ಒಂದು ಚೀಲದಲ್ಲಿ ೫ ಕೆ.ಜಿ.) ಮಂಡಕ್ಕಿ ತಯಾರಿಸುತ್ತಿದ್ದವರು, ೨೦೧೦ ರಿಂದ ಇದೀಗ ಆಧುನಿಕ ಯಂತ್ರಗಳನ್ನು ಬಳಸಿ ಕೇವಲ ೧೫ ಜನ ಕಾರ್ಮಿಕರಿಂದ ೮೦೦ ಚೀಲ ಮಂಡಾಳು ಉತ್ಪಾದನೆಯಾಗುತ್ತಿದೆ! ಆರಂಭದಲ್ಲಿ ಕೇವಲ ೨೦ ಕಿ.ಮೀ. ವ್ಯಾಪ್ತಿಗೆ ಪೂರೈಕೆಯಾಗುತ್ತಿದ್ದ ಕೊಪ್ಪಳ ಮಂಡಾಳು ಇದೀಗ ಕುಷ್ಟಗಿ, ಬಾಗಲಕೋಟೆ, ಹುನಗುಂದ, ಹೊಸಪೇಟೆ, ಸಿಂಧನೂರು, ಗಂಗಾವತಿ, ತುರ್ವಿಹಾಳ, ಹುಬ್ಬಳ್ಳಿ, ಗದಗ, ಧಾರವಾಡ, ಬಳ್ಳಾರಿ, ರಾಯಚೂರು, ದಾಂಡೇಲಿ ಹಾಗೂ ಗೋವಾ... ಹೀಗೆ ನೂರಾರು ಕಿ.ಮೀ.ವರೆಗೂ ವ್ಯಾಪಿಸಿದೆ!

"೧೯೭೭ರಲ್ಲಿ ಕೈ ಬಟ್ಟಿಯಲ್ಲಿ ತಯಾರು ಮಾಡಿದ ಮಂಡಾಳನ್ನು ದೊಡ್ಡಪ್ಪನ ಜೊತೆ ೨೫ ಕೆ.ಜಿ. ಮಂಡಾಳು ಚೀಲ ಹೊತ್ಕೊಂಡು ಊರೂರು ತಿರುಗಿ ಹೋಟೆಲ್‌ಗೆ, ಕಿರಾಣಿ ಅಂಗಡಿಗಳಿಗೆ ಕೊಟ್ಕೊಂಡು ವ್ಯಾಪಾರ ಮಾಡ್ತಿದ್ವಿ, ನಂತರ... ಸೈಕಲ್ಲು, ಲಾರಿಗಳ ಮೂಲಕ ವ್ಯಾಪಾರ ಮಾಡಿದ್ವಿ, ಬೇಡಿಕೆ ಹೆಚ್ಚು ಹೆಚ್ಚು ಬರ್ತಾಹತ್ತಿದ್ರಿಂದ ಪೂರೈಕೆ ಮಾಡೋದ್ರ ಸಲುವಾಗಿ 'ಎಮ್-ಗೋಲ್ಡ್' ಬ್ರಾಂಡಿನಡಿ ಚಿಲವಾಡಗಿಯಲ್ಲಿ ಫ್ಯಾಕ್ಟರಿನಃ ಶುರೂ ಮಾಡಿದ್ವಿ, ನಮ್ಮಲ್ಲಿ ತೈಆರಾದ ಮಂಡಾಳನ್ನು ಸುಮಾರು ಎರಡು ತಿಂಗಳವರೆಗೂ ಇಟ್ಟುಕೊಳ್ಳಬಹುದು. ಅದಕ್ಕೆ ನಾವು ಯಾವುದೇ ರಾಸಾಯನಿಕ ಬಳಸುವುದಿಲ್ಲ." ಎಂದು ಮಾಲೀಕ ಶಹಾಬುದ್ದೀನ್ ತಮ್ಮ ಗತದಿನಗಳನ್ನು ನೆನಪಿಸಿಕೊಳ್ಳುತ್ತಾರೆ.

**ಮಂಡಾಳು ತಯಾರಿಸುವಾಗ ಗಮನಿಸಬೇಕಾದ ಅಂಶಗಳು :**

- ಕುದಿಸಿದ ಅಕ್ಕಿಯನ್ನು ತಾಳ್ಮೆಯಿಂದ ಹದವಾಗಿ ಹುರಿಯಬೇಕು.
- ಉಪ್ಪನ್ನು ರುಚಿಗೆ ತಕ್ಕಷ್ಟು ಹಾಕಬೇಕು.
- ಸಾಣಗಿಯನ್ನು ಗೋಣಿ ತಟ್ಟನಿಂದ ಇಲ್ಲವೇ ಹತ್ತಿಬಟ್ಟೆಯಿಂದಲೇ ಹಿಡಿಯಬೇಕು.
- ಯಾವುದೇ ವಿಷಕಾರಕ ವಸ್ತು ಅಥವಾ ಕ್ರಿಮಿ-ಕೀಟಗಳು ಮಂಡಾಳಿಗೆ ಶೇರಿಕೊಳ್ಳದೆಂತೆ ನೋಡಿಕೊಳ್ಳಬೇಕು.
- ಮೂಗು ಹಾಗೂ ಕಣ್ಣಿಗೆ ರಕ್ಷಾಕವಚಗಳನ್ನು ಉಪಯೋಗಿಸಬೇಕು.

**ಕೊಪ್ಪಳ ಮಂಡಾಳಿನ ಪ್ರಕಾರಗಳು :-**

- ಕೈಬಟ್ಟಿ ಮಂಡಾಳು
- ಯಂತ್ರದ (ಫ್ಯಾಕ್ಟರಿ) ಮಂಡಾಳು

**ಕೊಪ್ಪಳ ಮಂಡಾಳಿನ ಈಗಿನ ದರ :**

- ಜನತಾ ಜಿಂಡಸ್ಟ್ರೀಸ್‌ನವರ ಮಂಡಾಳಿಗೆ ಪ್ರತಿ ಕೆ.ಜಿ.ಗೆ ೪೫ ರೂಪಾಯಿ.

- "೭೫ ಕೆ.ಜಿ.ಯ ಒಂದು ಚೀಲ ನೆಲ್ಲಿನಿಂದ ಆರು ಚೀಲ(೭೨೦ ಲೀಟರ್) ಮಂಡಾಳು ತಯಾರು ಮಾಡ್ತೀವ್ರಿ, ಎರಡ ವರ್ಷಾತ್ರಿ ೧ ಚೀಲ (೧೨೦ ಲೀಟರ್) ಮಂಡಾಳಿಗೆ ೩೩೦ ರೂಪಾಯಿ ಕೊಡ್ತಾರ್ರಿ. ನೆಲ್ಲಿನ ರೇಟು ಜಾಸ್ತಿ ಆದ್ರ ನಮ್ಗ ಲಾಸ್ ಆಕ್ಕೈತ್ರಿ. ಬಿಡುಗಡಿ ಇಲ್ಲಲ್ರಿ ಇದು ನಮ್ಮ ಕಸಬು." ಎನ್ನುತ್ತಾರೆ ತಯಾರಕಿ ಹಸೀನಾ.

**ಮಂಡಾಳು ತಯಾರಿಕೆಯಿಂದ ಬರುವ ರೋಗ ರುಜಿನಗಳು :**

- ಸತತ ಆವರಿಸುವ ಬೂದಿಯ ಕಣಗಳು ಕಣ್ಣಲ್ಲಿ ಹೊಕ್ಕು ಕಣ್ಣುರಿಗೆ ಕಾರಣವಾಗಿವೆ.

- ನಿರಂತರ ಉರಿವ ಬೆಂಕಿಯ ಮುಂದೆ ಕುಳಿತುಕೊಳ್ಳುವುದರಿಂದ ದೇಹದೊಳಗೇ ಉಷ್ಣ ಪ್ರವಹಿಸಿದ ಬಾಧೆ.

- ಉರಿಯ ಸೆಕೆ, ಬೆವರಿನ ಮೇಲೆ ಬೂದಿಯ ಸಿಂಚನದಿಂದ ಕಪ್ಪಾದ ಮುಖ, ಚರ್ಮ ಜಾಡ್ಯ ಜೋಡಾಗುವುದು.

- ಉರಿವ ಒಲೆ, ಝಳವನ್ನು ನೋಡಿ ನೋಡಿ ಮಂಜಾದುವ ಕಣ್ಣುಗಳು.

- ಮಾಲಿನ್ಯಕಾರಕ ವಾಯು ಉಸಿರಾಟದಿಂದ ಶ್ವಾಸಕೋಶದ ತೊಂದರೆ.

- ಕುಳಿತಲ್ಲೇ ಕುಳಿತುಕೊಳ್ಳುವುದರಿಂದ ಸೊಂಟ, ಕೈ ಕಾಲು ನೋವು – ಹೀಗೆ ರುಚಿಯಾದ ಮಂಡಾಳು ತಯಾರಿಸುವ ಇವರ ಬದುಕು ಮಾತ್ರ ಮಂಡಾಳಿನಷ್ಟೂ ರುಚಿಯಾಗಿಲ್ಲ!

ಸುಮಾರು ನೂರು ವರುಷಗಳ ಇತಿಹಾಸ ಹೊಂದಿರುವ ಕೊಪ್ಪಳದ ಮಂಡಾಳು ಲಘು ಆಹಾರ ಪದಾರ್ಥಗಳಲ್ಲಿ ಒಂದಾಗಿದ್ದು, ಸುದೀರ್ಘ ಕಾಲದ ಅನುಭವ ಪರಂಪರೆ ಅಡಗಿದೆ. ಜನಪದರು ಜಾತ್ರೆಗಳಲ್ಲಿ ಬೀಗರು-ಬಿಜ್ಜರುಗಳಿಗೆ ಫಳಾರ ರೂಪದಲ್ಲಿಯೂ, ಹುಟ್ಟು ಹಬ್ಬ, ಮದುವೆಯಂತಹ ಆಚರಣೆಯಲ್ಲಿ ವಿಶಿಷ್ಟ ತಿನಿಸಾಗಿದೆ. ಅಲ್ಲದೇ ಅನೇಕ

ಕುಟುಂಬಗಳ ಪಾರಂಪರಿಕ ಕಸಬು ಮಾತ್ರವಲ್ಲ, ಅನೇಕ ನಿರುದ್ಯೋಗಿಗಳಿಗೆ ಉದ್ಯೋಗವನ್ನೂ ನೀಡಿದೆ. ಆಹಾರದ ಹಿಂದಿರುವ ಆರೋಗ್ಯದ ತತ್ವ ಹಾಗೂ ಅನುಭವ ಪರಂಪರೆಯ ಈ ಕೊಂಡಿ ಕಳಚದಿರಲೆಂಬುದೇ ಈ ಪ್ರಯತ್ನದ ಹಿಂದಿರುವ ಹಂಬಲ. ಕೊಪ್ಪಳದ ಮಂಡಾಳೂ ದೇಶದ, ರಾಜ್ಯದ ಬೇರೆ ಬೇರೆ ಮಾರುಕಟ್ಟೆಗಳಲ್ಲೂ ದೊರೆಯುವಂತೆ ಸೂಕ್ತ ಮಾರುಕಟ್ಟೆ ವ್ಯವಸ್ಥೆ ಕಲ್ಪಿಸಿದರೆ ಕರ್ರಗಾದ ಅವರ ಬದುಕು ಮಂಡಾಳಿನಂತೆ ಬೆಳ್ಳಗಾದೀತು.

*

### ೩.೬ ಕುಷ್ಟಗಿ ಪರಿಸರದ ಸಾಮಾನ್ಯ ಪಾರಂಪರಿಕ ಕಸಬುಗಳು :

ಆದಿಮಾನವನು ತನ್ನ ಬದುಕಿಗೆ ಅನಿವಾರ್ಯವಾದ ಆಹಾರಕ್ಕಾಗಿ ಅಲೆದಾಡುವಾಗ ತನ್ನ ಸುತ್ತಮುತ್ತಲಿನ ಪ್ರಾಕೃತಿಕ ವಸ್ತುಗಳನ್ನೇ ಬಳಸಿಕೊಂಡು ಜೀವಿಸತೊಡಗಿದೆ. ಕಲ್ಲಿನಿಂದ ಆಯುಧಗಳನ್ನು ತಯಾರಿಸಿಕೊಂಡಾಗಲೇ ಅವನ ಸಂಶೋಧನೆ ಪ್ರಾರಂಭವಾಯಿತು. ಕ್ರಮೇಣ ತನ್ನ ಅಗತ್ಯಗಳನ್ನು ಪೂರೈಸಿಕೊಳ್ಳಲು ಪ್ರಕೃತಿಯಲ್ಲಿಯ ಪೂರಕ ಸಾಮಗ್ರಿಗಳನ್ನೇ ಬಳಸತೊಡಗಿರಬಹುದು. ಬಲಿಷ್ಠ ಪ್ರಾಣಿಗಳು ದುರ್ಬಲ ಪ್ರಾಣಿಗಳನ್ನು ಬೇಟೆಯಾಡಿ ತಿನ್ನುವುದನ್ನು ನೋಡಿದ ಆದಿಮಾನವನು ತನ್ನ ಆಹಾರಕ್ಕಾಗಿ ಪ್ರಾಣಿಗಳ ಬೇಟೆಯಾಡಿರಬಹುದು. ನಂತರದಲ್ಲಿ ಅವುಗಳ ಮೂಳೆ, ಕೋರೆ ಹಲ್ಲು ಹಾಗೂ ಚೂಪಾದ ಉಗುರುಗಳನ್ನು ಬೇಟೆಯಾಡಲು, ಗಡ್ಡೆ-ಗೆಣಸುಗಳನ್ನು ಹೆಕ್ಕಿ ತೆಗೆಯಲು ಬಳಸತೊಡಗಿದನು. ಜೇಡರ ಬಲೆಯನ್ನು ನೋಡಿದ ಆದಿಮಾನವ ತಾನೂ ಬಲೆ ನೆಯ್ದು, ಹಕ್ಕಿಗಳನ್ನು ಹಿಡಿಯ ತೊಡಗಿದನು. ಹಾಗೆಯೇ ತನ್ನ ಕೈಚಳಕ ಹಾಗೂ ಬುದ್ಧಿ ಚಾತುರ್ಯವನ್ನು ಬಳಸಿ ವಿಭಿನ್ನವಾದ ಅಗತ್ಯ ವಸ್ತುಗಳನ್ನು ತಯಾರಿಸಲು ಪ್ರಾರಂಭಿಸಿದ. ಹೀಗೆ ಬೇಟೆ ಸಂಸ್ಕೃತಿ, ಪಶುಪಾಲನಾ ಸಂಸ್ಕೃತಿ ಹಾಗೂ ಕೃಷಿ ಸಂಸ್ಕೃತಿಯನ್ನು ಒಂದೊಂದಾಗಿ ತನ್ನ ದೈನಂದಿನ ಜೀವನದಲ್ಲಿ ಅಳವಡಿಸಿಕೊಳ್ಳುತ್ತಾ ಹೋದಂತೆಲ್ಲಾ ದಿನಬಳಕೆಯ ವಸ್ತುಗಳ ಅವಶ್ಯಕತೆಯೂ ಹೆಚ್ಚಾಗುತ್ತಾ ಹೋಯಿತು. ಜೊತೆಗೆ ಹಕ್ಕಿಯ ಗೂಡಿನಿಂದ, ಪ್ರಕೃತಿಯ ರಮಣೀಯ ದೃಶ್ಯಗಳಿಂದ, ಹೂವು-ಹಣ್ಣುಗಳ ಬಣ್ಣಗಳಿಂದ ಮಾನವನಲ್ಲಿ ಕಲಾತ್ಮಕ ಪ್ರಜ್ಞೆ ಮೂಡತೊಡಗಿತು. ಹೀಗೆ ಆದಿಮಾನವನು ಬೇಟೆಯ ಆಯುಧಗಳು, ಕೃಷಿ ಉಪಕರಣಗಳು, ವಾಸದ ಮನೆಗಳ ರಚನೆ, ವಸ್ತ್ರ ವಿನ್ಯಾಸ ಹಾಗೂ ಆಭರಣಗಳ ಪರಿಕಲ್ಪನೆಗಳು ಮಾನವನ ಬದುಕಿನೊಂದಿಗೆ ವಿಸ್ತಾರಗೊಂಡವು. ಹೀಗೆ ಬದುಕಿಗಾಗಿ ಕಲೆ ಮೂಡಿದ್ದು, ಇದೀಗ ಕಲೆಗಾಗಿ ಕಲೆ ಎಂಬ ಹಂತಕ್ಕೆ ತಲುಪಿದ್ದಾನೆ!

ಯಾವಾಗ ಆತನ ಜೀವನದಲ್ಲಿ ಅಗತ್ಯದ ಪೂರೈಕೆಗಾಗಿ ಯಂತ್ರ ನಾಗರಿಕತೆ ಪ್ರವೇಶ ಪಡೆಯಿತೋ, ಆಗ ಅತ್ಯಾವಶ್ಯಕ ವಸ್ತುಗಳ ತಯಾರಿಕೆಯ ಕಡೆಗೆ ಹೆಚ್ಚು ಶ್ರದ್ಧೆ ವಹಿಸತೊಡಗಿದನು. ಹೀಗೆ ತಯಾರಿಸಿದ ಒಂದು ವಸ್ತು ವಿವಿಧ ಸಂದರ್ಭಗಳಲ್ಲಿ, ವಿವಿಧ ಅಗತ್ಯತೆಗೆ ಬಳಕೆಯಾಗತೊಡಗಿತು. ಒಮ್ಮೊಮ್ಮೆ ಹಿಂದಿನವರು ತಯಾರಿಸಿದ ವಸ್ತುವಿನ ಪ್ರಾಥಮಿಕ ಉದ್ದೇಶ ಕೈತಪ್ಪಿ ಆನುಷಂಗಿಕ ಅಗತ್ಯತೆಗಳಿಗೂ ಉಪಯೋಗವಾಗಿರಲೂ ಬಹುದು. ಹೀಗೆ ಕಾಲಕ್ರಮೇಣ ವಸ್ತುಗಳ ಸೃಷ್ಟಿ ಹಾಗೂ ಬಳಕೆ ಬದಲಾಗುತ್ತಾ ಬಂದಂತೆಲ್ಲಾ ಮಾನವನ ಸೃಷ್ಟಿಶೀಲಗುಣ ಕಸಬುಗಳನ್ನು ಹುಟ್ಟು ಹಾಕಿತು ಎನ್ನಬಹುದು. ಅಂದರೆ... ಮಾನವನ ಕಸಬುಗಳು ಅವನಷ್ಟೇ ಪುರಾತನವಾದವು. ಕಸಬುಗಳ ಸ್ವರೂಪ ಹಾಗೂ ಬಳಕೆ ವಿಭಿನ್ನತೆ ಹೊಂದಿರಬಹುದು.

ಮಾನವನು ಒಂದೆಡೆ ನೆಲೆನಿಂತುಕೊಂಡ ನಂತರ ವಿವಿಧ ವರ್ಗಗಳು ಬೆಳೆದುಕೊಂಡವು. ಅವುಗಳಲ್ಲಿ ಮೂಲತಃ ಬಲಾಢ್ಯರು ಮತ್ತು ದುರ್ಬಲರು ಎಂಬ ವರ್ಗಗಳು ಬೆಳೆದು ಬಂದಿರಲೇಬೇಕು. ಬಲಾಢ್ಯರು ತಮ್ಮ ಬಲಾಢ್ಯತನದಿಂದ ಅಥವಾ ಅಧಿಕಾರ ದರ್ಪದಿಂದ ತಮ್ಮ ದೈನಂದಿನ ಬದುಕಿಗೆ ಬೇಕಾಗುವ ಕಚ್ಚಾವಸ್ತುಗಳನ್ನು ನೀಡಿ, ಅವರಿಂದ ಉತ್ಪಾದಿತ ಸಿದ್ಧವಸ್ತುಗಳನ್ನು ಇಲ್ಲವೇ ಸೇವೆಗಳನ್ನು ಪಡೆಯುತ್ತಾ, ಶ್ರಮ ವಿಭಜನೆ ಮಾಡುವ ಮೂಲಕ ಬೇರೆ ಬೇರೆ ವರ್ಗಗಳ ಹುಟ್ಟಿಗೆ ಕಾರಣವಾಗಿರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಹೀಗೆ ದುರ್ಬಲರು ತಮ್ಮ ಹೊಟ್ಟೆಹೊರೆಯಲು ತಾವು ಮಾಡಿಕೊಂಡು ಬಂದ ಕಸಬುಗಳನ್ನೇ ತಲೆತಲಾಂತರದಿಂದ ಮುಂದುವರೆಸಿಕೊಂಡು ಬಂದ ಪರಿಣಾಮವೇ ಅನುವಂಶಿಕ ವೃತ್ತಿ ಅಥವಾ ಕುಲಕಸಬುಗಳಾಗಿ ಉದಯವಾದವು. ಇವರಿಗೆ ಕಸಬು ಮುಂದುವರೆಯಲು ಒಂದು ಪರಂಪರೆ ಇದೆಯೇ ಹೊರತು ತರಬೇತಿ ಇರುವುದಿಲ್ಲ. ಕಸಬುಗಳನ್ನು ಪೀಳಿಗೆಯಿಂದ ಪೀಳಿಗೆಗೆ ರವಾನಿಸಲು ಮನೆಗಳೇ ತರಬೇತಿ ಶಾಲೆಗಳು ಅಥವಾ ಕಾರ್ಯಾಗಾರಗಳು; ಅನುಭವಿಕ ಹಿರಿಯ ಕಸಬುದಾರರೇ ತರಬೇತುದಾರರು. ನೋಡಿ ಕಲಿ, ಮಾಡಿ ಕಲಿ ಎಂಬ ವಿಧಾನದಲ್ಲಿ ಈ ಕಸಬು ಜೀವಂತಿಕೆ ಪಡೆಯುತ್ತಾ ಮುಂದೆ ಸಾಗುತ್ತದೆ. ಸಾಮಾಜಿಕ ಜೀವನದಲ್ಲಿ ಸಾಮಾನ್ಯವಾಗಿ ಭೂಮಿರಹಿತ ಕುಟುಂಬಗಳೇ ಸ್ವಪ್ರೇರಣೆಯಿಂದಲೋ ಇಲ್ಲವೇ ಒತ್ತಾಯದಿಂದಲೋ ಅಥವಾ ಅನಿವಾರ್ಯತೆಯಿಂದಲೋ ತನ್ನ ಶಕ್ತಿ ಸಾಮರ್ಥ್ಯಕ್ಕೆ ತಕ್ಕ ಕಸಬನ್ನು ಆಯ್ಕೆಮಾಡಿಕೊಂಡವು. ತಮ್ಮ ಪರಿಣಿತಿಯನ್ನು ತೋರ್ಪಡಿಸಿಕೊಳ್ಳುತ್ತಾ ಉಪಜೀವನ ವೃತ್ತಿಯನ್ನು ಉಳಿಸಿ ಬೆಳೆಸಿಕೊಂಡು ಬಂದವು. ಬಹುತೇಕ ಕಸಬುಗಳು ಕೃಷಿಕನ

ಆಶ್ರಯದಲಿಯೇ ಆಸರೆ ಪಡೆದು, ಮೂಲಭೂತ ಜೀವನಾವಶ್ಯಕತೆಗಳನ್ನು ಪೂರೈಸುತ್ತಾ ಬೆಳೆದು ಬಂದವು.

ಒಕ್ಕಲಿಗನ ಜೀವನದಲ್ಲಿ ಹಾಸುಹೊಕ್ಕಾಗಿರುವ ಕುಲಕಸಬುಗಳ ಪರಂಪರೆಯು ಮುಂದುವರೆದು ಪಶುಸಂಗೋಪನೆ ಮಾಡುವ ಪಶುಪಾಲಕ, ಬಟ್ಟೆಗಳನ್ನು ಶುಭ್ರಗೊಳಿಸುವ ಮಡಿವಾಳ, ಕೂದಲನ್ನು ಅಚ್ಚುಕಟ್ಟಾಗಿ ಕತ್ತರಿಸುವ ಅಥವಾ ಬೋಳಿಸುವ ಕ್ಷೌರಿಕ, ಬಟ್ಟೆ ನೇಯುವ ನೇಕಾರ, ಬಟ್ಟೆ ಹೊಲಿಯುವ ಸಿಂಪಿ, ಮನೆಗಳನ್ನು ಕಟ್ಟುವ ಗೌಂಡಿ, ಬಿದಿರ ಕೆಲಸ ಮಾಡುವ ಮೇದಾರ, ಆಯುರ್ವೇದದ ಔಷಧಿ ಕೊಡುವ ವೈದ್ಯ, ಕಲ್ಲು ಕಟೆದು ವಸ್ತುಗಳನ್ನು ತಯಾರಿಸುವ ಕಲ್ಲುಕುಟಿಗ, ಶಿಲ್ಪ ತಯಾರಿಸುವ ಶಿಲ್ಪಗಾರ, ದೇವರ ಪೂಜೆ ಮಾಡುವ ಪೂಜಾರಿ, ಹೂಪತ್ರೆ ಕೊಡುವ ಹೂಗಾರ, ಮರಮುಟ್ಟುಗಳಿಂದ ಸಾಮಾನು ತಯಾರಿಸುವ ಬಡಿಗ, ಕಬ್ಬಿಣದ ಸಾಮಾನು ತಯಾರಿಸುವ ಕಮ್ಮಾರ, ಮಣ್ಣಿನಿಂದ ಮಡಿಕೆ-ಕುಡಿಕೆಗಳನ್ನು ತಯಾರಿಸುವ ಕುಂಬಾರ, ಬಂಗಾರ-ಬೆಳ್ಳಿಯ ಆಭರಣ ತಯಾರಿಸುವ ಪತ್ತಾರ, ಊರು ಕಾಯುವ ತಳವಾರ, ಈಚಲಿನ ಬುಟ್ಟಿ ತಯಾರಿಸುವ ಕೊರವರು ಹೀಗೆ ಅನೇಕ ಸಾಮಾನ್ಯ ಕಸಬುಗಳನ್ನು ವಂಶಪಾರಂಪರ್ಯವಾಗಿ ಮುಂದುವರೆಸಿಕೊಂಡು ಬರುತ್ತಿರುವ ಕಸಬುಗಳನ್ನು ಕುಷ್ಟಗಿ ಪರಿಸರದಲ್ಲಿಯೂ ಕಾಣಬಹುದಾಗಿದೆ. ಆದರೆ ಇವುಗಳ್ಲಿ ಕೆಲವು ಉತ್ತಮ ಸ್ಥಿತಿಯಲ್ಲಿದ್ದರೆ ಇನ್ನೂ ಕೆಲವು ಅವನತಿಯ ಹಾದಿ ಹಿಡಿದಿವೆ. 'ಒಕ್ಕಲಿಗ ಒಕ್ಕದಿರೆ ಬಿಕ್ಕುವುದು ಜಗವೆಲ್ಲ' ಎಂಬ ನಾಣ್ನುಡಿಯಂತೆ ಅನೇಕ ಕಸಬುದಾರರು ತಮ್ಮ ಕುಲಕಸಬುಗಳನ್ನು ತೊರೆದು ಬೇರೊಂದು ವೃತ್ತಿಯಲ್ಲಿ ಮುಂದುವರೆದಿರುವುದೂ ಸಾಮಾನ್ಯ ಹಾಗೂ ಖೇದಕರ ಸಂಗತಿ. ಈ ಎಲ್ಲಾ ಕಸಬುಗಳು ಸಾಮಾನ್ಯವಾಗಿ ನಮ್ಮ ಭಾರತೀಯ ಸಮಾಜದಲ್ಲಿ ಕಂಡು ಬರುತ್ತಿರುವುದರಿಂದಲೂ, ಇವುಗಳ ಬಗ್ಗೆ ಈಗಾಗಲೇ ಅನೇಕ ಜಾನಪದ ತಜ್ಞರು ಅಧ್ಯಯನ ಕೈಗೊಂಡ ಹಿನ್ನೆಲೆಯಲ್ಲಿ ಇವುಗಳ ವಿಶ್ಲೇಷಣೆಗೆ ಅಷ್ಟಾಗಿ ಪ್ರಾಮುಖ್ಯತೆ ನೀಡಿರುವುದಿಲ್ಲ. ಅಲ್ಲದೇ ಅತ್ಯಂತ ಆಳವಾಗಿ ನನ್ನ ಸಂಶೋಧನೆಗೂ ಒಳಪಡಿಸಿರುವುದಿಲ್ಲ.

**೩.೬.೧ ಕುಂಬಾರಿಕೆ :**

ಅತ್ಯಂತ ಪ್ರಾಚೀನ ಕಸಬುಗಳಲ್ಲಿ ಕುಂಬಾರಿಕೆಗೂ ಪ್ರಮುಖ ಸ್ಥಾನವುಂಟು. 'Pottery is pure art freed from any intention' ಎಂದು ಕುಂಬಾರಿಕೆಯ ಉನ್ನತಿಯನ್ನು ಎತ್ತಿ ಹಿಡಿಯುವ ಹೇಳಿಕೆ ಸರ್ ಹರ್ಬರ್ಟ್ ರೀಡ್‌ರವರದ್ದೇ ಎಂದು ಹೇಳುವಷ್ಟು

ಜನಜನಿತವಾಗಿದೆ! ಬಹುಶಃ ಮಡಿಕೆ-ಕುಡಿಕೆಗಳಿಲ್ಲದೇ ಜಗತ್ತಿನ ಯಾವುದೇ ಪ್ರಾಚೀನ ನಾಗರಿಕತೆಯ ಉತ್ಖನನ ಸಾಧ್ಯವಾಗಿಲ್ಲವೆಂದೇ ಹೇಳಬಹುದಾದಷ್ಟು ಪ್ರಾಚೀನತೆಯನ್ನು ಹೊಂದಿದೆ. "ಪ್ರಾಚೀನ ನಾಗರಿಕತೆಯ ಉತ್ಖನನದುದ್ದಕ್ಕೂ ಮಡಿಕೆಯ ಪಳಿಯುಳಿಕೆಗಳು ಮನುಷ್ಯನ ಅಸ್ಥಿಯೊಂದಿಗೆ ಲಭ್ಯವಾಗುತ್ತವೆ."[೪೩]

ಕುಂಭ+ಕಾರ →ಕುಂಭಕಾರ →ಕುಂಭಗಾರ →ಕುಂಬಾರ ಎಂಬ ಪದನಿಷ್ಪತ್ತಿಯನ್ನು ಒಪ್ಪಬಹುದಾಗಿದೆ. ಮಣ್ಣಿನಿಂದ ವಸ್ತುಗಳನ್ನು ತಯಾರಿಸುವ ಕಸಬುದಾರರನ್ನು ಕುಂಬಾರರೆಂದು ಕರೆಯುತ್ತಾರೆ. ಮಾನವನ ವಲಸೆಯ ಬದುಕು ಸ್ಥಿರಗೊಂಡಾಗ ಬೇಸಾಯದಿಂದ ಬರುವ ಧಾನ್ಯಗಳನ್ನು, ಕಾಡಿನಿಂದ ತಂದ ಹಣ್ಣು-ಹಂಪಲುಗಳನ್ನು ಸಂಗ್ರಹಿಸಿಡಲು ಮಡಿಕೆಗಳನ್ನು ಮಾಡಿರಬಹುದು ಎಂದು ಪ್ರಾಚ್ಯ ಸಂಶೋಧಕರು ಹಾಗೂ ಇತಿಹಾಸ ತಜ್ಞರು ಅಂದಾಜಿಸಿರುವುದು ಸತ್ಯವೆನಿಸುತ್ತದೆ. ಮೊದಲು ಕೈಯಿಂದಲೇ ತಯಾರಿಸಿದ ಹಸಿ ಮಡಿಕೆಗಳನ್ನು ಒರಟಾಗಿಯೇ ತಯಾರಿಸಿದ್ದು, ಚಕ್ರವನ್ನು ಕಂಡು ಹಿಡಿದ ನಂತರವೇ ಸುಡುವ ತಂತ್ರ ಬಳಸಿರಬಹುದೆಂಬ ಅಂದಾಜಿದೆ. ಅದರಲ್ಲೂ ನದಿಗಳ ಅಕ್ಕ-ಪಕ್ಕದ ದಡಗಳಲ್ಲೇ ಕುಂಬಾರಿಕೆ ಬೆಳೆದು ಬಂದಿರುವುದನ್ನು ಪ್ರಾಕ್ತನ ಶಾಸ್ತ್ರಜ್ಞರು ಹೇಳುತ್ತಾರೆ.

ಸುಮಾರು ೪೬೦೦ ವರ್ಷಗಳ ಹಿಂದಿನ ಗೂಡಿನಂತಹ ನೆಲಮನೆ ಭಾರತದ ಸಿಂಧೂ ಬಯಲಿನ ನಾಗರಿಕತೆಯ ಕಾಶ್ಮೀರದಲ್ಲಿನ ಬರ್ಜುಹೊಂನಲ್ಲಿ ಪತ್ತೆ ಮಾಡಲಾಗಿದ್ದು, ಅದರ ಹೊರಗೆ ಹಾಗೂ ಒಳಗೆ ಮಣ್ಣಿನ ಕುಡಿಕೆಗಳು ಸಿಕ್ಕಿವೆ. ಈಜಿಪ್ಟ್‌ನ ನೈಲ್ ನದಿ ನಾಗರಿಕತೆ, ಗ್ರೀಸ್‌ನ ಯುಪ್ರಟಿಸ್ ಮತ್ತು ಟೈಗ್ರಿಸ್ ನದಿ ಬಯಲಿನ ಮೆಸಪಟೊಮಿಯಾ ಅಥವಾ ಬ್ಯಾಬಿಲೋನಿಯಾ ನಾಗರಿಕತೆ ಹಾಗೂ ಚೀನಾ ದೇಶದ ಹವಾಂಗೊ ಮತ್ತು ಯಾಂಗ್ ಟಿಸಿಕಿಯಾಂಗ್ ನಾಗರಿಕತೆಯಲ್ಲಿ ಅತ್ಯುತ್ತಮವಾದ ಮಡಿಕೆಗಳನ್ನು, ಪಿಂಗಾಣಿಯ ವಸ್ತುಗಳನ್ನು ತಯಾರಿಸುತ್ತಿದ್ದ ಬಗ್ಗೆ ಇತಿಹಾಸ ತಿಳಿಸುತ್ತದೆ. ಒಟ್ಟಿನಲ್ಲಿ ಕುಂಬಾರಿಕೆ ತುಂಬಾ ಪ್ರಾಚೀನ ಕಸಬು ಎಂಬುದು ನಿಸ್ಸಂಶನೀಯ.

"ಕುಷ್ಟಗಿ ಪರಿಸರದಲ್ಲಿಯೂ ಬೃಹತ್ ಶಿಲಾಯುಗ(ಕ್ರಿ.ಪೂ. ೯೦೦-೨೦೦)ದ ಮಣ್ಣಿನ ಪಾತ್ರೆಗಳು ಸಿಕ್ಕಿವೆ! 'ಮಣ್ಣಿನ ಪಾತ್ರೆಯಲ್ಲಿ ಹರಳಿನ (ಅಭ್ರಕ) ಅಂಶವಿದ್ದು, ಸ್ವಲ್ಪ ಮಟ್ಟಿಗೆ ಸಣ್ಣ ಮರಳಿನಿಂದ ಕೂಡಿದೆ. ಅಂದರೆ ಚೆನ್ನಾಗಿ ಹಸನು ಮಾಡಿದ ನಯವಾದ ಜಿಗುಟು ಮಣ್ಣನ್ನು ಉಪಯೋಗಿಸಿಲ್ಲ. ಈ ಪಾತ್ರೆಯನ್ನು ಕೈಯಿಂದ ತಯಾರಿಸಿ ನಂತರ ನಿಧಾನವಾಗಿ ಸುತ್ತಬಹುದಾದ ಮಣೆಯ(ತಿಗುರಿ) ಮೇಲಿಟ್ಟು ಅವುಗಳ ಆಕಾರವನ್ನು ತಿದ್ದಿ

ಸರಿ ಮಾಡಿರುವರು. ಈ ಹಸಿ ಮಣ್ಣಿನ ಪಾತ್ರೆಗಳನ್ನು ಸೂರ್ಯನ ಬಿಸಿಲಿನಲ್ಲಿ ಒಣಗಿಸಿ ಆ ಮೇಲೆ ಸುಡಲಾಗಿದೆ. ಇಂತಹ ಮಣ್ಣಿನ ಪಾತ್ರೆಗಳು ಬಿಜಕಲ್, ಮಾಟೂರು, ಹೊಸೂರು, ನವಲಹಳ್ಳಿ ಹಾಗೂ ಟೆಂಗುಂಟಗಳಲ್ಲಿ ದೊರೆತಿವೆ. ಇವುಗಳು ವಿವಿಧ ಗಾತ್ರಗಳಲ್ಲಿದ್ದು, ಬೂದು ಬಣ್ಣ, ಎಳೆ ಕಂದು-ಕೆಂಪು ಬಣ್ಣ ಹಾಗು ಕೆಂಪು ಬಣ್ಣದ್ದಾಗಿರುತ್ತವೆ."[೪೪]

ಕುಷ್ಟಗಿ ಪರಿಸರದಲ್ಲಿಯೂ ಕುಂಬಾರಿಕೆ ತುಂಬಾ ಪ್ರಾಚೀನ ಕಾಲದಿಂದಲೂ ಇತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಈಗಲೂ ಕುಷ್ಟಗಿ, ನಿಡಶೇಸಿ, ತಾವರಗೇರ, ಹನಮಸಾಗರ, ಹನಮನಾಳು, ದೋಟಿಹಾಳ, ನಿಲೋಗಲ್, ಮುದೇನೂರ ಮುಂತಾದ ಊರುಗಳಲ್ಲಿ ಕುಂಬಾರಿಕೆಯನ್ನು ಕಾಣಬಹುದಾಗಿದೆ.

'ಮಡಕೆಯ ಮಾಡುವವರಿಗೆ ಮಣ್ಣೇ ಮೊದಲು' ಎನ್ನುವಂತೆ ಕುಂಬಾರರಿಗೆ ಮಣ್ಣೇ ಬಂಡವಾಳ ಅಥವಾ ಕಚ್ಚಾವಸ್ತು. ಎಲ್ಲೆಡೆಯ ಮಣ್ಣೆಲ್ಲಾ ಮಡಿಕೆಯನ್ನು ತಯಾರಿಸಲು ಉಪಯೋಗವಾಗಲಾರದು. ಮಡಿಕೆಯ ಮಣ್ಣನ್ನು ಬಲಪಡಿಸಲು ಉಡುಗುವುದನ್ನು ತಡೆಗಟ್ಟಲು, ಧಾರಣ ಸಾಮರ್ಥ್ಯವನ್ನು ಹೆಚ್ಚಿಸಲು, ಕಾಂತಿಯುಕ್ತವಾಗಿಸಲು ಸುಣ್ಣ, ಬೂದಿ, ಉಸುಕು, ಬೆಣಚುಕಲ್ಲು ಮುಂತಾದವುಗಳನ್ನು ಮಿಶ್ರ ಮಾಡಿ, ಹದಗೊಳಿಸಿದ ಮಣ್ಣಿನಿಂದ ತಯಾರಿಸಿದ ಮಡಿಕೆಗಳು ಕಾಂತಿಯುತವಾಗಿದ್ದು, ದೀರ್ಘ ಬಾಳಿಕೆ ಬರುತ್ತವೆ. ಅದಕ್ಕೇ 'ಹಿಟ್ಟಿನಂತೆ ರೊಟ್ಟಿ; ಮಣ್ಣಿನಂತೆ ಮಡಿಕೆ' ಎಂಬ ಗಾದೆಯೊಂದು ಕುಂಬಾರಿಕೆಗೆ ತುಂಬಾ ಅಪ್ಯಾಯಮಾನವಾಗಿದೆ.

**ಮಡಿಕೆ ತಯಾರಿಕೆಯ ವಿಧಾನ**

ಕುಂಬಾರರು ಮಡಿಕೆಗಳನ್ನು ತಯಾರಿಸಲು ಈ ವಿಧಾನಗಳನ್ನು ಅನುಸರಿಸಲೇಬೇಕು.

- ಮೊದಲು ಮಣ್ಣನ್ನು ತಂದು ಹದಗೊಳಿಸಿಕೊಳ್ಳಬೇಕು.
- ತಿಗಿರಿ( ಚಕ್ರ)ಯ ಮೇಲೆ ಮಣ್ಣಿನ ಮುದ್ದೆಯನ್ನಿಟ್ಟು ಆಕಾರ ನೀಡುವುದು(ಗೇಯಬೇಕು).
- ಗೇಯ್ದ ಮಡಿಕೆ-ಕುಡಿಕೆಗಳನ್ನು ತಟ್ಟಿ ಸಿದ್ಧ ಮಾಡಬೇಕು.
- ಆವಿಗೆ(ಮಡಿಕೆ ಬಟ್ಟಿ)ಯಲ್ಲಿ ಮಡಿಕೆ-ಕುಡಿಕೆಗಳನ್ನು ಜೋಪಾನವಾಗಿಟ್ಟು ಸುಡಬೇಕು.

ಮಕ್ಕಳು ಮಣ್ಣನ್ನು ಸ್ವಚ್ಛಗೊಳಿಸಿದರೆ, ಹೆಣ್ಮಕ್ಕಳು ನೀರು ಹಾಕಿ ೧೦-೧೨ ತಾಸಯ ನೆನೆ ಇಟ್ಟು ಮಣ್ಣನ್ನು ಮುದ್ದೆಯಾಗಿ ಹದಗೊಳಿಸಬೇಕು. ಇಲ್ಲಿ ತಿಗುರಿಯ ಮೇಲೆ ಮಣ್ಣನ್ನು ಹಾಕಿ ಗೇಯುವುದರಿಂದ ಹಿಡಿದು ಗೇಯ್ದು ಮಡಿಕೆಗಳನ್ನು ಸಿದ್ಧಪಡಿಸುವಂತಹ ಅನೇಕ ಕೆಲಸಗಳಲ್ಲಿ ಪುರುಷರ ಪಾತ್ರವೇ ಮುಖ್ಯವಾದರೂ ಸ್ತ್ರೀಯರೂ ಕುಡಿಕೆ, ಮುಚ್ಚಳ, ಹಣತೆಗಳಂತಹ ಸಣ್ಣ ಸಣ್ಣ ಕೆಲಸಗಳನ್ನು ಮಾಡುತ್ತಾರೆ. ನಂತರ ಅವುಗಳನ್ನು ೨-೩ ದಿನ ನೆರಳಿನಲ್ಲಿಯೇ ಒಣಗಿಸಬೇಕು. ನಂತರ ಆವಿಗೆಯಲ್ಲಿ ಜೋಡಿಸಿ ೮-೧೦ ಗಂಟೆಗಳವರೆಗೆ ಬೆಂಕಿಯ ಜ್ವಾಲೆಗಳು ಹೊರ ಹೋಗದಂತೆ ಸುಡುವರು.

**ಕುಂಬಾರರು ತಯಾರಿಸುವ ವಸ್ತುಗಳು** : ಹೀಗೆ ಇಡೀ ಕುಟುಂಬವೇ ಇದರಲ್ಲಿ ಭಾಗವಹಿಸಿ ಮಡಿಕೆ, ಕಡಿಕೆ ಹಾಗೂ ಹರವಿ, ಸ್ವಾರಿ, ಮುಚ್ಚಳ, ಬಿಂದಿಗೆ, ತತ್ರಾಣಿ, ಹೂಜಿ, ದೋಸೆ ಹೆಂಚು, ಒಲೆ, ಪಡ್ಡಿನ ಹೆಂಚು, ಪರ್ಯಾಣ(ಗಂಗಾಳ), ಪ್ರಣತಿ, ಬೆಳಕಿಂಡಿ, ಹರನಾಳಿಗಿ ಮುಂತಾದ ಗೃಹ ಬಳಕೆಯ ವಸ್ತುಗಳನ್ನು ತಯಾರಿಸುತ್ತಾರೆ. ನೀರು ಸಂಗ್ರಹಿಸುವ ಬಾನಿ, ಕುಡತಿ, ಆಹಾರ ಧಾನ್ಯ ಸಂಗ್ರಹಿಸುವ ವಾಡೇವು ಮುಂತಾದ ಕೃಷಿ ಬಳಕೆಯ ವಸ್ತುಗಳನ್ನೂ ಕುಂಭ, ಐರಾಣಿ, ಚಿಲುಮೆ, ಧೂಪದ ಕುಂಡ ಮುಂತಾದ ವಿಶಿಷ್ಟ ಆಚರಣೆಯಲ್ಲಿ ಬಳಸುವ ವಸ್ತುಗಳನ್ನು ಹಾಗೂ ಘಟಂ, ಮೃದಂಗ, ತಬಲ, ಡಗ್ಗಾ ಮುಂತಾದ ಮಣ್ಣಿನ ವಾದ್ಯಗಳು, ಮಣ್ಣೆತ್ತು, ಗಣಪತಿ, ಗಂಗವ್ವ, ಗೌರವ್ವ, ಶೀಗವ್ವ, ಜೋಕುಮಾರ, ನಾಗರ ಮೂರ್ತಿಗಳನ್ನೂ ತಯಾರಿಸುವ ಜೊತೆಗೆ ಅಲಂಕಾರಿಕಾ ವಸ್ತುಗಳನ್ನು ತಯಾರು ಮಾಡುವ ಕಸಬು ಇವರದು. ಇಲ್ಲಿ ಎಲ್ಲರಿಗೂ ಕೆಲಸ ಇದ್ದೇ ಇರುತ್ತದೆ. ಇತ್ತೀಚಿಗೆ ಕುಂಬಾರ ಜನಾಂಗವಲ್ಲದೇ ಇತರೆ ಜನಾಂಗದವರೂ ಪಿಂಗಾಣಿ ವಸ್ತುಗಳ ತಯಾರಿಕೆ, ಪ್ಲಾಸ್ಟರ್ ಆಫ್ ಪ್ಯಾರಿಸ್ ಮೂರ್ತಿಗಳ ತಯಾರಿಕೆಯಲ್ಲಿ ತೊಡಗಿಕೊಂಡಿರುವುದರಿಂದ ಕುಂಬಾರ ವೃತ್ತಿ ಕುಲಕಸಬಾಗಿರದೇ *ಪಾರಂಪರಿಕ ಕಸಬಾಗಿದೆ.*

**ಆತಂಕ** : ಮೊದಮೊದಲು ಇದೊಂದು ಆಯಗಾರಿಕೆಯ ಕಸಬಾಗಿತ್ತು. ಈಗೀಗ ಆಯಗಾರಿಕೆ ನೇಪಥ್ಯಕ್ಕೆ ಸರಿಯುತ್ತಲಿದೆ. ವರ್ಷದ ಎಲ್ಲಾ ಕಾಲದಲ್ಲೂ ಇದು ಕೆಲಸವನ್ನು ನೀಡುವುದಿಲ್ಲ! ಮಳೆಗಾಲದಲ್ಲಿ ಮಳೆ-ಗಾಳಿಗಂಜಿ ಮಾಡುವ ಉದ್ಯೋಗವಾಗಿದೆ. ಸುಡಲು ಕಟ್ಟಿಗೆಯೂ ಕಡಿಮೆ ದರವಂತೂ ಇಲ್ಲವೇ ಇಲ್ಲ. ಈಗೀಗ ಉತ್ತಮವಾದ ಮಣ್ಣಿನ ಕೊರತೆಯೂ ಕಂಡು ಬರುತ್ತಿದೆ. ಊರ ಮಧ್ಯ ಜಾಗದ ಕೊರತೆ, ಮಾಲಿನ್ಯವಾಗಬಹುದೆಂದು ಅಳುಕು ಇದರೊಂದಿಗೆ ಆಳುಗಳ ಕೊರತೆ ಹಾಗೂ ದುಬಾರಿ.

ಕುಂಬಾರರು ತಯಾರಿಸುವ ಎಲ್ಲ ವಸ್ತುಗಳಿಗೂ ಸ್ಟೆಯ್ನ್‌ಲೆಸ್ ಸ್ಟೀಲ್, ಅಲ್ಯುಮಿನಿಯಂ, ಹಿತ್ತಾಳೆ, ತಾಮ್ರ, ಪ್ಲಾಸ್ಟಿಕ್ ಹಾಗೂ ಫೈಬರ್‌ನಿಂದ ತಯಾರಾದ ಪರ್ಯಾಯ ವಸ್ತುಗಳು ಮಾರಕಟ್ಟೆಗೆ ಲಗ್ಗೆ ಇಟ್ಟಿವೆ. ಆಕರ್ಷಕ ಶೈಲಿ ಹಾಗೂ ಕಣ್ಮನಸೆಳೆವ ರಂಗು ರಂಗಾದ ವಸ್ತುಗಳು ಕಡಿಮೆ ದರಕ್ಕೆ ಸಿಕ್ಕುತ್ತವೆ. ಬೇಸಿಗೆಯಲ್ಲಿ ಅಥವಾ ವಿಶೇಷ ಹಾಗೂ ಅನಿವಾರ್ಯ ಸಂದರ್ಭಗಳಲ್ಲಿಯೂ ಕುಂಬಾರರ ಮಡಿಕೆಗಳನ್ನು ಅಡ್ಡಾ ದುಡ್ಡಿಗೆ ಕೇಳುವ ಚೌಕಾಸಿ ಸಂದರ್ಭ ನೋಡಿದಾಗ ಎಂಥವರ ಕರುಳೂ ಚುರ್ ಎನ್ನುತ್ತದೆ. 'ಹೆಣ್ಣಾಗಿ ಹುಟ್ಟಬಾರದು, ಕುಂಬಾರನಾಗಿ ಬದುಕಬಾರದು' ; 'ಕುಂಬಾರನಿಗೆ ವರುಷ, ದೊಣ್ಣೆಗೆ ನಿಮಿಷ' ಎನ್ನುವ ಗಾದೆಗಳು ಇವರ ಕಷ್ಟವನ್ನು ಸಾರಿ ಹೇಳುತ್ತದೆ.

"ಕುಂಬಾರ ನಿನಗ್ಯಾಕೋ ಗೊಂಬಿ ಮಾಟದ ಹೆಣ್ಣು
ತುಂಬೆಂದ ಮಣ್ಣ ತುಳಿಯೆಂದ । ಮನಿಮನಿಗೆ
ಹೊತ್ತು ಮಾರಂದ ಮಡಕೀಯಾ।"[೪೫] ಎಂಬ ಜನಪದವೂ ಕುಂಬಾರಣ್ಣನಿಗೆ ಮುದನೀಡುವುದಿಲ್ಲ.

ಜೊತೆಗೆ ಆಧುನಿಕ ಸಾಮಾಜಿಕ ಸಂಸ್ಥೆಗಳ ಸೌಲಭ್ಯಗಳಾದ ಬ್ಯಾಂಕಿಂಗ್, ಸಂಪರ್ಕ ಸಾಧನಗಳ ಮಾಹಿತಿಕೊರತೆಯಿಂದ ಸಾಮಾಜಿಕ ಅಭಿವೃದ್ಧಿ ಯೋಜ(ಚ)ನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಇತ್ತೀಚಿಗೆ ಅಭಿವೃದ್ಧಿ ಸಾಧಿಸಲು ಪ್ರಯತ್ನಿಸುತ್ತಿದ್ದಾರೆ.

### ೩.೬.೨ ಕಮ್ಮಾರಿಕೆ :

'ಕಾಸಿ ಕಮ್ಮಾರನಾದ...' ಎಂಬ ವಚನದ ಸಾಲು ಕಬ್ಬಿಣವನ್ನು ಕಾಯಿಸಿ ಮಾಡುವ ಕಸಬುದಾರ ಎಂಬುದನ್ನು ಹೇಳುತ್ತದೆ. ಕಂಬಾರ, ಕರ್ಮಹರ, ಲೋಹಾರ, ಕಂಮಾರ ಎಂತಲೂ ಶಿಲಾಶಾಸನ, ಕನ್ನಡ ವ್ಯಾಕರಣ ಹಾಗೂ ಕಾವ್ಯಗಳಲ್ಲಿ ಕರೆಯಿಸಿಕೊಳ್ಳುವ ಕಮ್ಮಾರರದು ಕಬ್ಬಿಣದಿಂದ ಬೇಟೆಯಾಡಲು ಬಳಸುವ ಆಯುಧಗಳು, ಕೃಷಿ, ಕೈಗಾರಿಕೆ, ಗೃಹ ಬಳಕೆ, ಕಟ್ಟಡಗಳ ನಿರ್ಮಾಣ, ಯುದ್ಧೋಪಕರಣಗಳನ್ನು ತಯಾರಿಸುವ ಕಸಬುದಾರರೇ ಕಮ್ಮಾರರು. ಗ್ರಾಮೀಣ ಪರಿಸರದಲ್ಲಿ ಅದರಲ್ಲೂ ಕೃಷಿಕನಿಗಂತೂ ಕಮ್ಮಾರರು ಅತ್ಯವಶ್ಯಕವಾಗಿರುವ ಬಹು ಮುಖ್ಯ ಕಸಬುದಾರರಾಗಿದ್ದು, ಆಯಗಾರರಲ್ಲಿ ಇವರಿಗೂ ಪ್ರಮುಖ ಸ್ಥಾನವಿತ್ತು. ಈಗಲೂ ಇಂತಹ ಕಮ್ಮಾರರನ್ನು ಸಾಮಾನ್ಯವಾಗಿ ಕುಷ್ಟಗಿ ಪರಿಸರದ ಎಲ್ಲ ಗ್ರಾಮಗಳಲ್ಲೂ ಕಾಣಬಹುದು.

"ಕರ್ಮ ಎಂಬ ಶಬ್ದದಿಂದಲೇ 'ಕಮ್ಮಾರ' ಎಂಬ ಶಬ್ದದ ಉತ್ಪತ್ತಿಯಾದಂತಿದೆ. ಕಮ್ಮಾರ ಎಂಬುದು ಕರ್ಮಕಾರ ಎಂಬ ಶಬ್ದದ ತದ್ಭವ. ಕರ್ಮ+ಕಾರ→ಕಮ್ಮಾರ ಎಂದು ಈ ಶಬ್ಧದ ನಿಷ್ಪತ್ತಿ."[೪೬]

ಕರ್ಮ+ಕಾರ→ಕರ್ಮಕಾರ →ಕರ್ಮಗಾರ →ಕಮ್ಮಾರ ಎಂಬ ಪದನಿಷ್ಪತ್ತಿಯನ್ನು ಒಪ್ಪಬಹುದಾಗಿದೆ. ಕಮ್ಮಾರರು ಮೂಲಯಃ ವಿಶ್ವಕರ್ಮಿಗಳ ಪಂಥಿಯಲ್ಲಿಯೇ ಬರುತ್ತಾರೆ. ಪಾಂಚಾಳರ ಗುಂಪಿಗೆ ಸೇರುವ ಇವರ ಕುಲದೈವ ಕಾಳಿಕಾದೇವಿಯಾಗಿದ್ದು, ಮಹಾಕಾಳಿ ಇವರ ಕಸಬುದೇವತೆಯಾಗಿರುವುದು ವಿಶೇಷ. ಅಮವಾಸೆ ಇವರ ಕೆಲಸಕ್ಕೆ ಬಿಡುವಿನ ದಿನವಾಗಿದ್ದು, ಕುಲುಮೆಯನ್ನೂ ಪೂಜಿಸುವ ಇವರು ಉಗಾದಿಯಲ್ಲಿ ಐದು ದಿವಸ ಕೆಲಸ ಮಾಡುವುದಿಲ್ಲ. ದೀಪಾವಳಿಯ ಆಯುಧ ಪೂಜೆಯಂದು ತಮ್ಮ ಸಲಕರಣೆಗಳನ್ನೆಲ್ಲಾ ಪೂಜಿಸುವುದೂ ಉಂಟು.

**ತಯಾರಿಸುವ ವಸ್ತುಗಳು** : ಹಿಂದೆ ಯಂತ್ರಗಳನ್ನು ಒಕ್ಕಲುತನದಲ್ಲಿ ಬಳಸದಿರುವಾಗ ಕಮ್ಮಾರರ ಸಹಾಯ ಕೃಷಿಕನಿಗೆ ತುಂಬಾ ಅಗತ್ಯವಾಗಿತ್ತು. ಬಂಡಿಯ ಹಳಿ, ಗಾಲಿಯ ಕುಂಭದ ಕಟ್ಟು, ಚಕ್ರದ ಕೀಲು, ಸಲಿಕೆ, ಗುದ್ದಲಿ, ಪಿಕಾಸಿ, ಹಾರೆ, ಕುಡಗೋಲು, ಕುರ್ಜಿಗೆ, ಕಬ್ಬಿಣದ ನೇಗಿಲು, ನೇಗಿಲ ಕುಳ, ಕುಡ, ಬಾಯಿಗುದ್ದಲಿ, ಎತ್ತಿನ ಕಾಲಿನ ನಾಲು, ಮೇವು ಕತ್ತರಿಸುವ ಈಳಿಗೆ ಮುಂತಾದವುಗಳನ್ನು ತಯಾರಿಸುತ್ತಿದ್ದನು. ಹಾಗೆಯೇ ಕಿಟಕಿಯ ಸರಳು, ಚಿಲಕ, ಲಳಗಿ, ಅಗಳಿ, ಕಬ್ಬಿಣದ ಗೂಟ ಇತ್ಯಾದಿಗಳನ್ನು ತಯಾರಿಸಿಕೊಡಲು ಮನೆಗಳ ನಿರ್ಮಾಣದಲ್ಲೂ; ಚಾಕು, ಚೂರಿ, ಇಕ್ಕಳ, ಕಬ್ಬಿಣದ ಒಲೆ,ಹೆಂಚು, ಒನಕೆ ಬಳೆ, ಈಳಗಿ, ಊದುಗೊಳವೆ, ಕೀಲಿ ಪತ್ತ ಹಾಗೂ ಕೀಲಿ ಕೈ ಮುಂತಾದ ಗೃಹ ಬಳಕೆಯ ವಸ್ತುಗಳ ತಯಾರಿಕೆಯಲ್ಲೂ ಕಮ್ಮಾರರ ಕೌಶಲ್ಯ ಅತ್ಯಗತ್ಯವಾಗಿತ್ತು. ಬೇರೆ ಬೇರೆ ಕಸಬುದಾರರಿಗೂ ಇವರ ಸಹಾಯ ಬೇಕಿತ್ತು. ಕ್ಷೌರಿಕರ ಕತ್ತರಿ, ಕತ್ತಿ; ಬಡಿಗನಿಗೆ ಬೇಕಾಗುವ ಉಳಿ, ಗರಗಸ, ಬಾಚಿ; ಶಿಲ್ಪಿ ಹಾಗೂ ಕಲ್ಲುಕುಟಿಗನಿಗೆ ಬೇಕಾಗುವ ಸುತ್ತಿಗೆ, ಚಾಣ; ಅಕ್ಕಸಾಲಿಗನಿಗೆ ಬೇಕಾಗುವ ಇಕ್ಕಳ, ಚಿಮ್ಮಟ, ಸುತ್ತಿಗೆ; ಚಮ್ಮಾರನಿಗೆ ಬೇಕಾಗುವ ರೆಂಪಿ, ಡಬ್ಬಣದುಳಿ; ವಡ್ಡರಿಗೆ ತೂಗು ಗುಂಡು, ತ್ಯಾಪಿ, ಮೂಲಿ ಮಟ್ಟಲಗಿ ಇತ್ಯಾದಿಗಳನ್ನು ತಯಾರಿಸಿಕೊಡುತ್ತಾ ಇತರೆ ಕಸಬುದಾರರಿಗೂ ಸಹಾಯಕರಾಗಿದ್ದಾರೆ. ಇವುಗಳಲ್ಲದೇ ರಾಜರ ಕಾಲದಲ್ಲಿ ಯುದ್ಧದ ಸಲಕರಣೆಗಳನ್ನು ತಯಾರಿಸುತ್ತಿದ್ದರು. "ರಾಜಶೇಖರ ವಿಳಾಸದ 'ಮದನನ ಬಾಣಾವಳಿಯಂ ಕಾಸಲ್ ಚೈತ್ರೋಜ್ವಳ ಕಾರು ನಿಟ್ಟ ಕಮ್ಮಟಂ

ಬೋಲ್' ಎಂಬ ಉಕ್ತಿಯ ಆಧಾರದಿಂದ ಕಾರುಕರು(ಕಮ್ಮಾರರು) ಬಾಣಗಳನ್ನು ಉತ್ಪಾದಿಸುತ್ತಿದ್ದರು. ಬಾಣಗಳನ್ನು ತಯಾರು ಮಾಡಲು ಅವರಿಗೆ ಕಾರ್ಯಾಗಾರಗಳಿರುತ್ತಿದ್ದವು. ಕಮ್ಮಾರರನ್ನು ಬಾಣ ಮೊದಲಾದ ಆಯುಧಗಳನ್ನು ತಯಾರಿಸುವ ಕಾರ್ಯಾಗಾರಗಳನ್ನು ಕಮ್ಮಟಗಳೆಂದು ಕರೆಯಲಾಗುತ್ತಿತ್ತು. 'ಕಮ್ಮಜಸಾಲೆ' ಎಂದೂ ಕೂಡಾ ಕರೆಯುತ್ತಿದ್ದರು."[೪೭]

ಹೀಗೆ ಕಮ್ಮಾರನ ಕುಲುಮೆಯಲ್ಲಿ ತಯಾರಾಗುವ ಕಬ್ಬಿಣದ ಸಾಧನಗಳಿಗೆಲ್ಲಾ ಆತನ ಜ್ಞಾನಾನುಭವ ಹಾಗೂ ಕೌಶಲಗಳೇ ಆಧಾರ. ಕೇವಲ ತಯಾರಿಸುವುದಷ್ಟೇ ಆತನ ಕೆಲಸವಾಗಿರದೇ ಮುರಿದ ವಸ್ತುಗಳನ್ನು ಬೆಸುಗೆ ಹಾಕಿಕೊಡುತ್ತಾನೆ. ಹೀಗೆ ಬೆಸುಗೆ ಹಾಕಿಕೊಡುವ ಕಮ್ಮಾರನ ಜೀವನ ರೈತ, ಉದ್ಯಮಿ ಹಾಗೂ ಇಡೀ ಸಮಾಜದೊಂದಿಗೆ ಬೆಸೆದುಕೊಂಡಿದೆ.

**ಆತಂಕ** : ಕಮ್ಮಾರರು ತಯಾರಿಸಿದ ವಸ್ತುಗಳನ್ನು ಇವತ್ತು ರೈತರೂ ಬಳಸುತ್ತಿಲ್ಲ! ಅವರೆಲ್ಲಾ ಈಗ ದೊಡ್ಡ ದೊಡ್ಡ ಕಾರ್ಖಾನೆಗಳಲ್ಲಿ ತಯಾರಾದ ಸಿದ್ಧ ವಸ್ತುಗಳಿಗೆ ಮರುಳಾಗಿದ್ದಾರೆ. ಹೀಗಾಗಿ ಪಾರಂಪರಿಕ ಕಸಬಿನಿಂದ ಕಮ್ಮಾರ ಹಿನ್ನಡೆಗೊಳಗಾಗಿದ್ದಾನೆ.

ಇತ್ತೀಚಿಗೆ ಕಮ್ಮಾರ ಸಮುದಾಯವಲ್ಲದೇ, ಬಯಲು ಕಮ್ಮಾರರು ಹಾಗೂ ಇತರೆ ಸಮುದಾಯದವರೂ ಕಮ್ಮಾರಿಕೆಯಲ್ಲಿ ತೊಡಗಿಕೊಂಡಿದ್ದಾರೆ. ಉದಾಹರಣೆಗೆ ಸಿಖ್ ಸಮುದಾಯದವರು ಚಾಕು, ಮಚ್ಚು, ಸೇರು, ಪಾವುಗಳನ್ನು ತಯಾರಿಸಿ ಮಾರುವುದರಿಂದ ಇದೀಗ *ಕಮ್ಮಾರಿಕೆ ಕುಲ ಕಸಬಾಗಿರದೇ ಪಾರಂಪರಿಕ ಕಸಬಾಗಿದೆ!* ಈ ಕ್ಷೇತ್ರದಲ್ಲಿಯೂ ಕಾರ್ಖಾನೆಗಳಲ್ಲಿ ತಯಾರಾದ ಲೋಹದ, ಫೈಬರ್ ಹಾಗೂ ಪ್ಲಾಸ್ಟಿಕ್‌ಗಳಿಂದ ತಯಾರಾದ ಅನೇಕ ಸಿದ್ಧವಸ್ತುಗಳು ಮಾರುಕಟ್ಟೆಯಲ್ಲಿ ಲಭ್ಯವಿರುವುದರಿಂದ ಅವಸಾನದ ಅಂಚಿನಲ್ಲಿದೆ ಎಂಬುದು ಸ್ಪಷ್ಟವಾಗುತ್ತದೆ. ಆಧುನಿಕ ಶಿಕ್ಷಣ ಪಡೆಯದ ಸ್ಥಿತಿ, ಸಾಮಾಜಿಕ ಸಂಸ್ಥೆಗಳ ಸೌಲಭ್ಯಗಳಾದ ಬ್ಯಾಂಕಿಂಗ್, ಸಂಪರ್ಕ ಸಾಧನಗಳ ಮಾಹಿತಿ ಕೊರತೆಯಿಂದ ಸಾಮಾಜಿಕ ಅಭಿವೃದ್ಧಿ ಯೋಜ(ಚ)ನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಇತ್ತೀಚಿಗೆ ಅಭಿವೃದ್ಧಿ ಸಾಧಿಸಲು ಪ್ರಯತ್ನಿಸುತ್ತಿದ್ದಾರೆ.

## ೩.೬.೩ ಪತ್ತಾರಿಕೆ :

ಮಾನವನಿಗೆ ಆಹಾರ, ವಸತಿ, ಉದ್ಯೋಗ ಲಭ್ಯವಾದ ನಂತರ ಸೌಂದರ್ಯಪ್ರಜ್ಞೆ ಬೆಳೆಯಿತು. ಮಾನವ ತನ್ನನ್ನು ತಾನು ಪ್ರೀತಿಸಿಕೊಂಡಷ್ಟು ಇನ್ನಾರನ್ನೂ ಪ್ರೀತಿಸುವುದಿಲ್ಲ ಎಂಬ ಮಾತಿನಂತೆ ತನ್ನ ದೇಹ ಸೌಂದರ್ಯವನ್ನು ಹೆಚ್ಚಿಸಿಕೊಳ್ಳಲು ಅಲಂಕಾರಿಕಾ ವಸ್ತುಗಳನ್ನು ಸೃಷ್ಟಿಸತೊಡಗಿದನು. ಆ ಅಲಂಕಾರಿಕಾ ವಸ್ತುಗಳಲ್ಲಿ ಆಭರಣಗಳೇ ಪ್ರಮುಖ ಸ್ಥಾನ ಪಡೆದಿವೆ. ಪ್ರಾಚೀನ ನಾಗರಿಕತೆಯ ಕಾಲದಿಂದಲೂ ಅಲಂಕಾರಿಕೆ ಇದ್ದುದನ್ನು ಇತಿಹಾಸ ತಿಳಿಸುತ್ತದೆ.

ಬಂಗಾರ ಬಳಿ ನಾಲ್ಕು ಸಾಕು ನನ ಬಲಗೈಗೆ
ನಾಲಕ್ವರಹದ ವಾಲಿ ಹೂ ಬುಗುಡಿ । ಗೆಜ್ಜಿ ಟೀಕಿ
ಸಾಕು ತವರವರು ಬಡವರು

ಈ ಜನಪದವು ನಮ್ಮ ಜನಪದರು ಎಂತಹ ಆಭರಣಪ್ರಿಯರು ಎಂಬುದನ್ನು ತಿಳಿಸುತ್ತದೆ. ಎಂತಹ ಬಡವರಾದರೂ ಇಷ್ಟು ಬೇಕು ಎಂಬುದನ್ನು ತಿಳಿಸುತ್ತದೆ. ಬಡವ, ಬಲ್ಲಿದನೆಂಬ ಬೇಧ ಭಾವವಿಲ್ಲದೇ ಅವರವರ ಅನುಕೂಲಕ್ಕೆ ತಕ್ಕ ಆಭರಣಗಳನ್ನು ಮಾಡಿಕೊಡುವ ಪತ್ತಾರಿಕೆ ತುಂಬಾ ಜನಪ್ರಿಯ ಕಸಬುಗಳಲ್ಲಿ ಅಗ್ರಸ್ಥಾನದಲ್ಲಿದೆ.

ಕುಶಲಕರ್ಮಿ ಎಂಬ ಪದಕ್ಕೆ ಅನ್ವರ್ಥವೇ ಪತ್ತಾರರ ಕಸಬು ಎನ್ನುವಷ್ಟರ ಮಟ್ಟಿಗೆ ಜನಜನಿತವಾಗಿದೆ. ಚಿನ್ನ, ಬೆಳ್ಳಿಯ ಆಭರಣಗಳನ್ನು ಮಾಡಿಕೊಡುವ, ರಿಪೇರಿ ಮಾಡಿಕೊಡುವ ಕಸಬಿನವರನ್ನು ಪತ್ತಾರರು ಎನ್ನುತ್ತಾರೆ.

ಕಂಚಿಯ ಫಲ ಲೇಸು ಮಿಂಚು ಮುಗಿಲಿಗೆ ಲೇಸು
ಕೆಂಚನ ಹೆಣ್ಣು ಇರಲೇಸು । ಊರಿಗೊಬ್ಬ
ಪಂಚಾಳ ಲೇಸು ಸರ್ವಜ್ಞ

ಸರ್ವಜ್ಞ ಕವಿಯ ಈ ತ್ರಿಪದಿಯು ಪಾಂಚಾಳರು ಊರಿಗೆ ಎಷ್ಟು ಮುಖ್ಯ ಎಂಬುದನ್ನು ಒತ್ತಿ ಹೇಳುತ್ತದೆ. ಪಾಂಚಾಳರಲ್ಲಿ ಪ್ರಮುಖವಾಗಿರುವ ಅಕ್ಕಸಾಲಿಗರು( ಇನ್ನಿತರರು ಬಡಗಿ, ಕಮ್ಮಾರ, ಶಿಲ್ಪಿ, ಕಂಚುಗಾರ) ಸಂಪ್ರದಾಯದ ಮಂಗಲಕಾರ್ಯಗಳಲ್ಲಿ ತುಂಬಾ ಮುಖ್ಯವಾಗಿ ಕಾಣುತ್ತಾರೆ. ಮದುವೆಯಲ್ಲಿ ತಾಳಿ, ಕಾಲುಂಗುರಗಳ ಜೊತೆಗೆ

ವಧು-ವರರಿಗೆ ಒಡವೆ, ಮಗುವಿಗೆ ಮುರುವು, ಒಡವೆಗಳನ್ನು ಕಾಣಿಕೆಯಾಗಿ ನೀಡುವಾಗ ಅಕ್ಕಸಾಲಿಗರೆ ಅಕ್ಕರೆಯ ಕಸಬುದಾರರಾಗುತ್ತಾರೆ.

ಈ ಪತ್ತಾರರನ್ನು ಅಕ್ಕಸಾಲಿಗರು, ಚಿನಿವಾರರು, ಓಜರು, ಸೋನಾರರು, ಎಂದೂ ಕರೆಯುತ್ತಾರೆ. ಆಭರಣ ತಯಾರಿಸುವ ಸ್ಥಳವನ್ನು ಅರ್ಕಸಾಲಿ ಎಂದು ಕರೆಯುತ್ತಾರೆ. ಬಹುಶಃ ಅರ್ಕಸಾಲಿಯಿಂದ ಅಕ್ಕಸಾಲಿ ಪದನಿಷ್ಪತ್ತಿಯಾಗಿರಬಹುದು. "ಬಂಗಾರದ ಆಭರಣಗಳನ್ನು ಮಾಡುವ ಸ್ಥಳವನ್ನು ಕೌಟಿಲ್ಯ ತನ್ನ ಅರ್ಥಶಾಸ್ತ್ರದಲ್ಲಿ 'ಅಕ್ಷಶಾಲೆ' ಎಂದು ಪ್ರಸ್ತಾಪಿಸಿದ್ದಾನೆ. ಈ ಅಕ್ಷಸಾಲೆಗೆ 'ಇಗ' ಕನ್ನಡ ಪ್ರತ್ಯಯ ಸೇರಿ ತದ್ಭವವಾದಾಗ 'ಅಕ್ಕಸಾಲಿಗ' ಆಗುತ್ತದೆ ಎಂದು ಊಹೆಯೊಂದಿದೆ."[೪೮]

**ತಯಾರಿಸುವ ಆಭರಣಗಳು :** ಓಲೆ, ಮೂಗುತಿ, ಬುಗುಡಿ, ಸರ, ಲಕ್ಷ್ಮೀಸರ, ಚಂದ್ರಹಾರ, ಬುಲಾಕು, ಬುಗುಡಿ, ನತ್ತು, ಡಾಬು, ತೋಡ, ಕಂಠೀಹಾರ, ಕಾಲುಂಗುರ, ಮಾಂಗಲ್ಯ, ಕೈಗಡಗ, ಕಾಲ್ಗಡಗ, ಉಡುದಾರ, ಕಾಲ್ಗೆಜ್ಜೆ, ಉಂಗುರ, ತೋಳಿನ ಆಭರಣ, ಬೈತಲೆ ಬಟ್ಟು, ಬೈತಲೆ ಸರ, ಗೋಟು, ಪಾಟಲಿ, ವಂಕಿ ಉಂಗುರು, ನಾಗರ ಉಂಗುರ, ಮುರುವು, ಝುಮುಕಿ, ಲೋಲಾಕು, ಅಂಗಿಗಳಿಗೆ ಗುಂಡಿ, ಉಡುದಾರ, ಕಂಕಣ, ಹೀಗೆ ಅಂತಸ್ತಿಗೆ ತಕ್ಕಂತೆ ಆಭರಣಗಳನ್ನು ತಯಾರಿಸಿಕೊಡುವ ಕಸಬು ಪತ್ತಾರರದು.

**ಆತಂಕ :** ಪಾಂಚಾಳರಲ್ಲಿ ಪ್ರಮುಖ ಸ್ಥಾನವನ್ನು ಪಡೆದಿರುವ ಪತ್ತಾರಿಕೆ ದುಬಾರಿ ಕಚ್ಚಾವಸ್ತುವಿನ ಕಸಬಾಗಿದೆ. ಪ್ರಾಚೀನ ಕಾಲದಿಂದಲೂ ಗ್ರಾಮೀಣ ಬದುಕಿನೊಂದಿಗೆ ಬೆಸೆದುಕೊಂಡಿದ್ದ ಪತ್ತಾರಿಕೆಯ ಪತ್ತಾ(ವಿಳಾಸ) ಇತ್ತೀಚಿಗೆ ದೊಡ್ಡ ಊರುಗಳಿಗೆ ವರ್ಗಾವಣೆಗೊಂಡಂತೆ ಭಾಸವಾಗುತ್ತಿದೆ. ಹೀಗಾಗಿ ಈ ಅಕ್ಕಸಾಲಿಗರು ಆಧುನಿಕತೆ ಎಂಬ ಬೆಳಕಿನ ಬೆಂಕಿಯಲ್ಲಿ ಬೇಯುತ್ತಿದ್ದಾರೆ.

ಈಗ 'ಹೆಣ್ಣು ನಡೆವ ತೇರು' ಎಂಬಂತಿಲ್ಲ. ಆಧುನಿಕ ಶಿಕ್ಷಣದ ಪ್ರಭಾವ, ಮಹಿಳೆಯರು ನೌಕರಿಗೆ ಹೋಗುತ್ತಿರುವುದು, ರಕ್ಷಣೆಯ ಭಯ ಮುಂತಾದ ಕಾರಣದಿಂದ ಆಭರಣ ಪ್ರಿಯಳಾದ ಮಹಿಳೆ ಸರಳ ಜೀವನ, ಉದಾತ್ತ ಚಿಂತನೆ ಎಂಬ ತತ್ವಕ್ಕೆ ಮನಸೋತಂತಿದೆ. ಒಟ್ಟಿನಲ್ಲಿ ಆಧುನಿಕ ಮಹಿಳೆ ವಿಶೇಷ ಸಂದರ್ಭಗಳನ್ನು ಹೊರತುಪಡಿಸಿ ನಿರಾಭರಣ ಸುಂದರಿಯಾಗಿರಲು ಇಚ್ಛಿಸುತ್ತಾಳೆ. ಒಂದೆಳೆ ಸರ, ಒಂದು ಬಳೆ, ಒಂದು ಉಂಗುರಕ್ಕೇ ತನ್ನ ದಿನ ನಿತ್ಯದ ತೊಡುಪುಗಳನ್ನು ಸೀಮಿತಗೊಳಿಸಿದ್ದಾಳೆ.

ತುಟ್ಟಿಯಾದ ಹಳದಿ ಲೋಹ ಇಂದು ಅನೇಕ ಆಭರಣ ಪ್ರಿಯರನ್ನು ನಿರಾಸೆಯ ಮಡುವಿನಲ್ಲಿ ಮುಳುಗಿಸಿದೆ. ಈಗೀಗ ಕುಷ್ಟಗಿ ಪರಿಸರದ ಪಟ್ಟಣದಲ್ಲಿ ಸಿದ್ಧ ಆಭರಣ ಮಳಿಗೆಗಳದೇ ಕಾರುಬಾರು. ಗ್ರಾಮೀಣ ಸೊಗಡಿನ ಕಸಬುದಾರನ ಪತ್ತಾರಿಕೆ ಈಗ 'ಅಕ್ಷಯ ತೃತಿಯ' ದಿನವನ್ನೇ ಇದಿರು ನೋಡುವಂತಾಗಿದೆ! ಜೊತೆಗೆ ಆಧುನಿಕ ಸಾಮಾಜಿಕ ಸಂಸ್ಥೆಗಳ ಸೌಲಭ್ಯಗಳಾದ ಬ್ಯಾಂಕಿಂಗ್, ಸಂಪರ್ಕ ಸಾಧನಗಳ ಮಾಹಿತಿಕೊರತೆಯಿಂದ ಸಾಮಾಜಿಕ ಅಭಿವೃದ್ಧಿ ಯೋಜ(ಚ)ನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಇತ್ತೀಚಿಗೆ ಅಭಿವೃದ್ಧಿ ಸಾಧಿಸಲು ಪ್ರಯತ್ನಿಸುತ್ತಿದ್ದಾರೆ. ಇದೀಗ ಬೇರೆ ಬೇರೆ ಜನಾಂಗದವರೂ ಸಿದ್ಧ ಆಭರಣ ಮಳಿಗೆಗಳನ್ನಿಟ್ಟುಕೊಂಡು ಉದ್ದಿಮೆಯನ್ನು ಸಾಗಿಸುತ್ತಿರುವುದರಿಂದ ಪತ್ತಾರಿಕೆ ಕೇವಲ ಅಕ್ಕಸಾಲಿಗರ ಕುಲಕಸಬಾಗಿ ಉಳಿದಿಲ್ಲ, ಬದಲಾಗಿ ಪಾರಂಪರಿಕ ಕಸಬಾಗಿ ಪರಿವರ್ತನೆಗೊಳ್ಳುತ್ತಿದೆ! ಬಂಡವಾಳಶಾಹಿಗಳು ಹಾಗೂ ಶ್ರೀಮಂತರು ಹೈಟೆಕ್ ಜುಯೆಲರಿ ಪಾರ್ಕ್‌ಗಳನ್ನು ಹೊಂದಿದ್ದರಿಂದ ಪಾರಂಪರಿಕ ಕಸಬುದಾರರಾದ ಪತ್ತಾರರು ಸಣ್ಣ ಸಣ್ಣ ಅಂಗಡಿಗಳಲ್ಲಿ ಮೂಗುತಿ, ಮಾಂಗಲ್ಯ, ಚೈನು, ಓಲೆ, ಉಂಗುರಗಳಿಗೆ ಮೀಸಲಾದಂತೆ ಭಾಸವಾಗುತ್ತಿದ್ದಾರೆ. ಇನ್ನುಳಿದವರು ದೊಡ್ಡ ದೊಡ್ಡ ಮಾರಾಟ ಮಳಿಗೆಗಳಲ್ಲಿ ಲೆಕ್ಕ ಬರೆಯುವ ಇಲ್ಲವೇ ಸಣ್ಣ ಪುಟ್ಟ ಚಿನ್ನ – ಬೆಳ್ಳಿಯ ಕೆಲಸ ಮಾಡುವ ದಿನಗೂಲಿ ಆಳಾಗಿ ದುಡಿಯುತ್ತಿದ್ದಾರೆ.

**೩.೬.೪ ಬಡಗಿತನ :**

ಕಟ್ಟಿಗೆ ಅಥವಾ ಮರದಿಂದ ಉಪಯುಕ್ತ ವಸ್ತುಗಳನ್ನು ತಯಾರಿಸುವ ಕಸಬನ್ನು ಬಡಗಿತನ ಎಂದು ಕರೆಯುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ರೈತನ ಸಹಾಯಕನಾಗಿರುವ ಬಡಿಗ ಗೃಹ ನಿರ್ಮಾಣ ಹಾಗೂ ಗೃಹ ಬಳಕೆಯ ವಸ್ತುಗಳನ್ನೂ ತಯಾರಿಸಿಕೊಡುವ ಹಾಗೂ ರಿಪೇರಿ ಮಾಡಿಕೊಡುವ ಕೆಲಸವನ್ನೂ ಮಾಡುತ್ತಾನೆ. ಮೂಲತಃ ವೃತ್ತಿಯಾಗಿದ್ದ ಬಡಗಿತನ ಕಸಬು ತದನಂತರ ಜಾತಿ(ಕುಲ)ಯಾಗಿ ಪರಿವರ್ತನೆಗೊಂಡಿತು. "ಬಡಗಿ → ಬಡಿಗೇರ → ಬಡಿಗ್ಯಾರ ಎಂಬ ಅಚ್ಚಕನ್ನಡದ ಮಾತು, ಸಂಸ್ಕೃತದ ವರ್ಧ (ಕತ್ತರಿಸು, ಕಡಿ), ವರ್ಧಕ → ವದ್ದಕ → ಒಡ್ಡಕಿ(ಗಿ) ಮುಂತಾಗಿ ಬೆಳೆದು ಬಂದಿರಬಹುದೆಂಬುದನ್ನು ಭಾಷಾಶಾಸ್ತ್ರದ ದೃಷ್ಟಿಯಿಂದ ಸ್ಥಾಪಿಸಲೆತ್ನಿಸಿದರೂ ಜನಬಳಕೆಯ ಹಾಗೂ ಚಾರಿತ್ರಿಕ ಉಪಯೋಗಗಳನ್ನು ಗಮನಿಸಿದರೆ ಬಡಗಿ → ಬಡ+ಕಿ(ಗಿ) ಅಚ್ಚ ಕನ್ನಡವೆಂದು ತೋರುತ್ತದೆ."[೪೯]

ಹಡಗು ಗಾಳಿಗೆ ಲೇಸು ಗುಡುಗು ಮುಗಿಲಿಗೆ ಲೇಸು
ಒಡಹುಟ್ಟಿದಣ್ಣ ಇರಲೇಸು । ಊರಿಗೊಬ್ಬ
ಬಡಗಿಯೇ ಲೇಸು ಸರ್ವಜ್ಞ.

ಸರ್ವಜ್ಞ ಕವಿಯ ಈ ತ್ರಿಪದಿಯು ಊರಿಗೆ ಬಡಗಿಯ ಅವಶ್ಯಕತೆಯನ್ನು ತಿಳಿಸುತ್ತದೆ.

**ತಯಾರಿಸುವ ವಸ್ತುಗಳು** : ಬಡಗಿಯು ರೈತರು ತಂದ ಕಟ್ಟಿಗೆಯಿಂದಲೇ ಗೃಹಬಳಕೆಯ ವಸ್ತುಗಳಾದ ಕುಳಿತುಕೊಳ್ಳುವ ಮಣೆ, ಈಳಿಗೆ ಮಣೆ, ರೊಟ್ಟಿ ಕೊಣಗಿ, ಚಕ್ಕಲಿ ಒರಳು, ತೊಟ್ಟಿಲು, ಮುದ್ದೆಕೋಲು, ಕಡಗೋಲು, ಒನಕೆ, ಪೆಟ್ಟಿಗೆ, ಕಪಾಟು, ಹುಟ್ಟು, ಸವಟು ಹಾಗೂ ಲಟ್ಟಣಿಗೆಯಂತಹ ಅನೇಕ ವಸ್ತುಗಳನ್ನು ಮಾಡಿಕೊಡುತ್ತಾನೆ. ರೈತನಿಗಂತೂ ಈತನ ಸಹಕಾರ ಬೇಕೇ ಬೇಕು. ನೇಗಿಲು, ಕೂರಗಿ, ಕುಂಟೆ, ಬಂಡಿ, ನೊಗ, ಕೂರಗಿ ತಾಳ, ಕೂರಗಿ ಬಟ್ಟಲು, ಗುದ್ದಲಿ–ಸಲಿಕೆ–ಕೊಡಲಿ–ಬಾಚಿ–ಸುತ್ತಿಗೆ ಮುಂತಾದ ಸಲಕರಣೆಗಳಿಗೆ ಕಾವುಗಳನ್ನು ಮಾಡಿಕೊಡುವುದಲ್ಲದೇ; ಚುಳುಕಿ – ಕುಡುಗೋಲು – ಕುರ್ಜಿಗಿ – ಮಚ್ಚುಗಳಿಗೆ ಹಿಡಿಕೆಗಳನ್ನೂ ಮಾಡಿಕೊಡುತ್ತಾನೆ. ಮನೆಗಳನ್ನು ಕಟ್ಟಲು ತಲೆಬಾಗಿಲು, ಬಾಗಿಲು, ಕಿಟಕಿ, ಕದ, ಕಂಬ, ಜಂತಿ, ನಾಗಂದಿಗೆ, ಅಗಳಿ, ಅಟ್ಟ, ಅಟ್ಟಕ್ಕೆ ಅಥವಾ ಉಪ್ಪರಿಗೆಗೆ ಮೆಟ್ಟಿಲುಗಳು, ನಿಚ್ಚಣಿಕೆ ಮುಂತಾದವುಗಳಲ್ಲದೇ ಪೀಠೋಪಕರಣಗಳಾದ ಕುರ್ಚಿ, ಮೇಜು, ಸ್ಟೂಲು, ಟೀಪಾಯಿ, ದಿವಾನ ಕಾಟ್, ಮಂಚ, ತೂಗು ಮಂಚಗಳನ್ನೂ ಮಾಡಿಕೊಡುತ್ತಾನೆ. ಮಕ್ಕಳ ಆಟಿಕೆ ಸಾಮಗ್ರಿಗಳು, ದೇವ–ದೇವತೆಯರ ವಿಗ್ರಹಗಳು, ಪಲ್ಲಕ್ಕಿ, ರಥ, ಉಚ್ಚಾಯಿ ಕೊನೆಗೆ ಶವ ಸಂಸ್ಕಾರಕ್ಕೆ ಬೇಕಾಗುವ ಚಟ್ಟಗಳನ್ನೂ ತಯಾರಿಸುವವ ಬಡಿಗ. ಹೀಗೆ ಹುಟ್ಟಿನಿಂದ ತೊಟ್ಟಿಲು; ಸತ್ತಾಗ ಚಟ್ಟ ತಯಾರಿಸುವಂತಹ ಜವಾಬ್ದಾರಿಯುತ ಕಸಬು ಇದು.

**ಆಧುನೀಕರಣದ ಗಾಳಿ ಮತ್ತು ಊರ್ಧ್ವಮುಖ** : ಈಗೀಗ ಬಡಗಿತನಕ್ಕೂ ಆಧುನೀಕರಣದ ಗಾಳಿ ಸೋಂಕಿದೆ. ಕಟ್ಟಿಗೆಯ ಸಿದ್ಧ ವಸ್ತುಗಳು ಕಾರ್ಖಾನೆಗಳಿಂದ ಮಾರುಕಟ್ಟೆಗೆ ನುಗ್ಗಿವೆ. ಬಡಗಿ ಯಂತ್ರಗಳನ್ನು ಬಳಸಿಕೊಳ್ಳುವುದು ಅನಿವಾರ್ಯವಾಗಿದೆ. ಅಲ್ಲದೇ ಬಡಗಿ ವೃತ್ತಿಯು ಇಂದು ಕೇವಲ ಕುಲಕಸಬಾಗಿ ಉಳಿದಿಲ್ಲ; ಇದಕ್ಕೂ ಬೇರೆ ಬೇರೆ ಸಮುದಾಯ ಕಾಲಿಟ್ಟಿದೆ. ಹೀಗಾಗಿ ಬಡಗಿತನವೂ ಪಾರಂಪರಿಕ ಕಸಬಾಗಿ ಬೆಳೆಯುತ್ತಿದೆ. ಇಂದು ಬಡಗಿತನವೆಂಬ ಪಾರಂಪರಿಕ ಕಸಬು ಎಲ್ಲೆಡೆಯಂತೆ ಕುಷ್ಟಗಿ ಪರಿಸರದಲ್ಲಿಯೂ ಊರ್ಧ್ವಮುಖವಾಗಿ ಹೊರಟಿದೆ. ಬೇರೆ ಪಾರಂಪರಿಕ

ಕಸಬುಗಳಿಗಿದ್ದಷ್ಟು ಆತಂಕ ಈ ಕಸಬಿಗಿಲ್ಲ! ಆದರೂ ಆಧುನಿಕ ಸಾಮಾಜಿಕ ಸಂಸ್ಥೆಗಳ ಸೌಲಭ್ಯಗಳಾದ ಬ್ಯಾಂಕಿಂಗ್, ಸಂಪರ್ಕ ಸಾಧನಗಳ ಮಾಹಿತಿಕೊರತೆಯಿಂದ ಸಾಮಾಜಿಕ ಅಭಿವೃದ್ಧಿ ಯೋಜ(ಚ)ನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಇತ್ತೀಚಿಗೆ ಅಭಿವೃದ್ಧಿ ಸಾಧಿಸಲು ಪ್ರಯತ್ನಿಸುತ್ತಿದ್ದಾರೆ.

**೩.೬.೫ ಕೊರವರ ಕಸಬು :**

ಕರ್ನಾಟಕದಲ್ಲಿ ಅದರಲ್ಲೂ ಕುಷ್ಟಗಿ ಪರಿಸರದಲ್ಲಿ ಒಕ್ಕಲುತನಕ್ಕೆ ಸಹಾಯಕರಾಗಿ ಬದುಕುತ್ತಿರುವ ಬಡಿಗ, ಕಮ್ಮಾರ, ಕುಂಬಾರ, ಚಮ್ಮಾರ ಮುಂತಾದ ಅತ್ಯಗತ್ಯ ಕಸಬುದಾರರ ಸಾಲಿನಲ್ಲಿ ಕೊರವರೂ ಸೇರುತ್ತಾರೆ. ಕೊರವರು ಬುಡಕಟ್ಟು ಜನಾಂಗದಲ್ಲಿ ಒಬ್ಬರಾಗಿದ್ದು, ಸಾಮಾನ್ಯವಾಗಿ ಆಯಗಾರಿಕೆಯನ್ನು ಅವಲಂಬಿಸಿ ಬದುಕುತ್ತಿರುವ ಈ ಜನರು ತಮ್ಮದೇ ಆದ ವಿಶಿಷ್ಟ ಸಂಸ್ಕೃತಿ ಹಾಗೂ ಪರಂಪರೆಯಲ್ಲಿ ಬದುಕುತ್ತಿದ್ದಾರೆ.

"ತಮಿಳುನಾಡಿನ ಮೂಲದವರೆಂದು ಪರಿಗಣಿಸಲ್ಪಡುತ್ತಿರುವ ಕೊರವರು ಈ ಪರಿಸರದಲ್ಲಿ ತಮ್ಮ ಬೇರೆ ಬೇರೆ ವೃತ್ತಿಗಳಿಗನುಗುಣವಾಗಿ ಕೊರಮ, ಕೊರಚ, ಕೊರವಿ, ಕುಂಚಿಕೊರವ, ಕೊರಗ, ಭಜಂತ್ರಿ ಇತ್ಯಾದಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಲ್ಪಡುತ್ತಿದ್ದಾರೆ. ತಾಯಮ್ಮ, ಸುಂಕ್ಲೆಮ್ಮ, ಹುಲಿಗೆಮ್ಮ, ಯಲ್ಲಮ್ಮ, ಮಾರೆಮ್ಮ ದೇವಿಯರನ್ನು ಆರಾಧಿಸುತ್ತಾರೆ. ಕುಂಚು(ಚಿ)ಕೊರವರ ಭಾಷೆ ಹಾಗೂ ಕೊರವರ ಭಾಷೆ ವ್ಯತ್ಯಾಸದಿಂದ ಕೂಡಿದೆ. ಒಟ್ಟಾರೆ ಇವರಾಡುವ ಭಾಷೆಯಲ್ಲಿ ಕನ್ನಡ, ತಮಿಳು, ತೆಲುಗು ಎಲ್ಲವೂ ಸೇರಿದ 'ಕುಳಿರ್' ಭಾಷೆಯನ್ನು ಇವರು ಮಾತನಾಡುವುದರಿಂದ ಇವರ ಮೂಲ ಆಂಧ್ರ ಅಥವಾ ತಮಿಳುನಾಡು ಎಂದು ಊಹೆ ಮಾಡಬಹುದಾಗಿದೆ."[೫೦]

ಈಚಲು ಗರಿ ಹಾಗೂ ಗಣಿಕೆಯಿಂದ ತಯಾರಿಸುವ ವಸ್ತುಗಳನ್ನು ರೈತರಿಗೆ ನೀಡಿ ಧಾನ್ಯ ರೂಪದಲ್ಲಿ ಸಂಭಾವನೆ ಪಡೆಯುತ್ತಿದ್ದ ಭಜಂತ್ರಿ ಅಥವಾ ಕೊರವರ ಕಸಬನ್ನು ಇಲ್ಲಿ ವಿಶ್ಲೇಷಿಸಲಾಗಿದೆ. "ಇವರ ಸಾಕು ಪ್ರಾಣಿಗಳು ಕತ್ತೆ, ಹಂದಿಗಳಾಗುತ್ತವೆ. ಕತ್ತೆ ವೃತ್ತಿಗೆ ಸಹಾಯಕಾರಿಯಾಗಿದ್ದರೆ, ಹಂದಿ ಹಣ ಗಳಿಸಲು ಸಹಾಯಕಾರಿಯಾಗಿದೆ."[೫೧]

ಹಿಂದೂ ಧರ್ಮಾವಲಂಬಿಗಳಾದ ಇವರಿಗೆ ಬೇರೆ ಬೇರೆ ಹೆಸರುಗಳು ಬರಲು ಅವರ ವಿಭಿನ್ನ ವೃತ್ತಿಗಳು, ಪ್ರಾದೇಶಿಕ ಭಾಷೆಯ ಪ್ರಭಾವ ಹಾಗೂ ಮೇಲು-ಕೀಳಿನ ಭಾವನೆಗಳು ಕಾರಣಗಳಾಗಿವೆ.

**ತಯಾರಿಕೆ :** ಕುಷ್ಟಗಿ ಪರಿಸರದಲ್ಲಿನ ಕೊರವರು ಅಥವಾ ಭಜಂತ್ರಿಯವರು ಶಹನಾಯಿ ಊದುವ, ಹಲಗೆ, ಚೌಗಡ ಬಾರಿಸುವ ಕರಡಿಮಜಲು ವಾದ್ಯವೃಂದದ ಸಮುದಾಯದಂತಿದೆ. ಇತ್ತೀಚಿಗೆ ಬ್ಯಾಂಡ್‌ಬಾಜಿ ವಾದ್ಯವೃಂದದವರಾಗಿಯೂ ಪ್ರಗತಿ ಹೊಂದಿದ್ದಾರೆ. ಮದುವೆ, ಮುಂಜಿ, ಮೆರವಣಿಗೆಯಂತಹ ಮಂಗಲ ಕಾರ್ಯಗಳಲ್ಲಿ ಮಾತ್ರವಲ್ಲದೇ ಶವಸಂಸ್ಕಾರದಂತಹ ಕ್ರಿಯೆಗಳಲ್ಲೂ ವಾದ್ಯ ನುಡಿಸುತ್ತಾರೆ. ಮಹಿಳೆಯರು ಈಚಲು ಚಾಪೆ ಹೆಣೆಯುವುದು, ಈಚಲು ಕಸಬರಿಗೆಗಳನ್ನು ತಯಾರಿಸುತ್ತಾರೆ. ಪುರುಷರು ಅಗತ್ಯ ಬಿದ್ದರೆ ಸ್ತ್ರೀಯರೂ ಈಚಲು ಬುಟ್ಟಿಗಳನ್ನು, ಕೋಳಿ ಬುಟ್ಟಿ, ತಟ್ಟೆಗಳನ್ನು, ಜಲ್ಲೆಡಗಿ, ಧಾನ್ಯದ ಗಳಿಗಿ, ಬಳತಗಳು, ಬಂಡಿಯ ತಟ್ಟಿಗಳನ್ನು, ಗುಡಿಸಲುಗಳಿಗೆ ನೆರಿಕೆ (ತಡಿಕೆ) ಹೆಣೆಯುತ್ತಾರೆ. ಇವು ಕುಶಲಕಲೆಗಳೆಂದು ಕರೆಯಿಸಿಕೊಳ್ಳುವಲ್ಲಿ ಹಿಂದೆಬಿದ್ದಿಲ್ಲ.

ಕುಂಚಿಕೊರವರು ಹಂದಿ ಸಾಕಾಣಿಕೆ ಹಾಗೂ ಅವುಗಳ ಗೊಬ್ಬರ ಸಂಗ್ರಹಿಸಿ ರೈತರಿಗೆ ಮಾರುವುದನ್ನೇ ಕಸಬನ್ನಾಗಿಸಿಕೊಂಡಿದ್ದಾರಲ್ಲದೇ ಕೂದಲು ತುಂಬುವುದು, ನೆಲುವು, ಸಿಂಬೆ, ಚಿಕ್ಕ ಹೆಣೆಯುವ ಕೆಲಸವನ್ನು ಮಾಡುತ್ತಾರೆ. "ಕೊರವರ ವೃತ್ತಿಯಲ್ಲಿ ಹಂದಿಯ ಕೂದಲನ್ನು ಕಿತ್ತುವುದು ಒಂದು ವೃತ್ತಿಯಾಗಿದೆ. ಹಂದಿಯ ಕೂದಲಿಗೆ ಮಾರುಕಟ್ಟೆಯಲ್ಲಿ ಬಹಳ ಬೇಡಿಕೆಯಿದೆ. ಈ ಕೂದಲಿನಿಂದ ಗಡ್ಡ ಮಾಡಿಕೊಳ್ಳುವ, ಗೋಡೆಗೆ ಬಣ್ಣ ಬಳಿಯುವ ವರಹಕಟ್ಟು(ಬ್ರಶ್)ಗಳು ಸಿದ್ಧವಾಗುತ್ತವೆ."[೨೨]

ಸಿಂಧನೂರು, ಗಂಗಾವತಿ ಭಾಗದಲ್ಲಿ ಭತ್ತದ ಗದ್ದೆಗಳಲ್ಲಿ ಇಲಿಗಳ ಕಾಟ ಹೆಚ್ಚಾದಾಗ ಅವುಗಳನ್ನು ಹಿಡಿಯಲೂ ಕೆಲವು ಉಪಜನಾಂಗಗಳು ಬರುವುದುಂಟು.

**ಆತಂಕ :-** ಇತ್ತೀಚಿಗೆ ರೈತನ ಜೀವನ ಶೈಲಿಯೂ ಬದಲಾವಣೆ ಹೊಂದಿರುವುದರಿಂದ ಕೊರವರ ಜೀವನೋಪಾಯದ ಕಸಬೂ ಬದಲಾಗಿದೆ. ಕೊರವರು ತಯಾರಿಸುತ್ತಿದ್ದ ವಸ್ತುಗಳಿಗೆಲ್ಲಾ ಪರ್ಯಾಯವಾಗಿ ಪ್ಲಾಸ್ಟಿಕ್ ಹಾಗೂ ಫೈಬರ್, ಕಬ್ಬಿಣ ಮುಂತಾದ ಲೋಹಗಳ ವಸ್ತುಗಳು ಮಾರುಕಟ್ಟೆಯಲ್ಲಿ ಲಭ್ಯವಿರುವುದರಿಂದ ಕೊರವರ ಕಸಬುಗಳು ಆತಂಕಕ್ಕೊಳಗಾಗಿವೆ. ಹೀಗಾಗಿ ಮಹಿಳೆಯರು ಋತುಮಾನಕ್ಕನುಗುಣವಾಗಿ ಮಾರುಕಟ್ಟೆಗೆ ಬರುವ ಹಣ್ಣುಗಳನ್ನು ತಲೆ ಮೇಲೆ ಹೊತ್ತುಕೊಂಡೋ, ತಳ್ಳುಗಾಡಿಯಲ್ಲಿ ಇಟ್ಟುಕೊಂಡೋ ವ್ಯಾಪಾರವನ್ನು ಮಾಡುತ್ತಿದ್ದಾರೆ. ಕೆಲವರು ಉದ್ಯೋಗ ಅರಸಿಕೊಂಡು ನಗರಗಳತ್ತ ಮುಖಮಾಡಿದ್ದಾರೆ. ಜೊತೆಗೆ ಆಧುನಿಕ ಸಾಮಾಜಿಕ ಸಂಸ್ಥೆಗಳ ಸೌಲಭ್ಯಗಳಾದ

ಬ್ಯಾಂಕಿಂಗ್, ಸಂಪರ್ಕ ಸಾಧನಗಳ ಮಾಹಿತಿಕೊರತೆಯಿಂದ ಸಾಮಾಜಿಕ ಅಭಿವೃದ್ಧಿ ಯೋಜ(ಚ)ನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಇತ್ತೀಚಿಗೆ ಅಭಿವೃದ್ಧಿ ಸಾಧಿಸಲು ಪ್ರಯತ್ನಿಸುತ್ತಿದ್ದಾರೆ.

ಇವರ ವಾದ್ಯ ನುಡಿಸುವ ಕಸಬಿಗೂ ಸಂಚಕಾರ ಒದಗಿದ್ದು, ಈ ಕಸಬನ್ನು ಬೇರೆ ಬೇರೆ ಜನಾಂಗಗಳವರು ಗುಂಪು ಕಟ್ಟಿಕೊಂಡು ಮಾಡುತ್ತಿರುವುದರಿಂದ ಕಂಡುಬರುತ್ತಿರುವುದರಿಂದ ಕೊರವರ ಕುಲಕಸಬು ಸುರಕ್ಷಿತವಾಗಿಲ್ಲ.

**೩.೬.೬ ಮೇದಾರಿಕೆ :**

ಬಿದಿರು, ಬೊಂಬು, ಬೆತ್ತಗಳಿಂದ ಕೃಷಿ ಹಾಗೂ ಗೃಹಗಳಲ್ಲಿ ಉಪಯೋಗಿಸುವಂತಹ ಸಾಮಗ್ರಿಗಳನ್ನು ತಯಾರಿಸುವ ಕಸಬನ್ನು ಮ್ಯಾದಾರಿಕೆ ಎನ್ನುತ್ತಾರೆ. ಇಂದು ಮ್ಯಾದಾರರು ಹಳ್ಳಿ ಹಾಗೂ ಪಟ್ಟಣಗಳಲ್ಲಿ ವಾಸಿಸುತ್ತಿರುವುದನ್ನು ಕುಷ್ಟಗಿ ಪರಿಸರದಲ್ಲಿ ಕಾಣುತ್ತೇವೆ. ಇವರನ್ನು ಮೇದಾರ, ಮ್ಯಾದಾರ, ಮೇದರ್, ಮೇದರಿ, ಗೌರಿಗ, ಬುರುಡ, ಬುಡ್ಡರ್ ಎಂದೂ ಕರೆಯುತ್ತಾರೆ.

**ತಯಾರಿಕಾ ವಸ್ತುಗಳು :-** ಬಿದಿರಿನಿಂದ ಕಲಾತ್ಮಕವಾಗಿ ಬಹುಪಯೋಗಿ ಗೃಹ ಮತ್ತು ಕೃಷಿ ಉಪಕರಣಗಳನ್ನು ತಯಾರಿಸುತ್ತಾರೆ. ಕಾಡಿನಿಂದ ಗಟ್ಟಿ ಬಿದಿರುಗಳನ್ನು ತಂದು ಸೀಳಿ ಸಿಬಿರುಗಳನ್ನು ಮಾಡಿ, ನೀರಿನಲ್ಲಿ ಸ್ವಲ್ಪ ಹೊತ್ತು ನೆನೆಯಿಟ್ಟು, ಮೃದುಗೊಳಿಸಿ ಬುಟ್ಟಿ, ಮೊರ, ತಟ್ಟಿಗಳು, ಗಳಿಗೆ, ತೂರು ಬುಟ್ಟಿ, ಹಣ್ಣು-ಹಂಪಲುಗಳನ್ನು ಸಂಗ್ರಹಿಸುವ ಬುಟ್ಟಿ, ಕೆರಸಿ(ರೊಟ್ಟಿ ಪುಟ್ಟಿ), ಹೂವಿನ ಬುಟ್ಟಿ, ಕಾಯಿ ಪಲ್ಯ ಬುಟ್ಟಿ, ಬಂಡಿಯ ಕೊಲ್ಹಾರಿ, ಬೀಸಣಿಗೆ, ರೇಷ್ಮೆ ಚಂದ್ರಿಕೆ, ಕೊಲ್ಲಾರಿ, ಹಾವಾಡಿಗರ ಬುಟ್ಟಿ ಹಾಗೂ ನಿಚ್ಚಣಿಕೆಗಳನ್ನು ತಯಾರಿಸುತ್ತಾರೆ.

ಇವರು ಗೃಹೋಪಯೋಗಿ ಅಲಂಕಾರಿಕಾ ವಸ್ತುಗಳಾದ ಬಿದಿರಿನ ಕುರ್ಚಿ, ತೂಗುಕುರ್ಚಿ, ಟೀಪಾಯ್, ಸೋಫಾ, ಮಂಚ, ದಿವಾನ್, ಊಟದ ಕುರ್ಚಿ ಮತ್ತು ಮೇಜುಗಳು, ಹೂದಾನಿಗಳು, ಕಬೋರ್ಡ್, ತೂಗು ಚಾಪೆಗಳು, ಟಿವಿ ಸ್ಟ್ಯಾಂಡುಗಳನ್ನು ತಯಾರಿಸುತ್ತಾರೆ. ಚರ್ಮ ವಾದ್ಯಗಳನ್ನು ಬಾರಿಸಲು ಬೇಕಾಗುವ ಬಿದಿರು ಕಡ್ಡಿಗಳನ್ನು ತಯಾರಿಸುವುದುಂಟು. ಬ್ಯಾನರ್, ಫ್ಲೆಕ್ಸ್‌ಗಳನ್ನು ಕಟ್ಟಲು ಚೌಕಟ್ಟುಗಳನ್ನೂ ಮಾಡುತ್ತಾರೆ.

**ಆತಂಕ** :- ಇವರು ತಯಾರಿಸುವ ಅನೇಕ ವಸ್ತುಗಳಿಗೆ ಪೈಪೋಟಿ ನೀಡಲು ಪ್ಲಾಸ್ಟಿಕ್, ಲೋಹ, ಈಚಲು ಹಾಗೂ ಕಟ್ಟಿಗೆಯ ವಸ್ತುಗಳು ಮಾರುಕಟ್ಟೆಯನ್ನು ಪ್ರವೇಶಿಸಿವೆ. ಈ ಪೈಪೋಟಿಯ ನಡುವೆ ಅನೇಕರು ಸಿಲುಕಿ ತಮ್ಮ ಕುಲವೃತ್ತಿಯನ್ನೇ ತ್ಯಜಿಸಿ ಬೇರೆ ಉದ್ಯೋಗವನ್ನು ಅವಲಂಬಿಸಿದ್ದಾರೆ. ಹೀಗಾಗಿ ಮ್ಯಾದಾರಿಕೆಯೂ ಇಂದು ಕುಲಕಸಬಾಗಿ ಉಳಿದಿಲ್ಲ. ಏಕೆಂದರೆ ಇದನ್ನೇ ನಂಬಿದ ಕಸಬುದಾರರನ್ನು ತನ್ನಲ್ಲಿ ಉಳಿಸಿಕೊಂಡಿಲ್ಲ! ಜೊತೆಗೆ ಆಧುನಿಕ ಸಾಮಾಜಿಕ ಸಂಸ್ಥೆಗಳ ಸೌಲಭ್ಯಗಳಾದ ಬ್ಯಾಂಕಿಂಗ್, ಸಂಪರ್ಕ ಸಾಧನಗಳ ಮಾಹಿತಿಕೊರತೆಯಿಂದ ಸಾಮಾಜಿಕ ಅಭಿವೃದ್ಧಿ ಯೋಜ(ಚ)ನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಇತ್ತೀಚಿಗೆ ಅಭಿವೃದ್ಧಿ ಸಾಧಿಸಲು ಪ್ರಯತ್ನಿಸುತ್ತಿದ್ದಾರೆ.

**೩.೬.೭ ಚಿತ್ರಗಾರಿಕೆ :**

ಕುಷ್ಟಗಿ ಪರಿಸರದ ಕುಷ್ಟಗಿ, ಹನಮಸಾಗರ, ಕಿನ್ನಾಳ, ಕಾರಟಗಿ, ಭಾಗ್ಯನಗರಗಳಲ್ಲಿ ಚಿತ್ರಗಾರರು ಅಥವಾ ಜೀನಗಾರರು ಎಂಬ ಜನಾಂಗವಿದ್ದು, ಸಗಣಿಯಿಂದ ಹಾಗೂ ಮಣ್ಣಿನಿಂದ ಮೂರ್ತಿಗಳನ್ನು ತಯಾರಿಸುವ ಬಹು ಪುರಾತನವಾದ ಜಾನಪದ ಕಲೆಯೊಂದು ಇಂದಿಗೂ ಜೀವಂತವಾಗಿದೆ. ಕೈಯಲ್ಲೊಂದು ಕುಂಚ, ತಲೆಯಲ್ಲಿ ಒಂದಷ್ಟು ಅನುಭವವೇ ಇವರು ಉಳಿಸಿ, ಬೆಳೆಸಿಕೊಂಡ ಆಸ್ತಿ! ತಾವು ತಯಾರಿಸಿದ ಮೂರ್ತಿಗಳ ಮೇಲೆ ಚಿತ್ರಗಳನ್ನು ಬಿಡಿಸುವುದು ಹಾಗೂ ಮಾರುವುದು, ಮದುವೆಗಳಲ್ಲಿ ಶಶಿಕಟ್ಟೆಯನ್ನು ಬರೆಯುವುದು, ಇವರ ಮೂಲ ಕಸಬು. ಮೊದಲು ಜನಪದರು ಮಣ್ಣಿನ ಮೂರ್ತಿಗಳನ್ನು ಪೂಜಿಸುತ್ತಿದ್ದರು. ಗಣೇಶ, ಗೌರವ್ವ, ಶೀಗವ್ವ, ದಸರಾ ಬೊಂಬೆಗಳು ಇತ್ಯಾದಿ ಮೂರ್ತಿಗಳನ್ನು ತಯಾರಿಸಿ ನೈಸರ್ಗಿಕ ಬಣ್ಣಗಳನ್ನು ಲೇಪಿಸುವ, ಅಂದಗೊಳಿಸುವ ಸಂಪ್ರದಾಯವಿತ್ತು. ಆದರೆ ಇತ್ತೀಚಿಗೆ ಗಣೇಶ ಹಬ್ಬವೊಂದನ್ನು ಬಿಟ್ಟು ಉಳಿದೆಲ್ಲಾ ಸಂಪ್ರದಾಯಗಳು ಕಡಿಮೆಯಾಗಿವೆ. ಹಿಂದೊಮ್ಮೆ ಈ ಕಲೆಯನ್ನು ಕಲಿಯಲು ಇಟಲಿ ದೇಶದ ಮಹಿಳೆ ತಮ್ಮ ಮನೆಗೆ ಬಂದಿದ್ದನ್ನು ಕುಷ್ಟಗಿಯ ರುಕ್ಮಿಣಿ ಚಿತ್ರಗಾರ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಕಡಿಮೆ ಖರ್ಚಿನ ಕಚ್ಚಾವಸ್ತುಗಳಿಂದ ತಯಾರಾಗುವ, ಕೈಯಲ್ಲಿ ಹಗುರವೆನಿಸುವ, ಜೊತೆಗೆ ಬಡವರ ಕೈಗೆಟುಕುವ ಬೆಲೆಯಲ್ಲಿ ಸಿಕ್ಕುವ ಸಗಣಿ ಹಾಗೂ ಮಣ್ಣಿನ ಬೊಂಬೆಗಳು ಹಿಂದೂ ಸಂಪ್ರದಾಯದಲ್ಲಿ ಪವಿತ್ರತೆಯನ್ನೂ ಹೊಂದಿವೆ.

**ಸಗಣಿ ಬೊಂಬೆಗಳು** :- ಸಗಣಿಯಿಂದ ಗೊಬ್ಬರವಾಗುತ್ತದೆ, ಇಲ್ಲವೇ ಬೆರಣಿ(ಕುರುಳು) ತಯಾರಿಸುತ್ತಾರೆ ಇನ್ನೂ ಹೆಚ್ಚೆಂದರೆ ಹಣೆಯ ವಿಭೂತಿಯನ್ನು ತಯಾರಿಸಬಹುದಲ್ಲವೇ? ಹಾಗೆಂದುಕೊಂಡವರಿಗೆ ಕುಷ್ಟಗಿ ಪರಿಸರದಲ್ಲಿ ಪ್ರಾಚೀನ ಪರಂಪರೆಯ ಚಿತ್ರಗಾರ ಅಥವಾ ಜೀನಗಾರ ಜನಾಂಗ ಸಗಣಿ ಬೊಂಬೆಗಳನ್ನೂ ತಯಾರಿಸುತ್ತಿರುವುದು ಅಚ್ಚರಿಯನ್ನು ಮೂಡಿಸುತ್ತದೆ! ಪರಿಚಿತ ಕೃಷಿಕರ ಮನೆಯಲ್ಲಿ ಅಥವಾ ಗೋಮಾಳದಲ್ಲಿ ಸಿಕ್ಕುವ ಸಗಣಿಯನ್ನು ತಂದು, ಅದು ಜಿಗುಟು ಬರುವಂತಾಗಲು ಕುದಿಸಿದ ಹುಣಸೆ ಬೀಜಗಳನ್ನು ನುಣ್ಣಗೆ ರುಬ್ಬಿ ಸಗಣಿಯೊಂದಿಗೆ ಹದಗೊಳಿಸುತ್ತಾರೆ. ನಂತರ ತಾವೇ ತಯಾರಿಸಿದ ಬಗೆ ಬಗೆಯ ಕಟ್ಟಿಗೆಯ ಅಚ್ಚುಗಳಲ್ಲಿ ಜಿಗುಟಾದ ಆ ಸಗಣಿಯ ಮುದ್ದೆಯನ್ನು ತುಂಬಿ, ಅದರ ಮಧ್ಯದಲ್ಲಿ ಸಣ್ಣ ಸಣ್ಣ ಕಟ್ಟಿಗೆಯ ತುಂಡುಗಳನ್ನು ಒತ್ತುತ್ತಾರೆ. ಹೀಗೆ ತಯಾರಾದ ಮೂರ್ತಿಗಳಿಗೆ ಹಳೆಯ ಬಟ್ಟೆಯನ್ನು ಆಕಾರಕ್ಕೆ ತಕ್ಕಂತೆ ಕತ್ತರಿಸಿಕೊಂಡು, ಟಂಟು ದ್ರವ್ಯದಲ್ಲಿ ಅದ್ದಿ, ಪುನಃ ಬಿಸಿನಲ್ಲಿ ಒಣಗಿಸುತ್ತಾರೆ. ನಂತರ ಆ ಬೊಂಬೆಗಳಿಗೆ ಸೂಕ್ತವೆನಿಸುವ ಬಣ್ಣಗಳನ್ನು ನೀಡುತ್ತಾರೆ. ಆಗ ಅದು ನೈಜತೆಯನ್ನು ಹೊಂದುತ್ತದೆ ಮಾತ್ರವಲ್ಲ ಅತ್ಯಂತ ಆಕರ್ಷಣೀಯವೂ ಆಗಿದೆ. ಪ್ಲಾಸ್ಟಿಕ್ ಬೊಂಬೆಗಳು ಪರಿಸರದ ಮಲೀನಕ್ಕೆ ಕಾರಣವಾಗಿವೆ. ಆದರೆ ಈ ಸಗಣಿ ಅಥವಾ ಮಣ್ಣಿನ ಬೊಂಬೆಗಳು ಪರಿಸರ ಪೂರಕವಾಗಿರುವುದರಿಂದ ಇವುಗಳನ್ನು ಉಳಿಸಿ ಬೆಳೆಸುವುದು ಅನಿವಾರ್ಯವಾಗಿದೆ. ಹೀಗೆ ವರ್ಷದಲ್ಲಿ ಬರುವ ಹಬ್ಬಗಳಿಗೆ ಅನುಗುಣವಾಗಿ ಬೊಂಬೆಗಳನ್ನು ಮಾಡಿ, ಮಾರಿ ಉದರಂಭರಣ ಮಾಡುವ ಅಪರೂಪದ ಕುಟುಂಬಗಳನ್ನು ಇಲ್ಲಿ ಕಾಣಬಹುದಾಗಿದೆ.

**ಆತಂಕ** :- "ಪ್ಲಾಸ್ಟರ್ ಆಫ್ ಪ್ಯಾರೀಸ್, ಪ್ಲಾಸ್ಟಿಕ್ ಹಾಗೂ ಬಟ್ಟೆಯ ಗೊಂಬೆಗಳು, ಲೋಹದ ಮೂರ್ತಿಗಳು ಮಾರುಕಟ್ಟೆಗೆ ಬಂದಿರುವುದರಿಂದ ನಮ್ಮ ಗೊಂಬೆಗಳನ್ನು ಕೇಳುವವರೇ ಇಲ್ಲ. ನಾವೂ ಆಧುನಿಕ ಕಲೆಯನ್ನು ಬಳಸಿಕೊಂಡು ಮೂರ್ತಿಗಳನ್ನು ತಯಾರಿಸಿ ಜೀವನ ನಡೆಸಬೇಕಿದೆ. ಗಣೇಶ ಹಬ್ಬ ಬಂದಾಗ ಮಾತ್ರ ನಮಗೆ ಕೈತುಂಬಾ ಕೆಲಸ, ಉಳಿದಂತೆ ಇಲ್ಲ." ಎಂದು ಜ್ಯೋತಿ ಚಿತ್ರಗಾರ ಆತಂಕ ವ್ಯಕ್ತಪಡಿಸುತ್ತಾರೆ. ಅಲ್ಲದೇ ಆಧುನಿಕ ಸಾಮಾಜಿಕ ಸಂಸ್ಥೆಗಳ ಸೌಲಭ್ಯಗಳಾದ ಬ್ಯಾಂಕಿಂಗ್, ಸಂಪರ್ಕ ಸಾಧನಗಳ ಮಾಹಿತಿಕೊರತೆಯಿಂದ ಸಾಮಾಜಿಕ ಅಭಿವೃದ್ಧಿ ಯೋಜ(ಚ)ನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಇತ್ತೀಚಿಗೆ ಅಭಿವೃದ್ಧಿ ಸಾಧಿಸಲು ಪ್ರಯತ್ನಿಸುತ್ತಿದ್ದಾರೆ.

ಇದೇ ಕಸಬನ್ನು ಬೇರೆ ಸಮುದಾಯವೂ ಮಾಡುತ್ತಿರುವುದರಿಂದ ಇಂದು ಚಿತ್ರಗಾರಿಕೆ ಒಂದು ಕುಲಕಸಬಾಗಿ ಉಳಿದಿಲ್ಲ.

### ೩.೬.೮ ಹೂಗಾರರು :

ಕುಷ್ಟಗಿ ಪರಿಸರದಲ್ಲಿ ಹೂಗಾರರು ಎಂಬ ಜನಾಂಗವಿದ್ದು, ಇವರನ್ನು ಜೀರು, ಹೂವಾಡಿಗರು, ಮಾಲೆಕಾರರು ಎಂದೂ ಕರೆಯುತ್ತಾರೆ. ಮದುವೆಗಳಲ್ಲಿ ಬಾಸಿಂಗ ತಯಾರಿಸುವುದು, ಹಾರ ತಯಾರಿಸುವುದರ ಜೊತೆಗೆ ಹಬ್ಬ-ಹರಿದಿನಗಳಲ್ಲಿ ದೇವಸ್ಥಾನಗಳಿಗೆ, ಆಯಗಾರಿಕೆಯ ಮನೆ ಮನೆಗೆ ಬಿಲ್ವಪತ್ರಿ ಹೂಗಳನ್ನು ಒಯ್ದು ಕೊಡುವುದು ಇವರ ಸಾಂಪ್ರದಾಯಿಕ ಕಸಬು. ಆಯಗಾರಿಕೆ ಈಗಲೂ ಗ್ರಾಮೀಣ ಪ್ರದೇಶದಲ್ಲಿ ಮುಂದುವರೆದಿದೆ.

**ಆತಂಕ** :– ಇಲ್ಲಿಯೂ ಆತಂಕ ತಪ್ಪಿಲ್ಲ. ಕೃಷಿಕರೇ ತಮ್ಮ ಜಮೀನಿನ ಫಸಲನ್ನು ನಂಬದಂತಾಗಿದ್ದಾನೆ. ಇನ್ನು.. ಆತನು ಕೊಡುವ ದವಸ-ಧಾನ್ಯವನ್ನು ನಂಬಿ ಜೀವನ ನಡೆಸುವುದಾದರೂ ಹೇಗೆ? ಈ ಆತಂಕದಿಂದ ಹೂಗಾರರು ಕೃಷಿ-ಕೂಲಿಯನ್ನೇ ಅವಲಂಬಿಸಿದ್ದಾರೆ. ಇವರಿಗೆ ಆಧುನಿಕ ಸಾಮಾಜಿಕ ಸಂಸ್ಥೆಗಳ ಸೌಲಭ್ಯಗಳಾದ ಬ್ಯಾಂಕಿಂಗ್, ಸಂಪರ್ಕ ಸಾಧನಗಳ ಮಾಹಿತಿಕೊರತೆಯಿಂದ ಸಾಮಾಜಿಕ ಅಭಿವೃದ್ಧಿ ಯೋಜ(ಚ)ನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಇತ್ತೀಚಿಗೆ ಅಭಿವೃದ್ಧಿ ಸಾಧಿಸಲು ಪ್ರಯತ್ನಿಸುತ್ತಿದ್ದಾರೆ. ಹೂಗಾರ ವೃತ್ತಿ ಇಂದು ಕುಲಕಸಬಾಗಿ ಉಳಿದಿಲ್ಲ; ಬದಲಾಗಿ ಬೇರೆ ಬೇರೆ ಜನಾಂಗವೂ ಈ ಕಸಬನ್ನು ಮಾಡುತ್ತಿರುವುದರಿಂದ ಪುರಾತನ ಪರಂಪರೆಯ ಕಸಬು ಅಳಿವಿನ ಅಂಚಿನಲ್ಲಿದೆ.

### ೩.೬.೯ ಮಡಿವಾಳಿಕೆ :

ಕುಷ್ಟಗಿ ಪರಿಸರದಲ್ಲಿ ಅಗಸರು ಎಂಬ ಜನಾಂಗವಿದ್ದು, ಇವರನ್ನು ರಜಕ, ಮಡಿವಾಳರು ಎಂದೂ ಕರೆಯುತ್ತಾರೆ. ಸಾಂಪ್ರದಾಯಿಕವಾಗಿ ಬಟ್ಟೆಯನ್ನು ಒಗೆಯುವುದು ಅಥವಾ ಮಡಿವಾಳಿಕೆ ಇವರ ಕುಲಕಸಬು. ಅಗಸರ ಕುಲದ ಹುಟ್ಟನ್ನು ವಿವರಿಸುವ ಕಥೆಯೊಂದು ಹೀಗಿದೆ – "ದಕ್ಷ ಹಾಗೂ ಅವನ ಪರಿವಾರವನ್ನು ಸಂಹರಿಸಿದ ವೀರಭದ್ರನು ರಕ್ತದ ಕಲೆಗಳಿಂದ ಕೂಡಿದ ವೇಷದೊಂದಿಗೆ ಶಿವನ ಬಳಿ ಧಾವಿಸಿದನಂತೆ. ಕೈಲಾಸದ ಆವರಣವನ್ನು ಹೀಗೆ ಅಪವಿತ್ರಗೊಳಿಸಿದ್ದಕ್ಕಾಗಿ ಭೂಲೋಕದಲ್ಲಿ ಹುಟ್ಟಿ ಬಸವಣ್ಣ

ಹಾಗೂ ಅವನ ಸಂಗಡಿಗರ ಬಟ್ಟೆಗಳನ್ನು ಒಗೆದು ಪಾಪ ಕಳೆದುಕೊಳ್ಳುವಂತೆ ಶಿವ ಶಾಪಕೊಟ್ಟನಂತೆ. ಹೀಗೆ ಭೂಲೋಕದಲ್ಲಿ ಮಡಿವಾಳ ಮಾಚಯ್ಯ ಹುಟ್ಟಿದನು ಮತ್ತು ಆತನ ಪೀಳಿಗೆಯವರೇ ಮಡಿವಾಳರು."[೫೩] ಅಂದಿನಿಂದ ಅಗಸರು ಮೇಲ್ವರ್ಗದವರ ಅನೇಕ ಸಂದರ್ಭಗಳಲ್ಲಿನ ಮಾಸಲು ಅಥವಾ ಮೈಲಿಗೆ ಬಟ್ಟೆಗಳನ್ನು ಮಡಿ ಮಾಡಿಕೊಡುತ್ತಾರೆ. ಹಬ್ಬ ಹರಿದಿನಗಳಲ್ಲಿ ಹಾಸಿಗೆ ಹಾಗೂ ಹೊದಿಕೆಗಳನ್ನೂ ಒಗೆದುಕೊಡುತ್ತಾರೆ. ಊರ ದೇವರ ಕಾರ್ಯದಲ್ಲಿ, ದೀಡ್ ನಮಸ್ಕಾರ ಹಾಕುವಂತಹ ಸಂದರ್ಭಗಳಲ್ಲಿ ನಡೆಮಡಿ ಹಾಸುತ್ತಾರೆ. "ಪಲ್ಲಕ್ಕಿ ಪರಸೆ ನಡೆದಾಗ, ಗುಗ್ಗಳದ ಕೊಡಗಳು ಹೊರಟಾಗ, ಮಠದಯ್ಯಗಳ ಶವ ಮೆರವಣಿಗೆ, ಜಾತ್ರೆ, ಆಚರಣೆ ಉತ್ಸವಗಳಲ್ಲಿ ಅಗಸರು ಅವುಗಳ ಅಡಿಯಲ್ಲಿ ಸೀರೆಯನ್ನು ಹಾಕಿ ಸಲ್ಲಿಸುವ ಸೇವೆಗೆ ಹಡದಿ ಸೇವೆ ಎಂದು ಕರೆಯುತ್ತಾರೆ."[೫೪] ಗ್ರಾಮೀಣ ಪ್ರದೇಶದಲ್ಲಿ ಕೆಲವರು ವ್ಯವಸಾಯ ಹಾಗೂ ಕೂಲಿಯನ್ನು ತಮ್ಮ ಉಪಕಸಬನ್ನಾಗಿ ಮಾಡಿಕೊಂಡಿದ್ದಾರೆ. ನಗರ ಪ್ರದೇಶದಲ್ಲಿ ಕೆಲವರು ಇಸ್ತ್ರಿ ಬಟ್ಟೆ ಅಂಗಡಿಗಳನ್ನು ಇಟ್ಟುಕೊಂಡಿದ್ದಾರೆ. ಕೆಲವರು ಡ್ರೈಕ್ಲೀನ್ ಅಂಗಡಿ ಇಟ್ಟುಕೊಂಡಿದ್ದಾರೆ.

"ಮಡಿವಾಳರು ಮಾಡುವ ಸೇವೆ ಯಾರಿಗೂ ಅಷ್ಟಾಗಿ ಗಮನಕ್ಕೆ ಬರದಿರಬಹುದು. ಆದರೆ ಇವರ ಸೇವೆಯು ಯಜಮಾನ ಸಂಸ್ಕೃತಿಯು ಹೊಂದಿರುವ ಪವಿತ್ರತೆ ಎಂಬ ಮೌಲ್ಯದ ಹಿನ್ನೆಲೆಯಲ್ಲಿ ದೇವತೆಗೆ ಅತಿ ಮುಖ್ಯವಾದದ್ದು. ದೇವತೆಯ ಮೆರವಣಿಗೆ ಹೊರಟಾಗ ಮತ್ತು ಬರುವಾಗ ದೇವತೆಯ ಮೂರ್ತಿಯನ್ನು ಹೊತ್ತವರಿಗೂ ಮತ್ತು ಪೋತರಾಜನಿಗೂ ಇವರು ಮಡಿ ಬಟ್ಟೆಯನ್ನು ಗಟ್ಟಿಮನೆಯಿಂದ ದೇವಸ್ಥಾನಕ್ಕೂ ಮತ್ತು ದೇವಸ್ಥಾನದಿಂದ ಗಟ್ಟಿಮನೆಯವರೆಗೂ ನಡೆಮಡಿ ಹಾಕುತ್ತಾ ಹೋಗುತ್ತಾರೆ."[೫೫]

**ಆತಂಕ** :- ಊರ ಆಯಗಾರರ ಬಟ್ಟೆ ತೊಳೆಯಲು ಹಳ್ಳ ಕೊಳ್ಳಗಳಲ್ಲಿ ನೀರು ಇರುವುದು ದುರ್ಲಭವಾಗಿದೆ. ಮನೆಗೆಲಸದವರಿಂದಲೇ ಅನೇಕರು ಕಸ-ಮುಸುರೆ ತೊಳೆಸಿದವರಿಂದಲೇ ಬಟ್ಟೆಯನ್ನೂ ತೊಳೆಸುತ್ತಾರೆ. ಸಾಲದ್ದಕ್ಕೆ ವಾಷಿಂಗ್ ಮಷಿನ್ ಬಂದಿರುವುದರಿಂದ ಅಗಸರ ಬದುಕು ಅಂತಂತ್ರದಲ್ಲಿದೆ.

"'ಅಗಸರ ಕತ್ತೆ ಹಳ್ಳಾನೂ ಕಾಣಲಿಲ್ಲ; ಮನೀನೂ ಕಾಣಲಿಲ್ಲ' ಎಂಬ ಗಾದೆ ಈಗಿನ ಸ್ಥಿತಿಗೆ ಅಪವಾದದಂತಿದೆ. ಈಗ 'ಅಗಸರ ಜೀವನವೇ ಹಳ್ಳಾನೂ ಕಾಣುತ್ತಿಲ್ಲ; ಮನಿ(Money)ನೂ ಕಾಣುತ್ತಿಲ್ಲ.' ಮಡಿವಾಳರ ಮಕ್ಕಳು ಶಿಕ್ಷಣ ಪಡೆಯುತ್ತಿರುವುದು ಪ್ರಗತಿಯ ಸಂಕೇತ. ಆದರೂ ಎಷ್ಟೋ ಜನ ವಂಚಿತರಾಗಿ ತಮ್ಮ ಕುಲ ಕಸಬನ್ನೇ

ನಂಬಿಕೊಂಡಿದ್ದಾರೆಂಬುದೂ ಸತ್ಯ. ಅವರ ಬದುಕಿಗೊಂದು ಆಶಾಕಿರಣದಂತೆ 'ಧೋಬಿ ಘಾಟ್'ಗಳನ್ನೋ, ಇಸ್ತ್ರೀ ಪೆಟ್ಟಿಗೆ ಅಂಗಡಿ ಇಟ್ಟುಕೊಳ್ಳಲು ಸಾಲವನ್ನೋ ಸರ್ಕಾರ ನೀಡುವತ್ತ ಮುಕ್ತ ಸಹಾಯಹಸ್ತ ಚಾಚಿದರೆ ಅವರೂ ಸಮಾಜದ ಮುಖ್ಯವಾಹಿನಿಯಲ್ಲಿ ಸೇರಿಕೊಂಡಾರು. 'ಮಾನವನಿಗೆ ಬಟ್ಟೆಯೇ ಭೂಷಣ; ಸಮಾಜಕ್ಕೆ ಮಡಿವಾಳರೇ ಭೂಷಣ.'"[೨೬] ಆದರೂ ಆಧುನಿಕ ಸಾಮಾಜಿಕ ಸಂಸ್ಥೆಗಳ ಸೌಲಭ್ಯಗಳಾದ ಬ್ಯಾಂಕಿಂಗ್, ಸಂಪರ್ಕ ಸಾಧನಗಳ ಮಾಹಿತಿಕೊರತೆಯಿಂದ ಸಾಮಾಜಿಕ ಅಭಿವೃದ್ಧಿ ಯೋಜ(ಚ)ನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಇತ್ತೀಚಿಗೆ ಅಭಿವೃದ್ಧಿ ಸಾಧಿಸಲು ಪ್ರಯತ್ನಿಸುತ್ತಿದ್ದಾರೆ.

**೩.೬.೧೦ ಕ್ಷೌರಿಕ ಕಸಬು :**

ಕುಷ್ಟಗಿ ಪರಿಸರದ ಎಲ್ಲ ಊರುಗಳಲ್ಲಿ ಕ್ಷೌರಿಕ ಕಸಬುಗಾರರನ್ನು ಕಾಣಬಹುದಾಗಿದೆ. ಆಯಗಾರರಿಕೆಯನ್ನೇ ನಂಬಿಕೊಂಡು ಇತ್ತೀಚಿನ ದಿನಗಳವರೆಗೂ ಜೀವಂತವಾಗಿದ್ದ ಕುಲಕಸಬು ಇಂದು ಆಧುನಿಕತೆಯ ಮೊರೆ ಹೊಕ್ಕಿದೆ. ಕ್ಷೌರಿಕರನ್ನು ತಲೆಗೂದಲು, ಗಡ್ಡ, ಮೀಸೆಯನ್ನು ಒಪ್ಪ ಓರಣವಾಗಿ ಕತ್ತರಿಸುವ ಅಥವಾ ಬೋಳಿಸುವ ಕಸಬಿನವರನ್ನು ಕ್ಷೌರಿಕ ಎನ್ನುವರು. ಕೂದಲನ್ನು ಬೋಳಿಸುವುದಕ್ಕೆ ಕ್ಷೌರ ಅಥವಾ ಮುಂಡನ ಎನ್ನುವರು. ಕ್ಷೌರ ಮಾಡುವವನೇ ಕ್ಷೌರಿಕ. ಕ್ಷೌರ ಮಾಡಲು ಬಳಸುವ ಸಲಕರಣೆಗಳನ್ನಿಡುವ ಚೀಲವನ್ನು ಹಡಪದ ಎನ್ನುವರು. ಈ ಪದದಿಂದ ಹಡಪಿಗ ಎಂಬ ಹೆಸರು ಬಂದಿರಬಹುದು. ಇವರನ್ನು ನಾವಿದ, ನಾವಿಂದ, ನಾದಿಗ, ಕೆಲಸಿಗ, ಕಷ್ಟದವ, ವಾರೀಕ, ನಾಯ್ಡು, ಕನ್ನಡಿ ಕಾಯಕದವ ಎಂಬ ಹೆಸರಿನಿಂದಲೂ ಕರೆಯುವುದುಂಟು. ಈ ಕೆಲಸದ ಜೊತೆಗೆ ತಲೆ ಮಸಾಜ್ ಹಾಗೂ ಕುತ್ತಿಗೆ, ಬೆನ್ನು ನೇವುದನ್ನೂ ಮಾಡುತ್ತಾರೆ. ಇಂದು ರೈತನ ಜೀವನ ಶೈಲಿ ಬದಲಾಗಿರುವುದರಿಂದಲೇ ಕ್ಷೌರಿಕರ ಆಯಗಾರಿಕೆ ವೃತ್ತಿ ಮರೆಯಾಗಿದೆ.

**ಇನ್ನೂ ಸುಧಾರಿಸಬೇಕಿದೆ :-** ರೈತನ ರಾಶಿ ಪ್ರಕ್ರಿಯೆ ಅನಿಶ್ಚಿತತೆಯಿಂದ ಕೂಡಿರುವುದರಿಂದ ಆಯಗಾರಿಕೆಯ ಜೊತೆಗೆ ಕಣಗಾಳಿಗೂ ಹೋಗುವುದು ಅನುಮಾನವಾಗಿದೆ. ಮನೆ ಮನೆಗೆ ಹೋಗಿ ಕ್ಷೌರ ಮಾಡುತ್ತಿದ್ದ ಕಾಲದ ನಂತರ ಕ್ಷೌರಿಕರ, ಮನೆಗೇ ಹೋಗುವ ರೂಢಿ ಇತ್ತಾದರೂ ಅದೂ ಈಗ ಇಲ್ಲವಾಗಿದೆ. ಆಧುನಿಕತೆಗೆ ಕೈ ಜೋಡಿಸಿರುವ ಕ್ಷೌರಿಕ ಕಸಬು ಇಂದಿ ಆತ್ಯಾಕರ್ಷಕ ಹೇರ್ ಕಟಿಂಗ್ ಸಲೂನ್ ಶಾಪ್‌ಗಳನ್ನು ಇಟ್ಟುಕೊಂಡಿದ್ದಾರೆ. ಅಲ್ಲಿಗೇ ಹೋಗಿ, ಅದರಲ್ಲಿ ತಿರುಗು ಕುರ್ಚಿಯಲ್ಲಿ

ಕುಳಿತು, ಟಿವಿಯಲ್ಲಿ ಭರ್ಜರಿ ಮನರಂಜನಾ ಕಾರ್ಯಕ್ರಮಗಳನ್ನು ನೋಡುತ್ತಾ ಕ್ಷೌರ ಮಾಡಿಸಿಕೊಂಡು, ನಿಗಧಿಗೊಳಿಸಿದ ಹಣವನ್ನು ನೀಡಿ ಬರುವ ಪದ್ಧತಿ ನಡೆದಿದೆ. ಇವರು 'ಸವಿತಾ ಸಮಾಜ' ಎಂಬ ಸಮುದಾಯದ ಸಂಘಟನೆಯನ್ನೂ ಹೊಂದಿದ್ದಾರೆ. ಇವರ ಕಸಬು ಮಾತ್ರ ಆಧುನೀಕರಣಗೊಂಡಿದೆ; ಆದರೆ ಆರ್ಥಿಕ, ರಾಜಕೀಯ ಹಾಗೂ ಶೈಕ್ಷಣಿಕ ಸ್ಥಿತಿ ಇನ್ನೂ ಸುಧಾರಿಸಬೇಕಿದೆ.

**೩.೬.೧೦ ಬಯಲು ಕಮ್ಮಾರಿಕೆ :**

ಬಯಲಿನಲ್ಲಿಯೇ ಬಟ್ಟೆಯ ಜೋಪಡಿಯಲ್ಲಿ ಕಮ್ಮಾರಿಕೆಯನ್ನು ಮಾಡುತ್ತಿರುವ ಅಲೆಮಾರಿ ಜನಾಂಗವೇ ಬಯಲು ಕಮ್ಮಾರ ಜನಾಂಗ. ಇತ್ತೀಚಿಗೆ ಕುಷ್ಟಗಿ ಪರಿಸರದಲ್ಲಿ ಆಗಾಗ್ಯೆ ಎಲ್ಲ ಊರುಗಳಲ್ಲಿ ಪದೇ ಪದೇ ಕಾಣಿಸಿಕೊಳ್ಳುವ ಇವರು ಬಹುದಿನಗಳವರೆಗೆ ಒಂದೇ ಕಡೆ ಠಿಕಾಣಿ ಹೂಡುವುದೂ ಉಂಟು! ಘಸಾದಿ, ಗಡಿ, ಗಡೌಲಿ, ಲೋಹಾರ್ ಎಂದೂ ಕರೆಯುತ್ತಾರೆ. ಸಾಮಾನ್ಯವಾಗಿ ಇವರು ಮನೆಯಲ್ಲಿ ಮಾರ್ವಾಡಿ ಭಾಷೆಯ ಉಪಭಾಷೆಯನ್ನು, ವ್ಯವಹರಿಸುವಾಗ ಕನ್ನಡವನ್ನೂ ಮಾತನಾಡುತ್ತಾರೆ. ವೀರಗಚ್ಚೆ ಹಾಕಿದ ಮಹಿಳೆಯರು ಕಾದ ಕಬ್ಬಿಣಕ್ಕೆ ಸುತ್ತಿಗೆ(ಗನ್)ಯಿಂದ ಬಡಿಯುತ್ತಿರುತ್ತಾರೆ. ಮನೆಯ ಆದಾಯಕ್ಕೆ ಕಬ್ಬಿಣದ ಕೆಲಸಗಳಲ್ಲಿ ಪುರುಷರಿಗೆ ಸಹಾಯ ಮಾಡುತ್ತಾರೆ. ಪುರುಷ ಇಕ್ಕಳಿನಿಂದ ಕಾದ ಕಬ್ಬಿಣವನ್ನು ಹಿಡಿದುಕೊಂಡು ತಮಗೆ ಬೇಕಾದ ವಸ್ತುವನ್ನು ಮಾಡಿಕೊಡುವ ಜೊತೆಗೆ ರಿಪೇರಿ ಕೆಲಸವನ್ನೂ ಮಾಡುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ಕಮ್ಮಾರಿಕೆ ಕ್ಷೀಣಿಸಿದ್ದರಿಂದ ಇವರಿಗೆ ಬೇಡಿಕೆ ಹೆಚ್ಚಾಗಿಯೇ ಕಂಡುಬರುತ್ತದೆ.

"ಕುಷ್ಟಗಿ ಪರಿಸರದಲ್ಲಿಯೇ ಸಿಖ್ ಸಮುದಾಯದವರು ಬೀಡುಬಿಟ್ಟಿದ್ದು, ಅವರೂ ಕೂಡಾ ಬಯಲು ಕಮ್ಮಾರರು ಮಾಡುವ ಬಹುತೇಕ ವಸ್ತುಗಳನ್ನು ತಯಾರಿಸುತ್ತಾರೆ. 'ತುಕ್ಕು ಹಿಡಿದ ಕಬ್ಬಿಣಕ್ಕೆ ಪುನರ್ಜನ್ಮ' ನೀಡಿ, ಈಳಿಗೆ, ರೊಟ್ಟಿ ಅಥವಾ ದೋಸೆ ಹೆಂಚು, ಕಿಂಡಿ ಹೆಂಚು, ಝೂನ್ಸಿ ಸೌಟು, ಹೊಟ್ಟಿನ ಒಲೆ, ಕಡಾಯಿ, ಕುಡುಗೋಲು, ಕೊಡಲಿ, ಚಾಕು, ಮಚ್ಚು, ಸೇರು, ಪಾವು, ಇತ್ಯಾದಿಗಳ ತಯಾರಿಕೆಯಲ್ಲಿ ಸಿದ್ಧಹಸ್ತರು. ತಂದೆ-ತಾಯಿ ತಯಾರಿಸಿದ ವಸ್ತುಗಳನ್ನು ಜನಸಂದಣಿಯ ಸ್ಥಳಗಳಲ್ಲಿ ಇವರ ಮಕ್ಕಳು ಹೊತ್ತು ಮಾರುತ್ತಾರೆ. ಕೆಲವೊಮ್ಮೆ ದೊಡ್ಡವರೂ ಸಂತೆಗಳಲ್ಲಿ, ಜಾತ್ರೆಗಳಲ್ಲಿ, ರಾಷ್ಟ್ರೀಯ ಹೆದ್ದಾರಿಯ ವೇಗ ನಿಯಂತ್ರಕ ಹುಬ್ಬುಗಳಲ್ಲಿ ನಿಂತು ಮಾರುತ್ತಾರೆ."[೫೭]

**ತಯಾರಿಸುವ ವಸ್ತುಗಳು** : ಒಕ್ಕಲುತನದಲ್ಲಿ ಕೃಷಿಕನಿಗೆ ತುಂಬಾ ಅಗತ್ಯವಾಗಿರುವ ಸಲಿಕೆ, ಗುದ್ದಲಿ, ಪಿಕಾಸಿ, ಹಾರೆ, ಕುಡಗೋಲು, ಕುರ್ಚಿಗೆ, ಕಬ್ಬಿಣದ ನೇಗಿಲು, ನೇಗಿಲ ಕುಳ, ಕುಡ, ಬಾಯಿಗುದ್ದಲಿ, ಮೇವು ಕತ್ತರಿಸುವ ಈಳಿಗೆ ಮುಂತಾದವುಗಳನ್ನು ತಯಾರಿಸುತ್ತಿದ್ದನು. ಚಾಕು, ಚೂರಿ, ಇಕ್ಕಳ, ಕಬ್ಬಿಣದ ಒಲೆ, ಹೆಂಚು, ಒನಕೆ ಬಳೆ, ಈಳಗಿ, ಊದುಗೊಳವೆ ಮುಂತಾದ ಗೃಹ ಬಳಕೆಯ ವಸ್ತುಗಳ ತಯಾರಿಕೆಯಲ್ಲೂ ಬಯಲು ಕಮ್ಮಾರರ ಕೌಶಲ್ಯ ಅತ್ಯಗತ್ಯವಾಗಿತ್ತು. ಬೇರೆ ಬೇರೆ ಕಸಬುದಾರರಿಗೂ ಇವರ ಸಹಾಯ ಬೇಕಿತ್ತು. ಕ್ಷೌರಿಕರ ಕತ್ತರಿ, ಕತ್ತಿ; ಬಡಿಗನಿಗೆ ಬೇಕಾಗುವ ಉಳಿ, ಗರಗಸ, ಬಾಚಿ; ಶಿಲ್ಪಿ ಹಾಗೂ ಕಲ್ಲುಕುಟಿಗನಿಗೆ ಬೇಕಾಗುವ ಸುತ್ತಿಗೆ, ಚಾಣ; ಅಕ್ಕಸಾಲಿಗನಿಗೆ ಬೇಕಾಗುವ ಇಕ್ಕಳ, ಚಿಮ್ಮಟ, ಸುತ್ತಿಗೆ; ಚಮ್ಮಾರನಿಗೆ ಬೇಕಾಗುವ ರೆಂಪಿ, ಡಬ್ಬಣದುಳಿ; ವಡ್ಡರಿಗೆ ತೂಗು ಗುಂಡು, ತ್ಯಾಪಿ, ಮೂಲಿ ಮಟ್ಟಲಗಿ ಇತ್ಯಾದಿಗಳನ್ನು ತಯಾರಿಸಿಕೊಡುತ್ತಾ ಇತರೆ ಕಸಬುದಾರರಿಗೂ ಸಹಾಯಕರಾಗಿದ್ದಾರೆ.

**ಆತಂಕ** : ಈಗ ಆಧುನಿಕ ಕೈಗಾರಿಕೆಗಳಲ್ಲಿಯೇ ಬಯಲು ಕಮ್ಮಾರರು ತಯಾರಿಸುವ ಎಲ್ಲ ವಸ್ತುಗಳನ್ನೂ ತಯಾರಿಸುತ್ತಿರುವುದರಿಂದ ಇವರ ಕಸಬಿಗೂ ಹೊಡೆತ ಬಿದ್ದಿದೆ ಎಂದೇ ಹೇಳಬಹುದು. ಸಿದ್ಧವಸ್ತುಗಳು ನಯವಾಗಿದ್ದು, ಆಕರ್ಷಕವೂ ಆಗಿರುತ್ತವೆ. ಅಲ್ಲದೇ ತಮ್ಮ ಮಕ್ಕಳ ಶೈಕ್ಷಣಿಕ ಸ್ಥಿತಿಯ ಬಗ್ಗೆ ಆಲೋಚಿಸುವ ಅಗತ್ಯವಿದೆ. ಆರ್ಥಿಕ, ರಾಜಕೀಯ ಹಾಗೂ ಶೈಕ್ಷಣಿಕ ಸ್ಥಿತಿ ಇನ್ನೂ ಸುಧಾರಿಸಬೇಕಿದೆ. ಸಾಮಾಜಿಕ ಅಭಿವೃದ್ಧಿ ಯೋಜ(ಚ)ನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಾಧ್ಯ ಮಾಡಿಕೊಳ್ಳಬೇಕಿದೆ.

### ೩.೬.೧೨ ಕಲ್ಲು ಕುಟಿಗ ಕಸಬು :

ಕಲ್ಲಿನಿಂದ ವೈವಿಧ್ಯಮಯವಾದ ಗೃಹೋಪಯೋಗಿ ಸಾಧನ ಸಲಕರಣೆಗಳನ್ನು ತಯಾರಿಸುವ ಒಂದು ವರ್ಗವಿದೆ. ಇವರನ್ನು ಕಲ್ಲು ಕುಟಿಗರು ಎಂದು ಕರೆಯುತ್ತಾರೆ. ಕುಷ್ಟಗಿ ಪರಿಸರದಲ್ಲಿ ಅಲ್ಲಲ್ಲಿ ಕಂಡುಬರುವ ಈ ಸಮುದಾಯವನ್ನು ಬಂಡಿವಡ್ಡರು, ಕಲ್ಲು ವಡ್ಡರು, ಭೋವಿ ವಡ್ಡರು ಎಂದು ಕರೆಯಲಾಗುತ್ತಿದೆ.

"ಹಸಿದು, ಬಾಯಾರಿ, ಸೂರ್ಯನ ತಾಪದಲ್ಲಿ ನಾವು
ಈ ಕಲ್ಲುಗಳನ್ನೊಡೆಯುತ್ತೇವೆ
ಕಲ್ಲಿನ ಚಕ್ಕೆಗಳು ಹಾರಿ, ನಮ್ಮ ಬತ್ತಲೆ ಮೈಗಳಿಗೆ
ಬಡಿಯುತ್ತವೆ,

ನಮ್ಮ ಬದುಕು ಖಾಲಿ, ನಿರರ್ಥಕ.
ನಮ್ಮ ಬತ್ತಲೆ ಮೈಗಳು ಬೆವರಿನಿಂದ ಹೊಳೆಯುತ್ತವೆ
ಕಂಬನಿಗಳು ನಮ್ಮ ಕಣ್ಣುಗಳಿಂದ ಹರಿಯುತ್ತದೆ.
ಕೆಲವೊಮ್ಮೆ ಕಲ್ಲಿ ಚಲ್ಲಿನ ಚಕ್ಕೆಗಳು ಮಾಂಸಕ್ಕೆ
ಚುಚ್ಚಿಕೊಳ್ಳುತ್ತವೆ. ನೆತ್ತರು ಸುರಿಯುತ್ತದೆ..."[೫೮]

ಕಲ್ಲು ಕುಟಿಗರ ಈ ಹಾಡು ಕಲ್ಲು ಕುಟಿಗರ ಶ್ರಮ ಸಂಸ್ಕೃತಿಯನ್ನು ನೆನಪಿಸುತ್ತದೆ. ಅವರ ದುಗುಡ ಹಾಗೂ ಆತಂಕವನ್ನು ಕೂಗಿ ಹೇಳುವಂತಿದೆ. ಅವರ ಈಗಿನ ಸ್ಥಿತಿಗೆ ಹಿಡಿದ ಕನ್ನಡಿಯಂತಿದೆ.

ರುಬ್ಬುವಕಲ್ಲು, ಗುಂಡುಕಲ್ಲು, ಒರಳುಕಲ್ಲು, ಕೊಣಗಿಕಲ್ಲು, ಬೀಸುವ ಕಲ್ಲು (ಇದರಲ್ಲೂ ಅಕ್ಕಿ ಒಡೆಯುವ ಕಲ್ಲು, ಬೇಳೆ ಒಡೆಯುವ ಕಲ್ಲು, ಹಿಟ್ಟು ಮಾಡುವ ಕಲ್ಲು ಎಂಬ ೩ ವಿಧಗಳುಂಟು), ಇಂಡಿಕಲ್ಲು, ಕಲ್ಲಿನ ಬಾನಿ (ದೋಣಿ), ಎಲೆ–ಅಡಕಿ ಕುಟ್ಟುವ ಕಲ್ಲು ಹಾಗೂ ರೊಟ್ಟಿ ಸುಡೋಕಲ್ಲುಗಳ ತಯಾರಿಕೆಯನ್ನೇ ತಮ್ಮ ಕುಲಕಸಬನ್ನಾಗಿಸಿಕೊಂಡಿರುವ ಕಲ್ಲುಕುಟಿಗರು ಒಂದೆಡೆ ನೆಲೆ ನಿಲ್ಲದ ಋತುಮಾನದ ಅಲೆಮಾರಿ ಜನಾಂಗವೂ ಹೌದು. ಕತ್ತೆಗಳೇ ಇವರ ಸಾಗಾಟದ ವಾಹನಗಳು. ಇತ್ತೀಚೆಗೆ ಇವೂ ಇಲ್ಲವಾಗಿವೆ.

"ಈ ವೃತ್ತಿಯ ಇನ್ನೊಂದು ವಿಶೇಷವೆಂದರೆ, ಹೆಣ್ಣು ಗಂಡೆಂಬ ಬೇಧವಿಲ್ಲದೇ ಇಬ್ಬರಿಗೂ ಕೆಲಸ ನೀಡುತ್ತದೆ. ಇವರು ತಯಾರಿಸಿದ ಬೀಸುವ ಕಲ್ಲು ಸವೆದ ನಂತರ ಈ ಕಲ್ಲನ್ನು ಮುಳ್ಳಾಡಿಸಲು ಮತ್ತೊಂದು ಜನಾಂಗಕ್ಕೆ (ಜೀವಕ್ಕೆ) ಉದ್ಯೋಗ ನೀಡುತ್ತಾರೆ! ತಾನು ಕಟೆಯುವ ವಸ್ತುಗಳ ಮೇಲೆ ಈ ಕಲ್ಲೋಜ ಚಿತ್ತಾರ ಬಿಡಿಸುವ ಮೂಲಕ ತಾನೊಬ್ಬ 'ಕಲಾಕಾರ'ನೂ ಹೌದು"[೫೯] ಎಂಬುದನ್ನು ಸಾಬೀತು ಮಾಡುತ್ತಾನೆ. ಈ ಶಿಲೆಯಲ್ಲೂ ಕಲೆ ಅರಳಿದಾಗ ಹೊರಳಿ ಹೊರಳಿ ನೋಡಬೇಕೆನ್ನುವಷ್ಟು ಆಕರ್ಷಣೀಯವಾಗಿರುತ್ತದೆ. ಅಲ್ಲದೇ ಇವರು ಕಟೆದು ವಸ್ತುಗಳನ್ನು ತಯಾರಿಸುವಾಗ ಕೆಳಗೆ ಬಿದ್ದ ಸಣ್ಣ ಸಣ್ಣ ಕಲ್ಲುಗಳನ್ನು ಪುಡಿ ಪುಡಿ ಮಾಡಿ, ಜರಡಿ ಹಿಡಿದು, ರಂಗೋಲಿ ಪುಡಿಯಾಗಿ ತಯಾರಿಸಿ ಮಾರುತ್ತಾರೆ. ಹೆಂಗೆಳೆಯ ಬೆರಳ ಸಂದಿಯಲ್ಲಿ ಜಾರಿ ಕಲೆಯ ಹಂದರವಾಗುವ ಅದೃಷ್ಟ ಈ ಕಲ್ಲಿನ ಪುಡಿಗೆ ಸಿಕ್ಕುತ್ತದೆಂದು ಯಾರಾದರೂ ಊಹಿಸಿದ್ದರೆ?

**ಆತಂಕ** : "ಮಿಕ್ಸರ್‍ರು, ಗ್ರೈಂಡರ್‍ರು ಬಂದಮ್ಯಾಲ ನಮ್ಮ ಒರಳುಕಲ್ಲನ ಯಾರ್ ಕೇಳ್ತಾರ್‍ರಿ? ಏನೋ ಕೆಲವ್ರು ನಮ್ಮ ಸಂಪ್ರದಾಯ ಉಳಿಸಿಕೊಂಡು ಬಂದವ್ರು, ಅದರಾಗೂ

'ಹೆಣ್ಮಕ್ಳು' ಈ ಒರಳಕಲ್ಲು, ಬೀಸುವ ಕಲ್ಲು ಹೊಸಮನಿಗೆ ಶಾಸ್ತ್ರಕ್ಕಾದ್ರೂ ಬೇಕs ಬೇಕು ಅಂತಾ ಹಠ ಹಿಡಿದು ಹಾಕುಸ್ತಾರ್ರಿ. ಇಲ್ದಿದ್ರ ನಮ್ಮ ಕಸಬಿಗೆಲ್ಲಿ ಬೆಲೆ ಇರ್ತಿತ್ತೇಳ್ರಿ?" ಎನ್ನುವ ಯಲ್ಲಮ್ಮ ಬಂಡಿವಡ್ಡರ, ನಮ್ಮ ಮುಂದಿನ ಪೀಳಿಗೆ ತಮ್ಮ ಈ ಕುಲಕಸಬನ್ನೇ ನಂಬಿ ಜೀವಿಸುವ ಬದಲು ಅವರೂ ಎಲ್ಲರಂತೆ ವಿದ್ಯಾ ಕಲಿತು, ನೌಕರಿ ಮಾಡಬೇಕು, ಸಮಾಜದ ಮುಂಚೂಣಿಯಲ್ಲಿರಬೇಕೆಂದು ಬಯಸುವುದು ಸಹಜವಾಗಿದೆ.

**೩.೬.೧೩ ಚಮ್ಮಾರಿಕೆ :**

ಚಮ್ಮಾರಿಕೆ ಪಾರಂಪರಿಕ ಕಸಬುಗಳಲ್ಲಿಯೇ ತುಂಬಾ ಮಹತ್ವದ್ದು. ಏಕೆಂದರೆ ಕುಲಮೂಲ ವೃತ್ತಿಗಳಲ್ಲಿ ಇದು ಅಸ್ಪೃಶ್ಯತೆಯ ಮೂಲದವರು ಮಾಡುತ್ತಿದ್ದ ಕಸಬಾಗಿತ್ತು. ಸತ್ತ ಪ್ರಾಣಿಗಳ ಚರ್ಮವನ್ನು ಸುಲಿದು, ಹದಗೊಳಿಸಿಕೊಂಡ ನಂತರ ಚಪ್ಪಲಿ, ಮಿಣಿ, ಬಾರಕೋಲು, ಕೊರಳಕಣ್ಣಿ, ಹಲಗೆ ಚರ್ಮವಾದ್ಯ, ತಪ್ಪಡಿ ವಾದ್ಯ ಮುಂತಾದವುಗಳನ್ನು ತಯಾರಿಸುತ್ತಿದ್ದ ಕಸಬುಗಳಲ್ಲಿ ಅನೇಕ ಉಪಕಸಬುಗಳು ಹುಟ್ಟಿಕೊಂಡಿವೆ. ವಾದ್ಯಗಳ ತಯಾರಿಕೆ; ಮಿಣಿ, ಬಾರಕೋಲು, ಕೊರಳಕಣ್ಣಿ ತಯಾರಿಕೆ; ಚಪ್ಪಲಿ ತಯಾರಿಕೆಗಳು ಉಪಕಸಬುಗಳಾಗಿ ವಿಂಗಡಿಸಲ್ಪಟ್ಟಿವೆ.

**ಆತಂಕ** : ಇಂಗ್ಲೆಂಡಿನ ಕೈಗಾರಿಕಾ ಕ್ರಾಂತಿಯ ನಂತರ ಚರ್ಮೋದ್ಯಮಕ್ಕೆ ಜಾಗತಿಕ ಮಟ್ಟದಲ್ಲಿ ಹೆಚ್ಚು ಬೇಡಿಕೆ ಬಂದಿತು. ಇದರ ಫಲವಾಗಿ ಶ್ರೀಮಂತರು, ಮೇಲ್ಜಾತಿಯವರು ಹಾಗೂ ಬಂಡವಾಳಶಾಹಿಗಳು ಇದರ ಒಡೆತನ ಪಡೆದುಕೊಂಡರು. ಅದೇ ಹಳೆ ಮಾದರಿಯ ವಸ್ತುಗಳು ಹಾಗೂ ತಂತ್ರಗಳನ್ನೇ ಆಧುನೀಕರಣಕ್ಕೆ ವರ್ಗಾಯಿಸಿ ಬೂಟು, ಬೆಲ್ಟು, ಚಪ್ಪಲಿ ಇತಯಾದಿಗಳನ್ನು ತಯಾರಿಸುವ ಕಂಪನಿಗಳನ್ನೇ ನಿರ್ಮಿಸಿಕೊಂಡಿದ್ದಾರೆ. ಇದರಿಂದಾಗಿ ವೃತ್ತಿಯ ಪಾರಂಪರಿಕ ಕಸಬುದಾರರು ಹಾಗೂ ಹಕ್ಕುದಾರರು ಆದ ಚಮ್ಮಾರರು ಚರ್ಮೋದ್ಯಮದಿಂದಲೂ ಅಸ್ಪೃಶ್ಯರಾದರು.

**೩.೬.೧೪ ಶಿಲ್ಪಗಾರಿಕೆ :**

ಪಂಚಾಳ ಸಮುದಾಯದಲ್ಲಿ ಶಿಲ್ಪಗಾರ ಕೂಡ ಒಬ್ಬ. ಇವರು ಸಾಂಸ್ಕೃತಿಕವಾಗಿ ತುಂಬಾ ಮಹತ್ವ ಪಡೆದಿರುವ ಜನಾಂಗ. ಕಲ್ಲಿನಲ್ಲಿ ಕೆತ್ತುವ ಸಾಂಸ್ಕೃತಿಕ ಕಲೆಯನ್ನು ಶಿಲ್ಪಕಲೆ ಎಂದು ಕರೆಯಲಾಗುತ್ತಿದೆ. ಈ ರೀತಿಯ ಕಸಬನ್ನು ಮಾಡುವವರನ್ನು ಶಿಲ್ಪಿ ಎಂದು ಕರೆಯುತ್ತಾರೆ. ಭಾರತಕ್ಕೆ ವಿದೇಶಿ ಪ್ರವಾಸಿಗರನ್ನು ಆಕರ್ಷಿಸಲು ಕಾರಣೀಭೂತರೇ

ಶಿಲ್ಪಿಗಳು! ಇವರು ಸಾಮಾನ್ಯವಾಗಿ ಕಲ್ಲಿನಲ್ಲಿ ಕಲ್ಪನೆ, ಚಾತುರ್ಯ ಹಾಗೂ ನೈಪುಣ್ಯತೆಯನ್ನು ಪ್ರದರ್ಶಿಸುತ್ತಾರೆ. ಶಿಲ್ಪಿಯು ಶಿಲ್ಪಕರ್ಮದಲ್ಲಿ ಸಂಕಲ್ಪ, ಆಲೋಚನೆ, ನಿರ್ಮಾಣಗಳೆಂಬ ತಪಸ್ಸಿನಿಂದ ಶಿಲ್ಪ ನಿರ್ಮಾಣ ಮಾಡುತ್ತಾನೆ. ಶಿಲ್ಪಿಯಾದವನಿಗೆ ಶಿಲ್ಪಶಾಸ್ತ್ರ ಗೊತ್ತಿರಲೇಬೇಕು. "ಶಿಲ್ಪಿ ಲಕ್ಷಣವು ಇಂತಿದೆ : ಸಕಲಶಾಸ್ತ್ರಪಾರಂಗತನೂ, ಸರ್ವಾಂಗ ಪೂರ್ಣನೂ, ಧಾರ್ಮಿಕನೂ, ದಯಾಪರನೂ, ಮತ್ಸರವಿಲ್ಲದವನೂ, ಅಸೂಯಾರಹಿತನೂ, ಆಗಮನವನ್ನು ತಿಳಿದವನೂ, ಸತ್ಯವಾದಿಯೂ, ಜಿತೇಂದ್ರಿಯನೂ, ನಿರೋಗಿಯೂ, ವ್ಯಸನಗಳಿಂದ ಮುಕ್ತನಾದವನೂ, ಶ್ರೇಷ್ಠ ನಾಮಾಂಕಿತನೂ, ವಾಸ್ತು ವಿದ್ಯಾ ಪಾರಂಗತನೂ, ಸೂತ್ರದಂಡ ಪ್ರಮಾಣಗಳನ್ನು ತಿಳಿದವನೂ, ಮಾನೋನ್ಮಾನಗಳನ್ನು ತಿಳಿದವನೂ, ಗುರ್ವಾಜ್ಞಾ ಪರಿಪಾಲಕನೂ ಆಗಿರಬೇಕೆಂದೂ, ಆತನೇ ಶಿಲ್ಪಿಯೆಂದೂ ಶಾಸ್ತ್ರವು ಘಂಟಾಘೋಷವಾಗಿ ಸಾರಿರುವುದು."[೬೦] ಕಲ್ಲಿನ ಆಯ್ಕೆ, ಪ್ರಮಾಣ, ಅಳತೆ, ರೂಪಭೂಷಣ, ಆಯುಧ, ಪೀಠ ಹಾಗೂ ಪರಿವಾರಗಳು ಮೂರ್ತಿಶಿಲ್ಪ ಹಾಗೂ ದೇಗುಲಗಳ ನಿರ್ಮಾಣಕ್ಕೆ ತಿಳಿದಿರಲೇಬೇಕಾಗುತ್ತದೆ. ಜೊತೆಗೆ ಶ್ರದ್ಧೆ ಮತ್ತು ಕಲ್ಪನಾಶಕ್ತಿಯೂ ಅಗಾಧವಾಗಿರಬೇಕಾಗುತ್ತದೆ.

ಕುಷ್ಟಗಿ ಪರಿಸರದಲ್ಲಿ ಗಂಗಾವತಿ ತಾಲ್ಲೂಕಿನ ದಾಸನಾಳದ ಶಿಲ್ಪಿ ಶ್ರೀ ವೀರಣ್ಣಾಚಾರ್ಯ ಬಡಿಗೇರ, ಹನಮಸಾಗರದ ಶಿವಪ್ಪ ಬೆಳಗಲ್, ಹನಮಸಾಗರದ ಮಾರುತಿಸಾ ಕಾಟವಾ, ಕೊಪ್ಪಳದ ಪ್ರಕಾಶ ಶಿಲ್ಪಿ, ಯಲಬುರ್ಗಾ ತಾಲ್ಲೂಕಿನ ಆಡೂರು ಗ್ರಾಮದ ರುದ್ರಯ್ಯ ಗಣಾಚಾರಿ ಮುಂತಾದವರು ತಮ್ಮ ಶಿಲ್ಪಕಲೆಯಿಂದಾಗಿ ಕಗ್ಗಲ್ಲನ್ನು ಕಟೆದು ಮೂರ್ತಿಯನ್ನಾಗಿಸಿ, ಅದನ್ನು ದೈವತ್ವಕ್ಕೇರಿಸಿದ್ದಾರೆ. ಕಲ್ಲಿನಲ್ಲಿಯೂ ಬಳ್ಳಿಯಲ್ಲಿ ಹೂವನ್ನು ಅರಳಿಸಿದ್ದಾರೆ. ದೇವರಿಗೇ ಕಲಾತ್ಮಕ ಶಿಲಾಲಯವನ್ನು ನಿರ್ಮಿಸಿ, ಅದರಲ್ಲಿ ನವರಂಗ, ಮಂಟಪ, ಮಕರತೋರಣ, ಕಲೆಯ ಹಂದರದಂತಿರುವ ಕಂಬಗಳನ್ನು ಕೆತ್ತಿದ್ದಾರೆ. ಒಟ್ಟಂದದ ಭಾರತೀಯ ಭ(ದಿ)ವ್ಯ ಸಂಸ್ಕೃತಿಯನ್ನು ಶಿಲೆಯಲ್ಲಿ ಕಲೆಯಾಗಿ ಅರಳಿಸಿದ್ದಾರೆ.

ಸುಡುಬಿಸಿಲು, ಸುರಿವ ಮಳೆ, ಬೀಸುವ ಗಾಳಿಯನ್ನೂ ಲೆಕ್ಕಿಸದೆ ಏಕಾಗ್ರತೆಯಿಂದ ಕೆತ್ತನೆ ಮಾಡುತ್ತಿರುತ್ತಾರೆ. ತಾಳ್ಮೆಯಿಂದ ಕಲ್ಲು ಕುಟುಕಿ ಅದರಲ್ಲೇ ದೇವರ ಸ್ವರೂಪ ಕಾಣುತ್ತಿದ್ದಾರೆ. ಅನಂತಪದ್ಮನಾಭ, ಕೃಷ್ಣನ ಕಾಳಿಂಗ ಮರ್ಧನ, ಗಣಪತಿ, ಆಂಜನೇಯ, ವೀರಭದ್ರ, ಶಿವ-ಪಾರ್ವತಿ, ರಾಧಾ-ಕೃಷ್ಣ, ಲಕ್ಷ್ಮಿ-ವೆಂಕಟೇಶ್ವರ, ಗ್ರಾಮ ದೇವತೆಗಳು, ನಟರಾಜನ ವಿವಿಧ ಭಂಗಿಗಳು ಇತ್ಯಾದಿಗಳನ್ನು ನೋಡಿದರೆ ದೈವಿಕ ಭಾವನೆ ತಾನಾಗಿಯೇ ಮೂಡಿಬರುವಂತೆ ಆಕರ್ಷಕವಾಗಿ ಕೆತ್ತುತ್ತಾರೆ.

**ಆತಂಕಗಳು :**

ಪ್ರಸ್ತುತ ಸಂದರ್ಭದಲ್ಲಿ ವಿಗ್ರಹ ಮೂಡಿ ಬರುವುದು ಕಲಾವಿದ ಪ್ರೌಢಿಮೆಯಿಂದಲೆ. ಈಗಿನ ಶಿಲ್ಪಿಗಳಲ್ಲಿ ವೇದ, ಉಪನಿಷತ್ತು, ಶಿಲ್ಪಶಾಸ್ತ್ರ ಇತ್ಯಾದಿಗಳೆಲ್ಲವನ್ನು ಕಲಿಯುವುದೆಲ್ಲ ಸಡಿಲಿಕೆಗೊಂಡಿದೆ. ಶಿಲ್ಪಗಳಿಗೆ ಸೌಂದರ್ಯವನ್ನು ಒದಗಿಸುವುದು ಶಿಲ್ಪಿಯ ಕೆಲಸವಾಗಿದೆ. ಪ್ರಸ್ತುತದಲ್ಲಿ ಬೇರೆ ಬೇರೆ ಸಮುದಾಯದವರು ಶಿಲ್ಪಕೆಲಸದಲ್ಲಿ ತೊಡಗಿರುವುದನ್ನು ಕಾಣಬಹುದಾಗಿದೆ. ಶಿಲ್ಪಿಗೆ ಇರುತ್ತಿದ್ದ ಗೌರವ ಭಾವನೆಗಳು ಇಂದು ಕಣ್ಮರೆಯಾಗುತ್ತಲಿವೆ. ಆದ್ದರಿಂದ ಇಂದು ಶಿಲ್ಪಗಾರಿಕೆ ಕೇವಲ ಪಂಚಾಳ ಶಿಲ್ಪಿಗಳ ಕುಲಕಸಬಾಗಿ ಉಳಿಯದೇ ಇನ್ನಿತರರ ಪಾರಂಪರಿಕ ಕಸಬಾಗಿ ಮಾರ್ಪಟ್ಟಿದೆ. ಜನರಿಗೆ ಶಿಲ್ಪಕಲೆಯ ಬಗ್ಗೆ ಯಾವುದೇ ಮಾಹಿತಿ ಇಲ್ಲದಿರುವುದರಿಂದ ಶಿಲ್ಪವೃತ್ತಿಯು ಜನಮಾನಸದಿಂದ ದೂರ ಸರಿದಿದೆ. ಈಗೀಗ ಶಿಲ್ಪಕಲಾ ಲೋಕಕ್ಕೂ ಪರ್ಯಾಯವಾಗಿ ಲೋಹಶಿಲ್ಪ, ಕಾಷ್ಠಶಿಲ್ಪಗಳು, ಸಿಮೆಂಟ್ ಶಿಲ್ಪ, ಪ್ಲಾಸ್ಟರ್ ಆಫ್ ಪ್ಯಾರಿಸ್ ಶಿಲ್ಪ, ಯಂತ್ರಗಳು, ಅಮೃತಶಿಲೆಗಳು ಲಗ್ಗೆ ಇಟ್ಟಿರುವುದರಿಂದ ಗ್ರಾಮೀಣ ಪ್ರದೇಶದಲ್ಲಿರುವ ಮೂಲ ಶಿಲ್ಪಿಗಳಿಗೆ ಗೌರವ ಇನ್ನಷ್ಟು ಕಡಿಮೆಯಾಗಿದೆ.

**೩.೬.೧೫ ನಾಲಗಾರಿಕೆ :**

ಒಕ್ಕಲುತನದಲ್ಲಿ ರೈತನಷ್ಟೇ ಪ್ರಾಮುಖ್ಯತೆಯನ್ನು ಪಡೆದಿರುವ ಎತ್ತುಗಳ ಜತನಕ್ಕೆಂದೇ ಉಪಕಸಬುದಾರರಿದ್ದಾರೆ. ಅವರಲ್ಲಿ ನಾಲಗಾರರೂ ಒಬ್ಬರು. ಕುಲಮೂಲ ವೃತ್ತಿಗಳಲ್ಲಿ ಇದು ಪ್ರಮುಖವಾದ ಉಪಕಸಬಾಗಿದೆ. ಇತ್ತೀಚಿಗೆ ಡಾಂಬರು ಹಾಗೂ ಸಿಮೆಂಟು ರಸ್ತೆಗಳಲ್ಲಿ ಎತ್ತುಗಳು ಓಡಾಡುವುದು ಹೆಚ್ಚಾಗುತ್ತಿರುವ ಹಿನ್ನೆಲೆಯಲ್ಲಿ ಅವುಗಳ ಗೊರಸುಗಳು ಸವೆದು, ಬಾಧಿಸುತ್ತವೆ. ರೈತನ ಪ್ರತಿಯೊಂದು ಹೆಜ್ಜೆಯಲ್ಲಿಯೂ ಮಹತ್ತರ ಪಾತ್ರವಹಿಸುವ ಎತ್ತುಗಳ ಆರೋಗ್ಯ ರೈತನಿಗೆ ಅಷ್ಟೇ ಮುಖ್ಯವಾಗಿರುತ್ತದೆ. ಈ ಸಮಸ್ಯೆಯು ಎದುರಾಗುವ ಮುನ್ನ ಅವುಗಳಿಗೆ ನಾಲು(ಲಾಳ) ಹಾಕುವ ರೂಢಿಯೂ ಉಂಟು. ಕಬ್ಬಿಣದ ಲಾಳಗಳನ್ನು ಗೊರಸಿನ ಅಂಚುಗಳಿಗೆ ಇಟ್ಟು, ಕಬ್ಬಿಣದ ಮೊಳೆಗಳನ್ನು ಹೊಡೆಯುವ ಮೂಲಕ ಲಗತ್ತಿಸುವ ಕಾಯಕವೇ ನಾಳಗಾರಿಕೆ. ಇದರ ಜೊತೆಗೆ ಜೊತೆಗೆ ಎತ್ತುಗಳ ಕೊಂಬುಗಳನ್ನು ಕೆತ್ತುವ, ಚೆಂದಗೊಳಿಸಲು ಕೋಡಣಸು–ಗುಂಬ್ರಿ ಹಾಕುವ ಕಾಯಕವನ್ನೂ ನಾಲಗಾರರು ಮಾಡುತ್ತಾರೆ. ಎತ್ತುಗಳಿಗೆ ಮಾತ್ರವಲ್ಲದೇ ಕುದುರೆಗಳಿಗೂ ನಾಲಗಾರರು ಲಾಳಗಳನ್ನು ಹಾಕುತ್ತಿದ್ದರು. ಹಿಂದೆ ಕುದುರೆಗಳ ಬಳಕೆಯೂ ಸಾಕಷ್ಟಿತ್ತು. ಟಾಂಗಾ ಅಥವಾ

ಜಟಕಾ ಬಂಡಿಗಳು, ಬಳೆಗಾರರು, ಸುಣ್ಣಗಾರರು, ಕುರಿಗಾರರು, ಅಗಸರು, ವ್ಯಾಪಾರಸ್ಥರು ಸಾರಿಗೆಗೆ ಬಳಸುತ್ತಿದ್ದ ಕುದುರೆಗಳ ಸಂಖ್ಯೆಯೂ ತೀರಾ ಕ್ಷೀಣಿಸಿದೆ.

**ಆತಂಕಗಳು** : ಇತ್ತೀಚಿಗೆ ಒಕ್ಕಲುತನದಲ್ಲಿ ಎತ್ತುಗಳ ಪಾತ್ರ ಕಡಿಮೆಯಾಗುತ್ತಿದೆ. ಅವುಗಳ ಜಾಗವನ್ನು ಟ್ರ್ಯಾಕ್ಟರ್ ನಂತಹ ಯಂತ್ರಗಳು ಆಕ್ರಮಿಸಿಕೊಂಡಿವೆ. ಎತ್ತುಗಳನ್ನು ಸಾಕಿ ಸಲಹುವು ಇತ್ತೀಚಿನ ರೈತನಿಗೆ ಒಂದುಸವಾಲಾಗಿ ಪರಿಣಮಿಸಿದಂತೆ ತೋರುತ್ತಿದೆ. ಒಕ್ಕಲುತನದಲ್ಲಿ ಎತ್ತುಗಳೇ ಬಿಕ್ಕುವ ಕಾಲಘಟ್ಟದಲ್ಲಿರುವಾಗs ಇನ್ನು... ನಾಲಗಾರರ ಜಾನಪದ ವೃತ್ತಿಗೆ ಜಾಗವಿದೆಯೇ? ಖಂಡಿತಾ ಈ ಕಸಬೂ ಕೂಡಾ ನೇಪಥ್ಯಕ್ಕೆ ಸರಿಯುತ್ತಿದೆ. ಒಕ್ಕಲುತನದಲ್ಲಿ ಅಲ್ಲಲ್ಲಿ ಅನ್ನದಾತನ ಮಿತ್ರನಾಗಿರುವ ಎತ್ತುಗಳ ಗೊರಸುಗಳನ್ನು ಹಾಗೂ ಅಲ್ಲೊಂದು ಇಲ್ಲೊಂದು ಬಳಕೆಯಾಗುತ್ತಿರುವ ಕುದುರೆಗಳ ಗೊರಸುಗಳನ್ನೇ ನಂಬಿರುವ ನಾಲಗಾರರು ಇಂದಿಗೂ ತಮ್ಮ ಕಸಬನ್ನೂ ನಂಬಿದ್ದಾರೆ! ಕುಲವೃತ್ತಿಯಾಗಿದ್ದ ನಾಲಗಾರಿಕೆಗೆ ಇಂದು ಬೇರೆ ಬೇರೆ ಸಮುದಾಯದವರೂ ಲಗ್ಗೆ ಹಾಕಿರುವುದು ಕುಲಮೂಲವೃತ್ತಿಯಾಗಿಸಿಕೊಂಡಿದ್ದ ನಾಲಗಾರರು ನೇಪಥ್ಯಕ್ಕೆ ಸರಿಯುತ್ತಿದ್ದಾರೆ.

ಪ್ರಸ್ತುತ ಅಧ್ಯಾಯದಲ್ಲಿ ಕುಷ್ಟಗಿ ಪರಿಸರದಲ್ಲಿರುವ ವಿಶಿಷ್ಟ ಪಾರಂಪರಿಕ ಕಸಬುಗಳನ್ನು ತುಂಬಾ ವಿಶ್ಲೇಷಣಾತ್ಮಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆದರೆ ಸಾಮಾನ್ಯ ಪಾರಂಪರಿಕ ಕಸಬುಗಳನ್ನು 'ಆನುಷಂಗಿಕವಾಗಿ' ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅವರಲ್ಲಿ ಜನಪದ ವೈದ್ಯರು, ಪಶುವೈದ್ಯರು, ತಳವಾರರು, ಬಯಲು ಅಕ್ಕಸಾಲಿಗರು, ಕುರುಬರು, ಉಪ್ಪಾರರು, ಗಾಣಿಗರು, ಅಂಬಿಗರು, ಎಲಿಗಾರರು, ವೇಷಗಾರರು, ಇಟ್ಟಿಗೆ ತಯಾರಕರು, ಬಾಳೆನಾರಿನ ಉತ್ಪನ್ನಗಳ ತಯಾರಕರು, ಈಚಲು ಚಾಪೆ-ಬುಟ್ಟಿ ಹೆಣೆಯುವವರು, ನಾಲಗಾರರು, ಪಿಂಜಾರರು ಹೀಗೆ ಇನ್ನೂ ಅನೇಕ ಸಾಮಾನ್ಯ ಪಾರಂಪರಿಕ ಕಸಬುದಾರರನ್ನೂ ಕಾಣಬಹುದಾಗಿದೆ. ಕೃಷಿ ಬಹುತೇಕ ಎಲ್ಲ ಜನಾಂಗಗಳ ಪಾರಂಪರಿಕ ಕಸಬಾಗಿರುವುದರಿಂದ ಪ್ರಾಮುಖ್ಯತೆ ನೀಡಿರುವುದಿಲ್ಲ.

ಸಾಮಾಜಿಕ ಜೀವನದಲ್ಲಿ ಪಾರಂಪರಿಕ ಕಸಬುಗಳು ಜನರ ನಡುವಿನ ಸಹಜೀವನ, ಸಹಕಾರ ಮನೋಭಾವನೆ, ಸಮನ್ವತೆ, ಸಹಬಾಳ್ವೆ ಹಾಗೂ ಸಾಮೂಹಿಕ ಬೆಳವಣಿಗೆಗೆ ಸಹಕಾರಿಯಾಗಿವೆ. ಕುಲಕಸಬುಗಳು ಇತ್ತೀಚಿಗೆ ಮರೆಯಾಗುತ್ತಿದ್ದು, ಕಸಬುದಾರರು ತಮ್ಮ ಕುಲಕಸಬಿನಿಂದ ಪಲಾಯನಗೈದು ಬೇರೆ ಉದ್ಯೋಗವನ್ನು ಮಾಡಲು ಹವಣಿಸುತ್ತಿದ್ದಾರೆ.

ಇನ್ನೂ ಕೆಲವು ಕುಲಕಸಬುಗಳನ್ನು ಬೇರೆ ಬೇರೆ ಜನಾಂಗ, ಸಮುದಾಯದವರು ಕಲಿತುಕೊಂಡು ತಮ್ಮ ಮನೆತನದ ಕಸಬನ್ನಾಗಿಸಿಕೊಂಡಿದ್ದಾರೆ. ಅದುವೇ ಮುಂದುವರಿದು ಪಾರಂಪರಿಕ ಕಸಬು ಎನಿಸಿಕೊಳ್ಳುತ್ತದೆ.

ಪ್ರಸ್ತುತ ಆಧುನೀಕರಣ ಮತ್ತು ಜಾಗತೀಕರಣವು ಅನೇಕ ಸಾಂಸ್ಕೃತಿಕ ಅನಾಹುತಗಳನ್ನು, ಸಾಮಾಜಿಕ ಸಂಕಟಗಳನ್ನು, ರಾಜಕೀಯ ದ್ವಂದ್ವ ನೀತಿಗಳನ್ನು ಹುಟ್ಟು ಹಾಕಿರುವುದರಿಂದ ಈಗಾಗಲೇ ಕುಷ್ಟಗಿ ಪರಿಸರದ ಅನೇಕ ಪಾರಂಪರಿಕ ಕಸಬುಗಳು ಅಧಃಪತನ ಕಂಡಿವೆ. ಕಂಬಳಿ ನೇಕಾರಿಕೆಗೆ ಪ್ರಸಿದ್ಧವಾಗಿದ್ದ ಟಕ್ಕಳಕಿ ಗ್ರಾಮ ಹಾಗೂ ವೀರಾಪೂರ ಗ್ರಾಮಗಳಲ್ಲಿ ಮಗ್ಗಗಳು ಮುಗ್ಗು ಹಿಡಿದಿವೆ. ನಾರಿನ ಹಗ್ಗ ತಯಾರಿಕೆಗೆ ಪ್ರಸಿದ್ಧಿ ಪಡೆದಿದ್ದ ಬ್ಯಾಲಿಹಾಳ, ಬೆಂಚಮಟ್ಟಿ, ಮದಲಗಟ್ಟಿ, ಕೊರಡಕೇರಿ ಹಾಗೂ ನಿಡಶೇಸಿ ಗ್ರಾಮಗಳಲ್ಲಿನ ರೈತರೂ ಹಗ್ಗಗಳನ್ನು ಸಂತೆಯಲ್ಲಿ ಕೊಂಡುಕೊಳ್ಳುವ ಸ್ಥಿ(ಗ)ತಿ ಬಂದೊದಗಿದೆ.

ದೈಹಿಕ ಸಾಮರ್ಥ್ಯದ ಜೊತೆಗೆ ಮಾಗಿದ ಅನುಭವದ ಹಿನ್ನೆಲೆಯಲ್ಲಿ ಸಮೃದ್ಧ ಬದುಕು ಕಟ್ಟಿಕೊಂಡಿದ್ದ ಮೂಲ ಕಸಬುದಾರರು ತಮ್ಮ ಪಾರಂಪರಿಕ ಕಸಬನ್ನೇ ಕಳೆದುಕೊಂಡು ಬೀದಿಪಾಲಾಗಿದ್ದಾರೆ, ನಿರುದ್ಯೋಗಿಗಳಾಗಿದ್ದಾರೆ, ಪರಿಸರ ನಿರಾಶ್ರಿತರಾಗಿ, ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಒಟ್ಟಿನಲ್ಲಿ ಉನ್ನತ ವ್ಯಾಸಂಗ ಮಾಡಿದ ವಿದ್ಯಾವಂತರು ವಿದೇಶಗಳಿಗೆ ಪಲಾಯನಗೈದರೆ, ಇಲ್ಲಿ ಅನುಭವಸ್ಥ ಕಸಬುದಾರರು ನಗರಗಳಿಗೆ ಪಾಯನ ಮಾಡುತ್ತಿದ್ದಾರೆ; ಒಟ್ಟಿನಲ್ಲಿ ಈ ಪ್ರತಿಭಾ ಪಲಾಯನದಿಂದಾಗಿ ಸುಂದರವಾಗಿದ್ದ ಗ್ರಾಮೀಣ ಬದುಕು ಅಳಿವಿನ ಅಂಚಿನಲ್ಲಿದೆ.

**ಅಡಿ ಟಿಪ್ಪಣಿಗಳು :**

೧ ಸುಜಾತಾ ಅಕ್ಕಿ, ಡಾ. ಮಂಜುನಾಥ ಬೇವಿನಕಟ್ಟಿ(ಸಂ), ಡಿಸೆಂಬರ್ ೨೦೦೨, **ಜಾನಪದ ಕರ್ನಾಟಕ,** ಪ್ರಸಾರಾಂಗ, ಕನ್ನಡ ವಿವಿ ಹಂಪಿ. ಪುಟ–೧೧೩

೨ ವಿನೋಬಾ, ಪಿ. ವಂಕೋಬರಾವ್(ಅನು), ೧೯೯೪, **ಗ್ರಾಮ ಸ್ವರಾಜ್ಯ,** ಕರ್ನಾಟಕ ಸರ್ವೋದಯ ಸಾಹಿತ್ಯ ಸಮಿತಿ, ಬೆಂಗಳೂರು. ಪುಟ–೪೩

೩ ನಂಜಯ್ಯ ಹೊಂಗನೂರು. ಎಮ್. ಶಿವಕುಮಾರ ಕಾರೇಪುರ(ಸಂ), ೨೦೧೪, **ಗ್ರಾಮಮುಖಿ,** ಅಭಿವ್ಯಕ್ತಿ ಸಾಂಸ್ಕೃತಿಕ ವೇದಿಕೆ, ಬೆಂಗಳೂರು. ಪುಟ–೯೮

೪ ಮಂಜುನಾಥ ಬೇವಿನಕಟ್ಟಿ, ೨೦೧೬, **ಜನ ಜಾನಪದ,** ಗೌತಮ ಬುಕ್ ಹೌಸ್, ಕಮಲಾಪುರ. ಪುಟ–೧೮

೫ ಪ್ರಸನ್ನ, ೨೦೦೯, **ಯಂತ್ರಗಳನ್ನು ಕಳಚೋಣ ಬನ್ನಿ,** ಒಂಟಿದನಿ ಪ್ರಕಾಶನ, ಹೆಗ್ಗೋಡು. ಪುಟ–೧೫೫ & ೧೫೬

೬ ವಿನೋಬಾ, ಪಿ. ವಂಕೋಬರಾವ್(ಅನು), ೧೯೯೪, **ಗ್ರಾಮ ಸ್ವರಾಜ್ಯ,** ಕರ್ನಾಟಕ ಸರ್ವೋದಯ ಸಾಹಿತ್ಯ ಸಮಿತಿ, ಬೆಂಗಳೂರು. ಪುಟ–೩೫

೭ ನೀಲತ್ತಹಳ್ಳಿ ಕಸ್ತೂರಿ, ೨೦೧೪, **ಗಾಂಧೀ ತತ್ವಚಿಂತನೆ,** ಪ್ರಸಾರಾಂಗ ಕನ್ನಡ ವಿವಿ, ಹಂಪಿ, ಪುಟ–೬೫

೮ ನಾರಾಯಣಸ್ವಾಮಿ. ಕೆ.ಎಸ್.,(೧೯೯೮) **ಮಹಾತ್ಮ ಮೋಹನದಾಸ ಕರಮಚಂದ್ ಗಾಂಧಿ,** ಶಾಂತಿವನ ಟ್ರಸ್ಟ್, ಧರ್ಮಸ್ಥಳ. ಪುಟ–೯೩

೯ ದಿವಾಕರ.ನಾ., ೨೦೧೩, **ದಲಿತರು–ವಿಮೋಚನೆಯ ಹಾದಿ : ಒಂದು ಅವಲೋಕನ,** ನವಕರ್ನಾಟಕ ಪ್ರಕಾಶನ, ಬೆಂಗಳೂರು. ಪುಟ–೯೩

೧೦ ಪ್ರಧಾನ್ ಗುರುದತ್ತ(ಸಂ), ೨೦೧೩, **ಡಾ.ಬಾಬಾಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು.** ಸಂಪುಟ–೪, ಕನ್ನಡ ಮತ್ತು ಸಂಸ್ಕೃತಿ ಇಲಾಖೆ & ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು. ಪುಟ–೧೫೭

೧೧ ಇರ್‌ಫಾನ್ ಹಬೀಬ್, ೨೦೧೩, **ಪ್ರಾಚೀನ ಭಾರತದಲ್ಲಿ ಜಾತಿಗಳ ಉಗಮ,** ನವಕರ್ನಾಟಕ ಪ್ರಕಾಶನ, ಬೆಂಗಳೂರು. ಪುಟ ೨೩ ಮತ್ತು ೨೪

೧೨ ದತ್ತೋಪಂತ ಠೇಂಗಡಿ, ೨೦೧೧, **ಸಾಮಾಜಿಕ ಕ್ರಾಂತಿಸೂರ್ಯ – ಡಾ. ಬಾಬಾಸಾಹೇಬ್ ಅಂಬೇಡ್ಕರ್.** ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು. ಪುಟ–೧೩೭

೧೩ ಅದೇ ಪುಟ-೨೦೬

೧೪ ಅದೇ ಪುಟ-೨೦೭

೧೫ ಶೇಷ ನವರತ್ನ(ಅನು), ೨೦೧೧, **ಮನುಸ್ಮೃತಿ**, ಸಮಾಜ ಪುಸ್ತಕಾಲಯ, ಧಾರವಾಡ. ೧೦ನೇ ಅಧ್ಯಾಯ-೧೦೦ನೇ ಶ್ಲೋಕ. ಪುಟ – ೪೬೭ & ೪೬೮

೧೬ ಕೆ.ಶರಣಪ್ಪ ನಿಡಶೇಸಿ, ಕೆ.ಶರಣಪ್ಪ ನಿಡಶೇಸಿ,(ಸಂ) ೨೦೦೨, **ಕೃಷ್ಣಗಿರಿ ಸಾಹಿತ್ಯ ಸಿರಿ**, (ಕುಷ್ಟಗಿ ತಾಲ್ಲೂಕಾ ದ್ವಿತಿಯ ಕನ್ನಡ ಸಾಹಿತ್ಯ ಸಮ್ಮೇಳನ, ಹನಮಸಾಗರ, ಸ್ಮರಣ ಸಂಚಿಕೆ), ಕಸಾಪ,ಕುಷ್ಟಗಿ. ಪುಟ-೮೦.

೧೭ ಮಹೇಶ ತಿಪ್ಪಶೆಟ್ಟಿ, ೨೦೦೦, **ಇಳಕಲ್ಲ ಸೀರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ-೩

೧೮ ಚಂದ್ರಶೇಖರಯ್ಯ ಬಿ.ಎಮ್., ೨೦೦೫, **ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಂಪರೆ**, ಸಿವಿಜಿ ಪ್ರಕಾಶನ ಬೆಂಗಳೂರು. ಪುಟ-೬೬

೧೯ ಹಿರೇಮಠ ಬಿ.ಕೆ., ಕರೀಗೌಡ ಬೀಚನಹಳ್ಳಿ(ಸಂ),೨೦೦೦, **ಕನ್ನಡ ವಿವಿ ವಿಶ್ವಕೋಶ : ೨ ಕರಕುಶಲ ಕಲೆಗಳು**. ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ-೬

೨೦ ಪಾರ್ವತಿ ನಿಡಶೇಸಿ ಹೇಳಿದ್ದು, ದಿನಾಂಕ : ೧೫.೮.೨೦೧೬

೨೧ ಕಂದಗಲ್ಲ. ಪಿ.ಎಸ್., ೨೦೦೫, **ಇಳಕಲ್ಲ ಸೀರೆ : ಬಣ್ಣ ಹಾಗೂ ವಿನ್ಯಾಸ-ಒಂದು ಅಧ್ಯಯನ**, (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. ಪುಟ-೫೦

೨೨ ಕರೀಗೌಡ ಬೀಚನಹಳ್ಳಿ, ಕರೀಗೌಡ ಬೀಚನಹಳ್ಳಿ(ಸಂ),೨೦೦೦, **ಕನ್ನಡ ವಿವಿ ವಿಶ್ವಕೋಶ : ೨ ಕರಕುಶಲ ಕಲೆಗಳು**. ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ-೪೭

೨೩ ಕಂದಗಲ್ಲ. ಪಿ.ಎಸ್., ೨೦೦೫, **ಇಳಕಲ್ಲ ಸೀರೆ : ಬಣ್ಣ ಹಾಗೂ ವಿನ್ಯಾಸ-ಒಂದು ಅಧ್ಯಯನ**, (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. ಪುಟ-೨೧೭

೨೪ ರಾಜೇಶ್ವರಿ ಮಹೇಶ್ವರಯ್ಯ, ಕರೀಗೌಡ ಬೀಚನಹಳ್ಳಿ(ಸಂ),೨೦೦೦, **ಕನ್ನಡ ವಿವಿ ವಿಶ್ವಕೋಶ : ೨ ಕರಕುಶಲ ಕಲೆಗಳು**. ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ-೬೫

೨೫ ಮಲ್ಲಿಕಾರ್ಜುನ ಬನ್ನಿ, ೨೦೧೦, **ಗುಳೇದಗುಡ್ಡದ ಖಣಗಳು**, ಪ್ರಸಾರಾಂಗ, ಕನ್ನಡ ವಿವಿ ಹಂಪಿ, ಪುಟ-೨

೨೬ ಪಾರ್ವತಿ ನಿಡಶೇಸಿ ಹೇಳಿದ್ದು, ದಿನಾಂಕ : ೧೫.೮.೨೦೧೬

೨೭ ರಮೇಶ್.ಸ.ಚಿ., ೨೦೧೦, ಕರ್ನಾಟಕದ ಜನಪದ ಆಚರಣೆಗಳು, ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ-೧೨೭

೨೮ ಕುರುವ ಬಸವರಾಜ್, ಕರೀಗೌಡ ಬೀಚನಹಳ್ಳಿ(ಸಂ),೨೦೦೦, **ಕನ್ನಡ ವಿವಿ ವಿಶ್ವಕೋಶ : ೨ ಕರಕುಶಲ ಕಲೆಗಳು**. ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ-೫೨

೨೯ ನರಸಿಂಹನ್ ಅ.ಲ., ಕರೀಗೌಡ ಬೀಚನಹಳ್ಳಿ(ಸಂ),೨೦೦೦, **ಕನ್ನಡ ವಿವಿ ವಿಶ್ವಕೋಶ : ೨ ಕರಕುಶಲ ಕಲೆಗಳು**. ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ – ೨೮

೩೦ ಗೀತಾಬಾಲಿ ನಾಯಕ್, ಕರೀಗೌಡ ಬೀಚನಹಳ್ಳಿ(ಸಂ),೨೦೦೦, **ಕನ್ನಡ ವಿವಿ ವಿಶ್ವಕೋಶ : ೨ ಕರಕುಶಲ ಕಲೆಗಳು**. ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ – ೫೬

೩೧ Wikipedia>wiki>Turban>History

೩೨ ಗೀತಾಬಾಲಿ ನಾಯಕ್, ಕರೀಗೌಡ ಬೀಚನಹಳ್ಳಿ(ಸಂ),೨೦೦೦, **ಕನ್ನಡ ವಿವಿ ವಿಶ್ವಕೋಶ : ೨ ಕರಕುಶಲ ಕಲೆಗಳು**. ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ – ೫೭

೩೩ ಭಾಸ್ಕರ್ ಟಿ.ಎಂ.(ಸಂ), ೨೦೦೯, **ಕಸುಬಿನ ಹಾಡುಗಳು**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು. ಪುಟ-೪೬೧

೩೪ ನಾವಲಗೆ. ಸಿ.ಕೆ. ೧೯೮೯, **ಜಾನಪದ ಸ್ಪಂದನ**, ಭರತ ಪ್ರಕಾಶನ, ಗೋಕಾಕ. ಪುಟ-೯೪

೩೫ ತಿಮ್ಮಾರೆಡ್ಡಿ ಎಸ್.ವೈ., ೨೦೧೨, **ಕುಲಕಸುಬುಗಳು ಮತ್ತು ಆಧುನಿಕತೆ** ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. ಪುಟ-೧೬೫

೩೬ ಕಿಶನ್‌ರಾವ್ ಕುಲ್ಕರ್ಣಿ, ೨೦೦೭, ತಲೆಗೂದಲಿಗೂ ಬೆಲೆ! ಕೇಶೋದ್ಯಮ ಕಲೆಯ ಭಾಗ್ಯನಗರ, (೩೦ ಅಗಸ್ಟ್ ೨೦೦೭), **ತರಂಗ** ವಾರ ಪತ್ರಿಕೆ, ಮಣಿಪಾಲ. ಪುಟ-೫೮

೩೭ ವೀರೇಶ ಬಡಿಗೇರ, ಕರೀಗೌಡ ಬೀಚನಹಳ್ಳಿ(ಸಂ),೨೦೦೦, **ಕನ್ನಡ ವಿವಿ ವಿಶ್ವಕೋಶ : ೨ ಕರಕುಶಲ ಕಲೆಗಳು**. ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ-೧೩೮.

೩೮ ಎಚ್.ಎಸ್.ಪಾಟೀಲ-**ಕಿನ್ನಾಳ ಕಲೆ**. ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ, ಸೇಡಮ್. ಪುಟ-೨೯

೩೯ ಸುರೇಂದ್ರನಾಥ್ ಡಿ.ಆರ್. ತುರುವನೂರು, ೨೦೧೪, ಆಧುನಿಕ ಪಥದಲ್ಲಿ ಕಿನ್ನಾಳ ಕಲೆ,( **ಪ್ರಜಾವಾಣಿ**, ಕರ್ನಾಟಕ ದರ್ಶನ, ದಿನಾಂಕ:-೯.೧೨.೨೦೧೪) ಪ್ರಜಾವಾಣಿ, ಬೆಂಗಳೂರು. ಪುಟ-೨

೪೦ ಎಚ್.ಎಸ್.ಪಾಟೀಲ-**ಕಿನ್ನಾಳ ಕಲೆ**. ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ, ಸೇಡಮ್. ಪುಟ-೪೩

೪೧ ಅದೇ ಪುಟ-೪೪

೪೨ ಪಾಟೀಲ್ ಎಸ್.ಸಿ., ಕರೀಗೌಡ ಬೀಚನಹಳ್ಳಿ(ಸಂ),೨೦೦೦, **ಕನ್ನಡ ವಿವಿ ವಿಶ್ವಕೋಶ : ೨ ಕರಕುಶಲ ಕಲೆಗಳು**. ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ-೧೦೩

೪೩ ಶ್ರೀಕಂಠಯ್ಯ, ೧೯೮೨, **ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ**, ಗೀತಾ ಬುಕ್ ಹೌಸ್, ಮೈಸೂರು. ಪುಟ-೩೫೨

೪೪ ಹನಮಗೌಡ.ಸಿ., ೨೦೦೧, **ಕುಷ್ಟಗಿ ತಾಲೂಕ ದರ್ಶನ**, ಕುಂತಳ ಪ್ರಕಾಶನ,ಕೊರಡಕೇರಾ, ಪುಟ-೯.

೪೫ ಮಂಜುನಾಥ ಬೇವಿನಕಟ್ಟಿ, ೨೦೦೩, ಜನ ಜಾನಪದ, ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ-೨೬

೪೬ ಸೋಮಶೇಖರ ಇಮ್ರಾಪುರ, ೧೯೮೨, **ಜಾನಪದ ಸಾಹಿತ್ಯ ದರ್ಶನ-ಭಾಗ-೨**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಪುಟ ೧೭೮

೪೭ ಸುಭಾಷ್ ಕಮ್ಮಾರ್,ಸಿ., ಕರೀಗೌಡ ಬೀಚನಹಳ್ಳಿ(ಸಂ),೨೦೦೦, **ಕನ್ನಡ ವಿವಿ ವಿಶ್ವಕೋಶ : ೨ ಕರಕುಶಲ ಕಲೆಗಳು**. ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ-೩೫೬

೪೮ ಸೋಮಶೇಖರ ಇಮ್ರಾಪುರ, ೧೯೮೨, **ಜಾನಪದ ಸಾಹಿತ್ಯ ದರ್ಶನ-ಭಾಗ-೭**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಪುಟ ೧೬೬

೪೯ ಕುಮಾರಸ್ವಾಮಿ ಕೆ.ಎಸ್., ೧೯೯೬, **ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರ್ಯರು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ಪುಟ-೭೬

೫೦ ನೇತ್ರಾವತಿ ಕೆ.ವಿ., ೨೦೦೩, **ಕಮಲಾಪುರದ ಕೊರವರ ಸಮುದಾಯ : ಪರಿಶೋಧನೆ** (ಅಂಶಿಕ ಸಂಪ್ರಬಂಧ), ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪುಟ-೯

೫೧ ಈರಣ್ಣ ಎನ್. ಕೋಸಗಿ, ೧೯೯೧, **ಕೊರವರು**, ಕೋಸಗಿ ಪ್ರಕಾಶನ, ರಾಯಚೂರು. ಪುಟ-೨

೫೨ ಅದೇ ಪುಟ-೧೧ & ೧೨

೫೩ ಚಕ್ಕರೆ ಶಿವಶಂಕರ, ೨೦೦೮, **ಜಾನಪದ ತಳುವಳಿಕೆ**, ಸಾಗರ್ ಪ್ರಕಾಶನ, ಬೆಂಗಳೂರು. ಪುಟ-೧೯೧ & ೧೯೨

೫೪ ರಮೇಶ್.ಸ.ಚಿ., ೨೦೧೦, **ಕರ್ನಾಟಕದ ಜನಪದ ಆಚರಣೆಗಳು**, ಪ್ರಸಾರಾಂಗ ಕನ್ನಡ ವಿವಿ, ಹಂಪಿ. ಪುಟ-೨೧೦

೫೫ ಮಂಜುನಾಥ ಬೇವಿನಕಟಿ, ೨೦೧೫, **ಏಳುಕೊಳ್ಳ ಏಳುಕೋಟಿ**, ಗೀತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ. ಪುಟ-೧೧೮

೫೬ ಕೆ. ಶರಣಪ್ಪ ನಿಡಶೇಸಿ, ೨೦೦೧, ಅತಂತ್ರ ಸ್ಥಿತಿಯಲ್ಲಿ ಅಗಸರ ಬದುಕು (ಕರ್ಮವೀರ ವಾರ ಪತ್ರಿಕೆ, ೦೭. ೧೦. ೨೦೦೧), **ಕರ್ಮವೀರ**, ಬೆಂಗಳೂರು. ಪುಟ-೫೩.

೫೭ ಕೆ. ಶರಣಪ್ಪ ನಿಡಶೇಸಿ, ೨೦೦೦, ಪಂಜಾಬ್ ಮೂಲ ಸ್ವಂತಿಕೆಯಲ್ಲಿದೆ ಬಲ, (ವಿಜಯ ಕರ್ನಾಟಕ-೮ನೇ ನವೆಂಬರ್ ೨೦೦೦), **ವಿಜಯ ಕರ್ನಾಟಕ**, ಬೆಂಗಳೂರು.

೫೮ ಭಾಸ್ಕರ್ ಟಿ.ಎಂ.(ಸಂ), ೨೦೦೯,**ಕಸುಬಿನ ಹಾಡುಗಳು**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ,ಬೆಂಗಳೂರು. ಪುಟ-೪೬೧

೫೯ ಕೆ. ಶರಣಪ್ಪ ನಿಡಶೇಸಿ, ೨೦೦೨, ಕಲ್ಲು ನಂಬಿದ ಕಲ್ಲೋಜರ ಬದುಕು, (ಜನಪದ ಮಾಸ ಪತ್ರಿಕೆ-ಜನವರಿ ೨೦೦೨), **ಜನಪದ**, ಬೆಂಗಳೂರು. ಪುಟ-೫

೬೦ ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳವರು, ೧೯೮೯, ಶಿಲ್ಪ ಸಂದೇಶ, (ಇದರಲ್ಲಿ ; **ಸಂಸ್ಕೃತಿ ಪ್ರವೇಶ**, ಶ್ರೀಮತಿ ಸರಿತಾ ಜ್ಞಾನಾನಂದ, ಎನ್. ಮರಿಶಾಮಾಚಾರ್ (ಸಂ)), ವಿಶ್ವಕರ್ಮ ವಿದ್ಯಾಪೀಠ, ಬೆಂಗಳೂರು. ಪುಟ-೨೮.

೬೧ ಶೇಖರಾಚಾರಿ ಕೆ., ೨೦೧೧, **ಪಾಂಚಾಳರ ಬದುಕು ಮತ್ತು ಸಂಸ್ಕೃತಿ**, ಪ್ರಸಾರಾಂಗ, ಕನ್ನಡ ವಿವಿ, ಹಂಪಿ. ಪುಟ-೩೭

*

## ಅಧ್ಯಾಯ ನಾಲ್ಕು

# ಪಾರಂಪರಿಕ ಕಸಬುಗಳ ಸಮಸ್ಯೆಗಳು ಮತ್ತು ಪರಿಹಾರಗಳು


೪.೧ ಪಾರಂಪರಿಕ ಕಸುಬುದಾರರ ಮಾರಾಟ ಪ್ರಕ್ರಿಯೆಯ ಸಮಸ್ಯೆಗಳು

೪.೨ ಮಾರಾಟ ಪ್ರಕ್ರಿಯೆಯ ಸಮಸ್ಯೆಗೆ ಪರಿಹಾರೋಪಾಯಗಳು

೪.೩ ನೇಪಥ್ಯಕ್ಕೆ ಸರಿಯುತ್ತಿರುವ ಪಾರಂಪರಿಕ ಕಸಬುಗಳು

### ಅಧ್ಯಾಯ ನಾಲ್ಕು

## ಪಾರಂಪರಿಕ ಕಸಬುಗಳ ಸಮಸ್ಯೆಗಳು ಮತ್ತು ಪರಿಹಾರಗಳು

ಭಾರತ ಈಗ ಹಳ್ಳಿಗಳ ದೇಶವಲ್ಲ, ಬದಲಾಗಿ ಸಂಕೀರ್ಣ ಭಾರತ! ಜ'ಗತ್ತಿನ' ಎಲ್ಲ ಕ್ಷೇತ್ರಗಳ ಮೇಲೆ ಸವಾರಿ ಮಾಡಿದ ಆಧುನೀಕರಣ ಹಾಗೂ ಜಾಗತೀಕರಣಗಳು ಜನಪದರ ಜೀವನದ ಮೇಲೆಯೂ ತನ್ನ ಪ್ರಭಾವ ಬೀರಿವೆ. ಭಾರತದಲ್ಲಿಯೂ ಪಾರಂಪರಿಕ ಕ್ಷೇತ್ರವನ್ನೂ ಒಳಗೊಂಡಂತೆ ಎಲ್ಲಾ ಕ್ಷೇತ್ರಗಳನ್ನು ಯಾಂತ್ರೀಕರಿಸಲು ಆಧುನೀಕರಣ ಹಾಗೂ ಜಾಗತೀಕರಣಗಳು ಸಂಘರ್ಷಕ್ಕಿಳಿದಿವೆ ಎನ್ನಬಹುದು. ಇದೀಗ ಈ ಸಂಘರ್ಷದೊಂದಿಗೆ ಜನಪರ, ಜೀವಪರ ಬದುಕು ಪರಿವರ್ತನೆಗೊಳ್ಳುತ್ತಾ ಹಲವು ಸಮಸ್ಯೆಗಳನ್ನು ಸ್ವೀಕರಿಸಿದೆ. ಕೃಷಿಯಲ್ಲಿನ ಆಧುನೀಕರಣವು ಇಡೀ ವರ್ಷಪೂರ್ತಿ ನಡೆಯುತ್ತಿದ್ದ ಒಕ್ಕಲುತನವನ್ನು ಕೆಲವೇ ತಿಂಗಳುಗಳಿಗೆ ಸೀಮಿತಗೊಳಿಸಿದೆ. ಕೃಷಿಯೊಂದಿಗಿನ ಜನಪದರ ಬದುಕು ಕೂಡಾ ಸೀಮಿತಗೊಂಡಿದೆ. ರೈತನ ಸಹಾಯಕ ಕಸಬುದಾರರು ಅಥವಾ ಆಯಗಾರರು ಎನಿಸಿಕೊಂಡಿದ್ದ ಕಮ್ಮಾರ, ಬಡಿಗ, ಕುಂಬಾರ, ಚಮ್ಮಾರ, ಹೂಗಾರ, ನಾಲಗಾರ, ಮಡಿವಾಳ ಕುಲಕಸಬುಗಳು ಇಂದು ವಿಘಟನೆಗೊಂಡಿವೆ. ಇವು ಆಧುನಿಕ ವಸ್ತುಗಳೊಂದಿಗೆ ಸ್ಪರ್ಧಿಸಲಾರದೇ ಅವಸಾನದ ಅಂಚಿನಲ್ಲಿವೆ.

ಮನರಂಜನೆಯ ಹೆಸರಿನಲ್ಲಿ ದೃಕ್-ಶ್ರವಣ ಮಾಧ್ಯಮಗಳು ಹಾಗೂ ಜಾಹೀರಾತುಗಳು ಗ್ರಾಮೀಣ ಭಾರತದ ಸಂಸ್ಕೃತಿಯನ್ನು ಕೀಳರಿಮೆಗೆ ತಳ್ಳಿರುವುದರ ಜೊತೆಗೆ ಕಸಬುಗಳ ಪ್ರತಿಭಾಪಲಾಯನಕ್ಕೆ ಪ್ರಚೋದನೆ ನೀಡುವಂತಿವೆ. ಗಾಂಧೀಜಿಯವರ ಕನಸಾದ ಗ್ರಾಮಸ್ವರಾಜ್ಯ ಇನ್ನಷ್ಟು ಸಂಕೀರ್ಣಗೊಳ್ಳುತ್ತಿದೆ. ನಗರದಲ್ಲಿ ಮಾತ್ರ ಸಿಕ್ಕುತ್ತಿದ್ದ ದಿನ ನಿತ್ಯ ಉಪಯೋಗಿಸುತ್ತಿದ್ದ ಎಲ್ಲ ವಸ್ತುಗಳೂ ಗ್ರಾಮಗಳನ್ನು ತಲುಪುತ್ತಿರುವುದರಿಂದ ಗ್ರಾಮೀಣ ಜನರ ಜೀವನ ಶೈಲಿಯೂ ಬದಲಾಗಿದೆ. ಜನಪದರಲ್ಲಿ ದೈಹಿಕ ಶ್ರಮ ಕಡಿಮೆಯಾಗುತ್ತಿದೆ. ಅನಾದಿ ಕಾಲದಿಂದಲೂ ಕಾಪಾಡಿಕೊಂಡು ಬಂದಿದ್ದ ಪಾರಂಪರಿಕ ಕಸಬುಗಳಂತಹ ಶ್ರಮ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡಲ್ಲಿ ಮಾತ್ರ ನಮ್ಮತನವನ್ನು ಉಳಿಸಿಕೊಂಡು ಬದಲಾವಣೆಯನ್ನು ನಿರೀಕ್ಷಿಸಬಹುದಾಗಿದೆ.

ಪುರಾತನ ಕಾಲದಿಂದ ವಂಶ ಪಾರಂಪರ್ಯವಾಗಿ ಬೆಳೆದು ಬಂದಿರುವ ಕಸಬುಗಳು ಆಧುನೀಕರಣ ಹಾಗೂ ಜಾಗತೀಕರಣದ ಪ್ರಭಾವದಿಂದಾಗಿ ಅನೇಕ ಸಮಸ್ಯೆಗಳ ಸುಳಿಗೆ ಸಿಲುಕಿವೆ. ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳಲ್ಲಿ ಕೆಲವು ಕಸಬುಗಳು ಪರಿಸರದಿಂದ ಕಣ್ಮರೆಯಾಗಿವೆ. ಈಗ್ಯೆ ನಾಲ್ಕಾರು ವರ್ಷಗಳ ಹಿಂದೆಯಷ್ಟೇ ಕುಷ್ಟಗಿ ತಾಲ್ಲೂಕಿನ ಟಕ್ಕಳಕಿ ಹಾಗೂ ಹುನಗುಂದ ತಾಲ್ಲೂಕಿನ ವೀರಾಪುರದ ಕಂಬಳಿಗಳು ಡೆಹರಾಡೂನ್‌ವರೆಗೂ ಹಾರಿದ್ದವು! ಇಂದು ಅಲ್ಲಿ ಉಣ್ಣೆ ಇಲ್ಲದ ಪ್ರಯುಕ್ತ ಕಂಬಳಿ ನೇಕಾರಿಕೆಯನ್ನೇ ನಿಲ್ಲಿಸಿದ್ದಾರೆ! ಮಗ್ಗಗಳಿಗೆ ಮುಗ್ಗು ಹಿಡಿದಿವೆ! ಉತ್ತಮ ಸಂಸ್ಕೃತಿಗೆ, ಸಾಂಸ್ಕೃತಿಕ ಬದುಕಿಗೆ ಜಗತ್ತಿಗೇ ಮಾದರಿಯಾಗಿರುವ ಭಾರತದ ಜನಪದರ ಬದುಕು ಆಧುನಿಕತೆಯ ಸೋಗಿನಲ್ಲಿ ಸದ್ದಡಗುತ್ತಿರುವುದು ನಮ್ಮ ದೇಶದ ಭವ್ಯ ಪರಂಪರೆ ಅಧಃಪತನಕ್ಕೆ ನಾಂದಿಯಾಗಲಿರುವುದು ವಿಪರ್ಯಾಸವೇ ಸರಿ! ಈ ಭವ್ಯ ಪರಂಪರೆಯನ್ನು ಉಳಿಸಿ-ಬೆಳೆಸಿಕೊಂಡು ಹೋಗಲು ನಮ್ಮ ಪರಂಪರೆ ಹಾಗೂ ಪಾರಂಪರಿಕ ಕಸಬುಗಳನ್ನು ಪುನಃಶ್ಚೇತನಗೊಳಿಸುವುದೂ ತೀರಾ ಮುಖ್ಯವಾಗಿದೆ.

### ೪.೧ ಪಾರಂಪರಿಕ ಕಸಬುದಾರರ ಮಾರಾಟ ಪ್ರಕ್ರಿಯೆಯ ಸಮಸ್ಯೆಗಳು :

"ಎಲ್ಲಾರು ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ..." ಹಾಗೂ "ರೊಕ್ಕ ಎರಡಕ್ಕೂ ದುಃಖ ಕಾಣಕ್ಕ..." ಎಂಬ ಪುರಂದರ ದಾಸರ ಈ ಎರಡು ಕೀರ್ತನೆಗಳು ನಮ್ಮ ಕಸಬುದಾರರಿಗೆ ನೇರವಾಗಿ ಅನ್ವಯಿಸುತ್ತದೆ. ಪಾರಂಪರಿಕ ಕಸಬುಗಳು ಆರ್ಥಿಕ ತಳಹದಿಯ ಮೇಲೆ ನಿಂತಿವೆ. ಯಾವುದೇ ದೇಶದ ಆರ್ಥಿಕ ವಲಯ ಮೂಲತಃ ವ್ಯಾಪಾರ-ವಹಿವಾಟುಗಳ ಮೂಲಕ ನಡೆಯುತ್ತದೆ. ಈ ವ್ಯಾಪಾರ-ವಹಿವಾಟುಗಳು ಎರಡು ಮೂಲ ನೆಲೆಯಿಂದ ಆವಿರ್ಭವಿಸುತ್ತಿದೆ. ಒಂದು : ಉತ್ಪಾದನೆ; ಎರಡು : ಮಾರಾಟ. ಅರ್ಥಶಾಸ್ತ್ರದಲ್ಲಿ ಜಗತ್ತಿನ ಪ್ರತಿಷ್ಠಿತ ನೋಬೆಲ್ ಪುರಸ್ಕೃತ ನಮ್ಮ ದೇಶದ ಹೆಮ್ಮೆಯ ಅರ್ಥಶಾಸ್ತ್ರಜ್ಞ, ಭಾರತ ರತ್ನ ಡಾ. ಅಮರ್ತ್ಯ ಸೇನ್ "Economics has had two rather different origins, both related to politics, but related in rather different ways, concerned respectively with 'ethics', on the one hand, and with that may be called 'engineering', on the other. The ethics-related tradition goes back at least to Aristotle. At the very beginning of the Nicomachean Ethics, Aristotle relates the subject of economics to human ends, referring to its concern with wealth."[೧]

ಎಂದು ಅಭಿಪ್ರಾಯವನ್ನು ಮಂಡಿಸಿ, ಆರ್ಥಿಕತೆಯಲ್ಲಿ ಧರ್ಮ ಸಿದ್ಧಾಂತ ಹಾಗೂ ಯಂತ್ರ ವಿದ್ಯೆ ಎರಡು ಮೂಲತತ್ವಗಳನ್ನೊಳಗೊಂಡಿರಬೇಕೆಂದು ಪ್ರತಿಪಾದಿಸಿರುವುದು ಪಾರಂಪರಿಕ ಕಸಬುಗಳು ಆಧುನಿಕತೆಯನ್ನು ಮೈಗೂಡಿಸಿಕೊಳ್ಳಬೇಕೆಂಬುದಕ್ಕೆ ಅನ್ವಯಿಸುತ್ತಿದೆ.

ನಮ್ಮ ದೇಶದ ಕೃಷಿ ವಲಯ, ಕೈಗಾರಿಕಾ ವಲಯ ಹಾಗೂ ಸೇವಾ ವಲಯಗಳಲ್ಲಿ ಪರಸ್ಪರ ಹೊಂದಾಣಿಕೆ ಇಲ್ಲವಾಗಿದೆ. ಹೀಗಾಗಿ ಈ ಮೂರೂ ವಲಯಗಳಲ್ಲಿ ಅನ್ಯರ ಆಗಮನವಾಗಿದೆ. ಸ್ವತಃ ಕೃಷಿಕರೇ ಭೂಮಿಯನ್ನು ನಂಬಲಾರದೇ ಹೋಗಿದ್ದಾರೆ. ಇವರನ್ನೇ ನಂಬಿರುವ ಕೃಷಿಕಾರ್ಮಿಕರ ದುಡಿವ ಕೈಗಳಿಗೆ ಕೆಲಸವಿಲ್ಲದ್ದಕ್ಕಾಗಿ ಕಂಗೆಟ್ಟು ನಗರಗಳಿಗೆ ಗುಳೆ ಹೋಗುತ್ತಿದ್ದಾರೆ. ಇವರನ್ನೇ ನಂಬಿದ್ದ ನಮ್ಮ ಕಸಬುದಾರರು ದಿಕ್ಕೆಟ್ಟಿದ್ದಾರೆ! ಜನರು ಗ್ರಾಮ ಭಾರತದ ಹಳ್ಳಿಗಳಲ್ಲೂ ಬದುಕಲಾಗದೇ, ನಗರದಲ್ಲೂ ನೆಲೆ ಕಂಡುಕೊಳ್ಳಲಾಗದೇ ಅತಂತ್ರರಾಗಿದ್ದಾರೆ. ಗ್ರಾಮೀಣ ಮಾರುಕಟ್ಟೆಯಲ್ಲಿಯೂ ಬಹುರಾಷ್ಟ್ರೀಯ ಕಂಪನಿಗಳು ಹುಟ್ಟು ಹಾಕುತ್ತಿವೆ.

"ವಿಶ್ವ ವಾಣಿಜ್ಯ ಒಪ್ಪಂದವನ್ನು ಪಾಲಿಸುತ್ತಿರುವ ಸರ್ಕಾರದ ನಿಯಮಗಳು ಸಣ್ಣ ಉದ್ಯಮಗಳ ಪಾಲಿಗೆ ಮಾರಕವಾಗಿ ಪರಿಣಮಿಸಿವೆ. ವಾಸ್ತವವಾಗಿ 'ಸಣ್ಣದು ಸುಂದರ' ಎಂಬ ಗಾಂಧಿವಾದ ಈಗ ಅರ್ಥ ಕಳೆದುಕೊಂಡಿದೆ. ಸಣ್ಣ ಕೈಗಾರಿಕೆಗಳು, ಗುಡಿಕೈಗಾರಿಕೆಗಳು ಇವೆಲ್ಲ ಈವರೆಗೆ ಜನ ನೆಲೆಸಿರುವಲ್ಲೆ ಉದ್ಯೋಗ ಒದಗಿಸಿದ್ದವು. ಭಾರತದಂತಹ ವೈವಿಧ್ಯಮಯ ಬದುಕಿಗೆ ಇದು ಹೇಳಿ ಮಾಡಿಸಿದಂತಿತ್ತು. ಆದರೆ ಜಾಗತೀಕರಣದ ನೀತಿಯ ಪ್ರಕಾರ ದೊಡ್ಡ ಪ್ರಮಾಣದಲ್ಲಿ, ಅಗ್ಗದ ದರದಲ್ಲಿ ಸುಧಾರಿತ ಗುಣಮಟ್ಟದ ಸರಕನ್ನು ಉತ್ಪಾದಿಸಬೇಕು. ಇದು ಗಾಂಧಿ ನೀತಿಯ ಪ್ರಕಾರ ಉದ್ಯೋಗ ಒದಗಿಸುತ್ತದೆಯೇ ಹೊರತು ಬದುಕನ್ನು ಹಸನಾಗಿಸುವುದಿಲ್ಲ."[೨]

ಗಾಂಧೀಜಿಯವರ ಅರ್ಥವ್ಯವಸ್ಥೆಯ ಇನ್ನೊಂದು ಮುಖ್ಯ ಅಂಶ 'ಸ್ವದೇಶಿ'. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಸ್ವದೇಶಿ ಕಲ್ಪನೆ ಇತ್ತ ಸ್ಫೂರ್ತಿ ಅದ್ಭುತ. ಸ್ವಧರ್ಮ–ಸ್ವದೇಶಿ–ಸ್ವರಾಜ್ಯ ಈ ತ್ರಿವಳಿಗಳು ಅಂದಿನ ಘೋಷ ವಾಕ್ಯವಾದವು. ವೀರ ಸಾವರ್ಕರ್ ರಚಿತ "ಭಾರತದ ಮೊದಲನೆಯ ಸ್ವಾತಂತ್ರ್ಯ ಸಂಗ್ರಾಮ" ಮಹಾಗ್ರಂಥದಲ್ಲಿ ಸಹ, 'ಸ್ವದೇಶಿ–ಸ್ವರಾಜ್ಯ' ಒಂದು ಪ್ರತ್ಯೇಕ ಅಧ್ಯಾಯವೇ ಆಗಿದೆ!

ಈ ಸ್ವದೇಶಿಯೂ ಗಾಂಧಿಯವರ ಹನ್ನೊಂದು ವ್ರತಗಳಲ್ಲಿ ಒಂದಾಗಿತ್ತು. ಅಂತೆಯೇ "ನಮ್ಮಿಂದ ದೂರವಿರುವುದನ್ನು ಬಿಟ್ಟು ಹತ್ತಿರದ ಸುತ್ತಮುತ್ತಲಿನಲ್ಲಿ ಆದ ವಸ್ತುಗಳನ್ನು

ಬಳಸುವುದು, ಅಲ್ಲಿನ ಜನರ ಸೇವೆ ಮಾಡುವಂಥ ಭಾವನೆಯೇ ಸ್ವದೇಶಿ. ಆರ್ಥಿಕ ಔದ್ಯೋಗಿಕ ಕ್ಷೇತ್ರದಲ್ಲಿ ಸ್ವದೇಶಿ ತತ್ವವನ್ನು ಕೈಬಿಟ್ಟುದರಿಂದಲೇ ನಮ್ಮ ಜನಸ್ತೋಮಕ್ಕೆ ಕಡುಬಡತನ ಒದಗಿದೆ."[೩] ಎಂದು ಸ್ವತಃ ಗಾಂಧೀಜಿಯವರೇ ಅಂದಿನ ದಿನಗಳಲ್ಲಿಯೇ ಹೇಳಿ, ಎಚ್ಚರಿಸಿದ್ದನ್ನು ಮರೆಯುವಂತಿಲ್ಲ. ಸ್ವದೇಶಿ ಚಳುವಳಿಯ ಜಾಗದಲ್ಲಿಯೂ ಯಂತ್ರ ನುಗ್ಗಿದೆ. ನೂರು ಜನರ ಕೆಲಸವನ್ನು ಹತ್ತು ಜನರು ಯಂತ್ರದ ಜೊತೆಗೂಡಿ ಮಾಡುತ್ತಿದ್ದಾರೆ. ಕೈಮಗ್ಗದ ಸ್ಥಾನದಲ್ಲಿ ವಿದ್ಯುತ್ ಮಗ್ಗಗಳು ಬೀಡುಬಿಟ್ಟಿರುವುದು ಇದಕ್ಕೊಂದು ಸ್ಪಷ್ಟ ನಿದರ್ಶನ. ಅಲ್ಲದೇ ಹತ್ತಿ ಸೀರೆ, ಧೋತಿ, ಟವೆಲ್ಲುಗಳ ಜಾಗದಲ್ಲಿ ಪಾಲಿಸ್ಟರ್ ಬಟ್ಟೆಗಳೂ ಸ್ಥಾನ ಗಿಟ್ಟಿಸಿವೆ. ಮೂರು ಮಗ್ಗ ಇಟ್ಟ ಅಂದಿನ ಮಾಲೀಕ ಇಂದು ಕಾರ್ಮಿಕನ ಸ್ಥಿತಿಗೆ ಇಳಿದರೆ; ಕಾರ್ಮಿಕ ಭಿಕ್ಷುಕನ ಸ್ಥಿತಿಗೆ ಜಾರಿದ್ದಾನೆ! 'ನೇಕಾರನ ಮನೆಯಲ್ಲಿ ದೆವ್ವಕ್ಕೂ ಕೆಲಸ' ಎಂಬ ಗಾದೆ ಅರ್ಥಹೀನ ಸ್ಥಿತಿಗೆ ಬಂದಿದೆ. ಆಂತರಿಕ ಹಾಗೂ ಬಾಹ್ಯ ಪೈಪೋಟಿ, ಅಭಿರುಚಿಯ ಚಂಚಲತೆ, ಕಚ್ಚಾ ವಸ್ತುಗಳ ಬೆಲೆ ಏರಿಕೆ, ವಿದ್ಯುತ್ ಶುಲ್ಕದ ಹೆಚ್ಚಳ ಹಾಗೂ ಕರೆಂಟಿನ ಕಣ್ಣಾಮುಚ್ಚಾಲೆ ಆಟ(ಲೋಡ್ ಶೆಡ್ಡಿಂಗ್), ಪ್ರಚಾರ ಹಾಗೂ ಮಾರುಕಟ್ಟೆಯ ಕೊರತೆಯಂತಹ ಹಲವಾರು ಸಮಸ್ಯೆಗಳು ಪಾರಂಪರಿಕ ಕಸಬಿಗೆ, ಕಸಬುದಾರನಿಗೆ ಉರುಳಾಗಿವೆ.

"ಸಾಂಪ್ರದಾಯಿಕ ಉತ್ಪಾದನಾ ವಿಧಾನಗಳಲ್ಲೇ ತೊಡಗಿರುವ ಉದ್ಯಮಗಳು ಜಾಗತಿಕ ಪೈಪೋಟಿಯಲ್ಲಿ ಸೋತು ಸುಣ್ಣವಾಗುತ್ತಿವೆ. ಕೌಶಲ್ಯವಿಲ್ಲದ ಕಾರ್ಮಿಕ ವರ್ಗವು ದಿಕ್ಕೆಟ್ಟಿದೆ. ಅಭಿವೃದ್ಧಿ ಭ್ರಮೆಯಲ್ಲಿ ಕರಕುಶಲ ಸಮುದಾಯಗಳ ಉತ್ಪಾದನಾ ವಿಧಾನವೇ ಕೊಚ್ಚಿ ಹೋಗಿದೆ. ಪ್ರಭುದ್ಧ ಉತ್ಪಾದನಾ ವಿವೇಚನೆ ಇರುವ ಕಾರ್ಮಿಕ ವರ್ಗವು ಈ ಆರ್ಥಿಕ ವ್ಯವಸ್ಥೆಯ ವಿರೂಪವನ್ನು ತಡೆಯ ಬಲ್ಲುದು. ಅಂತಹ ಪ್ರಬುದ್ಧ ಉತ್ಪಾದನಾ ಪರಿಸರವೇ ಇಲ್ಲವಾಗಿದೆ. ಈ ಪರಿಸ್ಥಿತಿಯಲ್ಲಿ ಸ್ವತಂತ್ರ ಆರ್ಥಿಕತೆಯನ್ನೇ ರೂಪಿಸಲು ಸಾಧ್ಯವಾಗುತ್ತಿಲ್ಲ. ಸ್ವದೇಶಿ ಬಂಡವಾಳಶಾಹಿ ವ್ಯವಸ್ಥೆಯೂ ವಂಚಕತನದ್ದೇ. ವಿದೇಶಿ ಬಂಡವಾಳಶಾಹಿಯೂ ಕ್ರೂರವಾದದ್ದೇ. ಇವೆರಡರ ನಡುವೆ ಸಮಾಜಗಳು ಸಿಕ್ಕಿಕೊಂಡಿವೆ."[೪]

ಇಂದು ಭಾರತದಲ್ಲಿ ಅನೇಕ ಜಾಗತಿಕ ಮಾರಾಟ ವ್ಯವಸ್ಥೆ ಹಾಗೂ ಉತ್ಪಾದನಾ ವಿಧಾನಗಳು ಗ್ರಾಮೀಣ ಪ್ರದೇಶದ ಪಾರಂಪರಿಕ ಕಸಬುಗಳ ಉತ್ಪಾದನಾ ಸಾಮರ್ಥ್ಯವನ್ನು ಕುಗ್ಗಿಸಿ, ಆರ್ಥಿಕ ಸ್ಥಿತಿಯನ್ನು ಹದಗೆಡಿಸಿವೆ. ಆಧುನೀಕರಣ ಇಣುಕು ನೋಟದಿಂದಾಗಿ ನಮ್ಮ ಗ್ರಾಮೀಣ ಜನರು ತಮ್ಮ ಪಾರಂಪರಿಕ ಬದುಕಿನಲ್ಲಿ ಭಿನ್ನ, ವಿಭಿನ್ನ ಹಾಗೂ ಅನ್ಯ ಅಭಿರುಚಿಗಳಿಗೆ ರೂಪಾಂತರ ಹೊಂದಿದ್ದಾರೆ! ಜಗತ್ತಿ ಎಲ್ಲ ಕಸಬುದಾರರು

ಏಕೀಕರಣಗೊಳ್ಳುವ ಆಧುನೀಕರಣ, ಜಾಗತೀಕರಣ ಇಲ್ಲವೇ ಔದ್ಯೋಗಿಕರಣಗಳ ಅವಶ್ಯಕತೆಯಿದೆ. ಆದರೆ ಹಾಗಾಗುತ್ತಿಲ್ಲ; ಪ್ರಚಲಿತ ಭಾರತದಲ್ಲಿ ಅನೇಕ ಪಾರಂಪರಿಕ ಕಸಬುಗಳು ತಮ್ಮ ಉತ್ಪಾದನಾ ಸಾಮರ್ಥ್ಯದಿಂದಾಗಿ ಸ್ವಯಂಪೂರ್ಣ ಘಟಕಗಳಂತೆ ಇವೆ. ಆದರೆ... ಆರ್ಥಿಕ ಒಡೆತನದ ನಿರಾಕರಣೆ, ಮೇಲ್ಜಾತಿಗಳ ತಿರಸ್ಕಾರ, ಕೈಗಾರಿಕಾ ವಸ್ತುಗಳ ಪೈಪೋಟಿ ಹಾಗೂ ಸ್ವತಃ ಪಾರಂಪರಿಕ ಕಸಬುದಾರರು ತಮ್ಮ ಮಕ್ಕಳಿಗೆ ಈ ಕಸಬನ್ನು ಕಲಿಸದೇ ನಾಗರಿಕ ಸಮುದಾಯದತ್ತ ಒಲೈಸುತ್ತಿರುವುದರಿಂದ ಪಾರಂಪರಿಕ ಕಸಬುಗಳು ನಶಿಸುತ್ತಿವೆ. ಕಸಬುಗಳಲ್ಲಿ ಮೇಲು-ಕೀಳು ಎಂಬ ಭಾವನೆ; ಸಾಮಾಜಿಕ ಸ್ತರದಲ್ಲಿ ಮೇಲೆ ಬರುವುದು. ಆಧುನೀಕರಣ, ಜಾಗತೀಕರಣ ಹಾಗೂ ಕೈಗಾರಿಕಾ ಕ್ರಾಂತಿಯ ದುಷ್ಪರಿಣಾಮಗಳಿಂದಾಗಿ ಈ ಕೆಳಕಂಡ ಸಮಸ್ಯೆಗಳನ್ನೂ ಹಾಗೂ ಸವಾಲುಗಳನ್ನೂ ಎದುರಿಸಬೇಕಿದೆ.

**ಸಾಮಾನ್ಯ ಸಮಸ್ಯೆಗಳು :**

➤ 'ಒಗ್ಗಟ್ಟಿನಲ್ಲಿ ಬಲವಿದೆ' ಎಂಬುದನ್ನು ಗಮನದಲ್ಲಿಟ್ಟುಕೊಂಡು ತಮ್ಮ ಬೇಡಿಕೆ, ಸಮಸ್ಯೆಗಳಿಗೆ ಪರಿಹಾರ, ಅನ್ಯಾಯದ ವಿರುದ್ಧದ ಹೋರಾಟಗಳಿಗಾಗಿ ಇಂದು ಸಂಘ ಅಥವಾ ಸಂಘಟನೆಯ ಅವಶ್ಯಕತೆಯಿದೆ. ಬಾಬಾಸಾಹೇಬ ಅಂಬೇಡ್ಕರರವರು ಕರೆ ನೀಡಿರುವಂತೆ 'ಶಿಕ್ಷಣ-ಸಂಘಟನೆ-ಹೋರಾಟ'ಗಳಿಂದ ಮಾತ್ರ ಸಮುದಾಯದ ಏಳಿಗೆ ಸಾಧ್ಯ. ತಮ್ಮ ಏಳಿಗೆಗಾಗಿ ಮಂತ್ರಶಕ್ತಿಯನ್ನು ಹೊಂದಲು ಪಾರಂಪರಿಕ ಕಸಬುದಾರರ ಕ್ರಿಯಾತ್ಮಕ ಸಹಕಾರ ಸಂಘ, ಸಂಘಟನೆ ಇಲ್ಲದಿರುವುದೊಂದು ಸಮಸ್ಯೆಯಾಗಿದೆ.

ಉದಾಹರಣೆಗೆ : ೧೯೫೫-೯೬ರಲ್ಲಿ ೬೫ ಲಕ್ಷ ಕೈಮಗ್ಗ ನೇಕಾರರನ್ನು ಹೊಂದಿದ್ದ ಭಾರತದಲ್ಲಿ ೨೦೧೫ರಲ್ಲಿ ೪೩ ಲಕ್ಷ ಕೈಮಗ್ಗ ನೇಕಾರರಿಗೆ ಕುಸಿದಿದೆ! ಈ ನಿಟ್ಟಿನಲ್ಲಿ ಭಾಗ್ಯನಗರದ ಪತ್ರಕರ್ತ (ಮಾಜಿ ನೇಕಾರ) ಹಾಗೂ ರಾಜ್ಯ ಕೈಮಗ್ಗ ನೇಕಾರ ಸಹಕಾರಿ ಸಂಘದ ಉಪಾಧ್ಯಕ್ಷರಾಗಿರುವ ಶ್ರೀ ವಿಠ್ಠಪ್ಪ ಗೋರಂಟ್ಲಿಯವರು ಅಂಕಿ-ಅಂಶಗಳ ಸಮೇತ ನೀಡಿರುವ ಮಾಹಿತಿ ಇಲ್ಲಿದೆ.

"ನಮ್ಮ ನೇಕಾರರ ಸಹಕಾರ ಸಂಘಗಳು ಎಷ್ಟರ ಮಟ್ಟಿಗೆ ಕಾರ್ಯನಿರ್ವಹಿಸುತ್ತಿವೆ ಎನ್ನುವುದಕ್ಕೆ ಈ ಅಂಕಿ ಅಂಶಗಳೇ ಸಾಕ್ಷಿ ನೀಡುತ್ತವೆ. ರಾಜ್ಯದಲ್ಲಿ ಒಟ್ಟು ೫೭೨ ಕೈಮಗ್ಗ ಸಹಕಾರ ಸಂಘಗಳಲ್ಲಿ ೩೪೪ ಮಾತ್ರ ಕ್ರಿಯಾಶೀಲವಾಗಿವೆ. ಉಳಿದ ೨೨೮ ಸಂಘಗಳು ಹೆಸರಿಗೆ ಮಾತ್ರ ಇವೆ. ಕ್ರಿಯಾಶೀಲವಾಗಿವೆ ಎಂದು ಹೇಳುವವುಗಳಲ್ಲಿಯೂ ಎಷ್ಟರಮಟ್ಟಿಗೆ

ಸಮರ್ಥವಾಗಿವೆ ಎನ್ನುವುದನ್ನು ಹೇಳಲಿಕ್ಕಾಗದು. ಅದೇ ರೀತಿ ೧೪೯ ವಿದ್ಯುತ್ ಮಗ್ಗ ಸಹಕಾರ ಸಂಘಗಳಲ್ಲಿ ೯೭ ಮಾತ್ರ ಕಾರ್ಯನಿರತವಾಗಿವೆ. ಇದರಲ್ಲಿ ೫೦% ರಷ್ಟು ಹೆಸರಿಗೆ ಮಾತ್ರ ಉಳಿದಿವೆ ಎಂದರೆ ಎಂತಹ ವಿಚಿತ್ರ!"[೫] ಪಂಚವಾರ್ಷಿ ಯೋಜನೆಗಳನ್ನೂ ಒಳಗೊಂಡಂತೆ ಸರ್ಕಾರದ ವಿಶೇಷ ಯೋಜನೆಗಳೆಲ್ಲವೂ ಕೃಷಿ ಹಾಗೂ ಬೃಹತ್ ಕೈಗಾರಿಕೆಗಳ ಪರ ಇರುತ್ತವೆ. ಅದೇ ಮಾನ್ಯತೆ ಈ ಪಾರಂಪರಿಕ ಕಸಬುಗಳಿಗೆ ಸರ್ಕಾರದಿಂದ ಸಿಕ್ಕುತ್ತಿಲ್ಲ.

೧೮ನೇ ಶತಮಾನದ ಅಂತ್ಯದಲ್ಲಿ ಕಂಡು ಹಿಡಿಯಲ್ಪಟ್ಟ ಪವರ್ ಲೂಮ್ (ವಿದ್ಯುತ್ ಮಗ್ಗ)ಗಳನ್ನು ತಮ್ಮ ಶತ್ರುಗಳೆಂದು ಭಾವಿಸಿದ್ದ ಇಂಗ್ಲೆಂಡಿನ ನೇಕಾರರು ಅವುಗಳ ನಾಶಕ್ಕಾಗಿ ಒಗ್ಗಟ್ಟಾದರು. ನೇಕಾರರ ಆ ಭಯವನ್ನು 'ಲುಡ್ಡೈಟರ ಭ್ರಾಂತಿ' (Luddite fallacy) ಎಂಬ ನುಡಿಗಟ್ಟಾಗುವಷ್ಟು ಒಗ್ಗಟ್ಟಿನಿಂದ ಹೋರಾಡಿದರು. ಆ ಹೋರಾಟದ ಕಿಡಿ ಭಾರತಕ್ಕೂ ಸಿಡಿಯಿತು! ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿ ತನ್ನ ಜವಳಿಯನ್ನು ಮಾರಾಟ ಮಾಡುವ ಉದ್ದೇಶದಿಂದ ಭಾರತದಲ್ಲಿದ್ದ ನೇಕಾರಿಕೆಯನ್ನೇ ನಾಶಮಾಡಿತು. ಭಾರತದ ಹಳ್ಳಿಗಳಲ್ಲಿ ಆರ್ಥಿಕ ಸ್ವಾವಲಂಬನೆ ಇಲ್ಲದಂತಹ ವಿಚಿತ್ರ ಆರ್ಥಿಕತೆಯೊಂದನ್ನು ವಸಹತುಶಾಹಿ ಸೃಷ್ಟಿಸಿತು. "ವಿಜ್ಞಾನದ ಮುನ್ನಡೆಗೆ ನಾನೇನೂ ವಿರೋಧಿಯಲ್ಲ. ಪಶ್ಚಿಮದ ವಿಜ್ಞಾನಿ, ದೇವರ ಸೃಷ್ಟಿಯಲ್ಲಿನ ಕೆಳಸ್ತರವನ್ನು ಲೆಕ್ಕಕ್ಕೆ ತೆಗೆದುಕೊಂಡಿಲ್ಲ" ಎಂದಿದ್ದ ಗಾಂಧೀಜಿಯವರು ಚರಕವನ್ನು ಜೀವಂತಗೊಳಿಸುವ ಮೂಲಕ ಇದಕ್ಕೆ ಪರ್ಯಾಯವನ್ನು ಸೃಷ್ಟಿಸಿದರು. ಆದರೆ ಆಧುನಿಕ ಭಾರತದ ನೇಕಾರರಿಗೆ ಈಗ ಪವರ್ ಲೂಮ್ ಶತ್ರುವಲ್ಲ; ಬದಲಾಗಿ ಆಧುನಿಕ ಬಟ್ಟೆ ಕಾರ್ಖಾನೆಗಳು!

➢ 'ಒಕ್ಕಲಿಗ ಒಕ್ಕದಿರೆ ಬಿಕ್ಕುವುದು ಜಗವೆಲ್ಲ' ಎಂಬುದು ವೇದ ಸುಳ್ಳಾದರೂ, ಸುಳ್ಳಾಗದ ಗಾದೆ. ನಗರಗಳನ್ನೂ ಸಲಹುವ ಕಾಯಕದ ತತ್ವ ಹಳ್ಳಿಗಳಲ್ಲಡಗಿದೆ. ಪಾರಂಪರಿಕ ಜ್ಞಾನವನ್ನು ವಿಜ್ಞಾನದೊಳಗಿಟ್ಟು ತಕ್ಕಡಿಯಲ್ಲಿ ತೂಗಬೇಕು. ಪಾರಂಪರಿಕ ಕಸಬುಗಳ ಆಶ್ರಯದಾತನೇ ಅನ್ನದಾತ ಅರ್ಥಾತ್ ಕೃಷಿಯೆಂದರೆ ತಪ್ಪಾಗದು. ಆಧುನೀಕರಣದ ಪರಿಣಾಮವಾಗಿ ಕೃಷಿಯಲ್ಲಿಯೂ ತ(ಯ)ಂತ್ರಜ್ಞಾನ ನುಗ್ಗಿದೆ. ಹೀಗಾಗಿ ರೈತನಿಗೆ ಸಹಾಯಕರಾಗಿದ್ದ ಕಸಬುದಾರರಿಗೆ ಕೆಲಸವೇ ಇಲ್ಲದಂತಾಗಿದೆ. ಅಲ್ಲದೇ ರಾಸಾಯನಿಕ ಔಷಧಿಗಳು ಹಾಗೂ ಗೊಬ್ಬರಗಳು ಬಂದಿರುವುದು ಕೂಡಾ ಕಸಬುದಾರರ ಕಸಬನ್ನು ಕಿತ್ತುಕೊಂಡಿವೆ. ಕಳೆ ನಾಶಕದಿಂದ ಕೃಷಿ ಕೂಲಿಕಾರರಿಗೆ ಕೆಲಸವಿಲ್ಲ. ಅವರು ಬಳಸುತ್ತಿದ್ದ ಕುರ್ಚಿಗೆ, ಚುಳುಕ ಇತ್ಯಾದಿಗಳನ್ನು ತಯಾರಿಸುತ್ತಿದ್ದ, ಹಣಿಯುತ್ತಿದ್ದ

ಕಮ್ಮಾರರು ಹಾಗೂ ಹಿಡಿಕೆ ಹಾಕುತ್ತಿದ್ದ ಬಡಿಗೇರರು ಬಹುತೇಕ ಕೆಲಸವಿಲ್ಲದೇ ಕಂಗಾಲಾಗಿದ್ದಾರೆ.

➢ ಕಸಬುದಾರರಿಗೆ ಮೂಲ ಸಮಸ್ಯೆಯೇ ಕಚ್ಚಾ ಸರಕುಗಳ ಅಭಾವ. ಇದನ್ನು ನೀಗಿಸಲು ಸರ್ಕಾರವಾಗಲಿ, ನಿಗಮಗಳಾಗಲೀ ವಿಶೇಷವಾಗಿ ಎಲ್ಲ ಗ್ರಾಮಗಳಲ್ಲೂ ಶ್ರಮಿಸುತ್ತಿಲ್ಲ.

➢ ಕಚ್ಚಾ ಸರಕುಗಳನ್ನು ಕೊಳ್ಳಲು ಕಸಬುದಾರರಿಗೆ ಹಣಕಾಸಿನ ಕೊರತೆ ತೀವ್ರವಾಗಿ ಕಾಡುತ್ತಿದೆ. ಇದನ್ನು ನೀಗಿಸಲು ಸಾಕಷ್ಟು ಸಾಲ ಸೌಲಭ್ಯವನ್ನು ಅತ್ಯಂತ ಸುಲಭ ರೀತಿಯಲ್ಲಿ ಒದಗಿಸುವ ಅನಿವಾರ್ಯತೆ ಇದೆ.

➢ ಪಾರಂಪರಿಕ ಕಸಬುದಾರರು ಉತ್ಪಾದಿಸುವ ವಸ್ತುಗಳಿಗೆ ಯಾವುದೇ ಕಾನೂನಾತ್ಮಕ ಚೌಕಟ್ಟಾಗಲಿ, ನೀತಿ ನಿಯಮಾವಳಿಗಳಾಗಲೀ ಇರುವುದಿಲ್ಲ. ಹೀಗಾಗಿ ಅವರ ಉತ್ಪಾದಿತ ವಸ್ತುಗಳ ಗಾತ್ರ ಹಾಗೂ ಗುಣಮಟ್ಟದಲ್ಲಿ ಏಕರೂಪತೆ ಇಲ್ಲದಿರುವುದು ಒಂದು ದೊಡ್ಡ ಸಮಸ್ಯೆಯಾಗಿ ಕಾಡುತ್ತಿದೆ.

➢ ಬಹುತೇಕ ಕಸಬುದಾರರು ಅನಕ್ಷರಸ್ಥರೇ ಆಗಿರುತ್ತಾರೆ. ಇವರಿಗೆ ತಮ್ಮ ಕಸಬಿನ ಮಾಹಿತಿಯ ಹೊರತು ಮಾರುಕಟ್ಟೆಯ ಮಾಹಿತಿ ಇರುವುಲ್ಲ. ತಾವು ಉತ್ಪಾದಿಸಿದ ವಸ್ತುವನ್ನು ಎಷ್ಟು ರೂಪಾಯಿಗೆ ಮಾರುತ್ತಾರೆ, ಎಲ್ಲೆಲ್ಲಿ ಮಾರುತ್ತಾರೆ, ಎಷ್ಟೆಷ್ಟು ಲಾಭ ಪಡೆಯುತ್ತಾರೆ ಇದ್ಯಾವುದರ ಪರಿವೇ ಇರುವುದಿಲ್ಲ. ಇವರಿಗೆ ಗೊತ್ತಿರುವುದು ಶ್ರಮ ಸಂಸ್ಕೃತಿಯೇ ಹೊರತು; ಮಾರುಕಟ್ಟೆ ಸಂಸ್ಕೃತಿ ಅಲ್ಲ!

➢ ತಾವು ಉತ್ಪಾದಿಸುವ ವಸ್ತುಳ ಕಚ್ಚಾ ಸರಕುಗಳ ಬೆಲೆ ಸದಾ ಗಗನಮುಖಿಯಾಗಿರುವುದರಿಂದ ಉತ್ಪಾದನಾ ವೆಚ್ಚವು ಹೆಚ್ಚಳವಾಗಿರುವುದು, ತಮ್ಮ ಸಿದ್ಧವಸ್ತುವಿಗೆ ತಕ್ಕ ಬೆಲೆ ಸಿಕ್ಕದಿರುವುದು ಕಸಬುದಾರರಿಗೆ ದಿಕ್ಕು ತೋಚದಂತಾಗಿದೆ.

➢ ಬಹುತೇಕ ಪಾರಂಪರಿಕ ಕಸಬುಗಳು ಋತುಮಾನ ಉದ್ಯೋಗಗಳಾಗಿವೆ. ಒಂದೊಂದು ಕಾಲದಲ್ಲಿ ಮಾತ್ರ ಬೇಡಿಕೆ ಇರುತ್ತದೆ. ಉಳಿದಂತೆ ಬೇರೆ ಉದ್ಯೋಗವನ್ನು ಮಾಡಲೇಬೇಕಾಗುತ್ತದೆ. ಇದಲ್ಲದೇ ಕೆಲವು ಋತುಮಾನದಲ್ಲಿ ಆ ವೃತ್ತಿಯನ್ನು ಮಾಡಲು

ಹವಾಗುಣ ಆಸ್ಪದ ನೀಡುವುದಿಲ್ಲ. ಉದಾ :- ರಾಜೂರಿನ ಸುಣ್ಣವನ್ನು ಮಳೆಗಾಲದಲ್ಲಿ ತಯಾರಿಸಲು ಆಗುವುದಿಲ್ಲ.

➢ ಕಸಬುದಾರರು ಸಾಮಾನ್ಯವಾಗಿ ಗ್ರಾಮೀಣ ಪ್ರದೇಶದಲ್ಲಿರುವುದರಿಂದ ತಾವು ತಯಾರಿಸಿದ ವಸ್ತುಗಳನ್ನು ಮಾರಾಟ ಮಾಡಲು ಇಲ್ಲವೇ ಕಚಾವಸ್ತುಗಳನ್ನು ತಂದುಕೊಳ್ಳಲು ಸಾರಿಗೆ ಮತ್ತು ಸಂಪರ್ಕದ ಕೊರತೆ ಕಾಡುತ್ತಿರುತ್ತದೆ.

➢ ಗುಣಮಟ್ಟ ಹಾಗೂ ಗಾತ್ರಗಳಿಗೆ ಸಂಬಂಧಿಸಿದಂತೆ ಕಸಬುದಾರರಲ್ಲಿ ಏಕರೂಪತೆ ಇಲ್ಲದಿರುವುದರಿಂದ ಸರಕುಗಳನ್ನು ಪ್ರಮಾಣೀಕರಿಸುವುದು ಮತ್ತು ವರ್ಗೀಕರಿಸುವುದು ಕಷ್ಟ.

➢ ನಮ್ಮ ಗ್ರಾಮೀಣ ಕಸಬುದಾರರಿಗೆ ವಾಸಿಸಲು ತಮಗೇ ಒಂದು ಸೂರು ಇರುವುದು ಕಷ್ಟವಾಗಿರುವಾಗ, ತಮ್ಮ ಕಚ್ಚಾ ಇಲ್ಲವೇ ಸಿದ್ಧ ವಸ್ತುಗಳನ್ನು ಸಂಗ್ರಹಣೆ ಮಾಡಲು ಸೂಕ್ತ ಸ್ಥಳಾವಕಾಶವಿಲ್ಲದಿರುವುದನ್ನು ಕಾಣಬಹುದಾಗಿದೆ.

➢ ತಾವು ಉತ್ಪಾದಿಸಿದ ವಸ್ತುಗಳನ್ನು ಹೇಗೆ ಮಾರುತ್ತಾರೆ? ಅದು ಗ್ರಾಹಕರ ಕೈಗೆ ಹೇಗೆ ತಲುಪುತ್ತದೆ? ಎಷ್ಟು ದರಕ್ಕೆ ತಲುಪುತ್ತದೆ? ಲಾಭ ಎಷ್ಟು? ಅದನ್ನು ಮಾರಲು ಹೇಗೆಲ್ಲ ಗ್ರಾಹಕರನ್ನು ಮರುಳು ಮಾಡುತ್ತಾರೆ ಎಂಬ ಮಾರಾಟದ ಕಲೆ ಉತ್ಪಾದಕರಿಗೆ, ಕಸಬುದಾರರಿಗೆ ಗೊತ್ತಿರುವುದಿಲ್ಲ.

➢ ಇವರ ವಸ್ತುಗಳಿಗೆ ಮುದ್ರೆ ಅಥವಾ ಮಾರಾಟದ ಚಿಹ್ನೆ ಇಲ್ಲದಿರುವುದು ಇತರೆ (ನಕಲಿ) ಉತ್ಪಾದಕರು ಉತ್ತಮ ಕಸಬುದಾರರ ಹೆಸರ್ಹೇಳಿ ಗ್ರಾಹಕರನ್ನು ವಂಚಿಸುವ ಜೊತೆಗೆ ನಿಜವಾದ ಕಸಬುದಾರರ ಹೊಟ್ಟೆ ಮೇಲೆ ಹೊಡಿಯುತ್ತಾರೆ.

➢ ಕಸಬುದಾರರ ವಸ್ತುಗಳು ಯಾವುದೇ ಕಂಪನಿಗಳ ಸ್ವತ್ತಲ್ಲದ ಪ್ರಯುಕ್ತ ಜಾಹಿರಾತು ಮೋಡಿಗೆ ಇಲ್ಲಿ ಅವಕಾಶವಿರಲ್ಲ.

➢ ಪಾರಂಪರಿಕ ಕಸಬುದಾರರು ತಯಾರಿಸುವ ಬಹಪಾಲು ವಸ್ತುಗಳೆಲ್ಲ ಆಧುನಿಕ ಕೈಗಾರಿಕಾ ವಸ್ತುಗಳ ಪೈಪೋಟಿಯನ್ನು ಎದುರಿಸಬೇಕು.

➢ ಕಸಬುದಾರರು ತಯಾರಿಸಿದ ವಸ್ತುಗಳಿಗೆ ಪ್ರತ್ಯೇಕ ಮಾರಾಟದ ಮಳಿಗೆಗಳಿಲ್ಲದಿರುವುದು.

➢ ಕಸಬುದಾರರಿಗೆ ಬ್ಯಾಂಕುಗಳಿಂದಾಗಲಿ, ನಿಗಮಗಳಿಂದಾಗಲೀ ಸಕಾಲಕ್ಕೆ ಸಾಲ ಸೌಲಭ್ಯ ಸಿಕ್ಕದಿರುವುದರಿಂದ ಯಜಮಾನನ ಹತ್ತಿರ ಸಾಲ ಪಡೆದು ಸಾಲದ ಶೂಲಕ್ಕೆ ಸಿಲುಕಿಕೊಳ್ಳುತ್ತಾನೆ.

➢ ಋತುಮಾನಕ್ಕನುಸಾರವಾಗಿ ಪದೇ ಪದೇ ವೃತ್ತಿಗಳನ್ನು ಬದಲಾಯಿಸುತ್ತಿರುವುದು. ಕೆಲವು ಕಸಬುಗಳು ಅರೆನಿರುದ್ಯೋಗಕ್ಕೆ ಕಸಬುದಾರರನ್ನು ತಳ್ಳುತ್ತಿವೆ. ಹೀಗಾಗಿ ಹೊಟ್ಟೆಪಾಡಿಗಾಗಿ ಕಸಬುದಾರ ಗುಳೆ ಹೋಗುವುದು, ಇಲ್ಲವೇ ಅಲ್ಲಿಯೇ ಬೇರೆ ಕೆಲಸಕ್ಕೆ ಶರಣಾಗಲೇಬೇಕಾಗುತ್ತದೆ.

➢ ಗ್ರಾಮೀಣ ಕಸಬುದಾರ ತನ್ನ ಗುಣಮಟ್ಟವನ್ನು ಹೆಚ್ಚಿಸಿಕೊಳ್ಳಲು ಸೂಕ್ತ ತರಬೇತಿಗಳಾಗಲಿ, ಅದಕ್ಕೆ ತಕ್ಕ ಪ್ರೋತ್ಸಾಹವಾಗಲೀ ಸಿಕ್ಕದಿರುವುದರಿಂದ ಹಳೆಯ, ಅದೇ ಗುಣಮಟ್ಟವನ್ನು ಮುಂದುವರೆಸುತ್ತಾನೆ. ಕೆಲವು ಸಿದ್ಧವಸ್ತುಗಳು ಕಾಲಕ್ಕೆ ತಕ್ಕಂತೆ ಬದಲಾವಣೆಯನ್ನು ಬಯಸುತ್ತವೆ.

➢ ಬೆಲೆ ನಿರ್ಧಾರ ಸ್ವತಃ ಕಸಬುದಾರನ ಕೈಯಲ್ಲಿಲ್ಲದಿರುವುದು ಹಾಗೂ ಆ ಬೆಲೆಯು ವೈಜ್ಞಾನಿಕವಾಗಿಲ್ಲದಿರುವುದು ನಮ್ಮ ಗ್ರಾಮೀಣ ಕಸಬುದಾರನಿಗೆ ಗೊತ್ತೇಯಿರುವುದಿಲ್ಲ. ತನ್ನ ಶ್ರಮದ ಬೆಲೆಯೇ ಗೊತ್ತಿಲ್ಲದ ಕಸಬುದಾರ ದಲ್ಲಾಳಿಗಳಿಗೆ ಅಥವಾ ಮಾರಾಟಗಾರರಿಗೆ ಲಾಭ ಮಾಡಿಕೊಟ್ಟಂತಾಗಿದೆ.

➢ ಬದಲಾವಣೆ ಜಗದ ನಿಯಮ. ಈ ಆಧುನಿಕತೆಗೆ ತಕ್ಕಂತೆ ಕಸಬುದಾರ ತನ್ನ ವಸ್ತುಗಳನ್ನು ಸಿದ್ಧಗೊಳಿಸಲು, ಅತ್ಯಾಧುನಿಕ ವಸ್ತುಗಳೊಂದಿಗೆ ಪೈಪೋಟಿ ನೀಡಲು ಸೂಕ್ತ ವೃತ್ತಿ ತರಬೇತಿ ಬೇಕಾಗುತ್ತದೆ. ಹೀಗೆ ತರಬೇತಿ ನೀಡುವ ಸಂಘ-ಸಂಸ್ಥೆಗಳಿಲ್ಲದಿರುವುದು ಕಸಬುದಾರನಿಗೆ ದೊಡ್ಡ ಸಮಸ್ಯೆಯಾಗಿದೆ.

➢ ಇತ್ತೀಚಿಗೆ ಕಾರ್ಖಾನೆಗಳಲ್ಲಿ ತಯಾರಾದ ನಯ ನಾಜೂಕಿನ ನವೀನ ಶೈಲಿಯ ವಸ್ತುಗಳಿಗೇ ಜನಗಳು ಮರುಳಾಗುತ್ತಿದ್ದಾರೆ. ಹೀಗಾಗಿ ಪಾರಂಪರಿಕ ಕಸಬುಗಳ ಉತ್ಪಾದನೆಗೆ ಬೇಡಿಕೆ ಇಲ್ಲದಿರುವುದು ಸಮಸ್ಯೆಗಳಲ್ಲಿ ಅತ್ಯಂತ ಪ್ರಮುಖವಾಗಿದೆ.

ಹೀಗೆ ಅನೇಕ ಸಮಸ್ಯೆಗಳ ಸರಮಾಲೆಯೇ ನಮ್ಮ ಗ್ರಾಮೀಣ ಕಸಬುಗಳಲ್ಲಿದೆ. ಇವುಗಳಿಗೆ ಸೂಕ್ತ ಪರಿಹಾರವನ್ನು ಹುಡುಕಿದಾಗಲೇ ಕಸಬುದಾರರಿಗೊಂದು ನೆ(ಬೆ)ಲೆ.

ನಿಜವಾದ ಭಾರತವನ್ನು ಕೆಲವೇ ನಗರಗಳಲ್ಲಿ ಕಾಣಲು ಸಾಧ್ಯವಿಲ್ಲ; ಬದಲಿಗೆ ನಮ್ಮ ದೇಶದ ಹಳ್ಳಿಗಳಲ್ಲಿ ಕಾಣಲು ಸಾಧ್ಯ!

'ದೇಶದಲ್ಲಿ ಸಾಮಾನ್ಯ ಜನರು ಅಭಿವೃದ್ಧಿಯಾಗಬೇಕಾದರೆ ಕೈಗಾರಿಕಾ ಕ್ರಾಂತಿಯಾದರೆ ಸಾಧ್ಯವಿಲ್ಲ. ರಕ್ತಕ್ರಾಂತಿ ಆದಾಗ ಮಾತ್ರ ವರ್ಗ ಕಲಹದ ಜೊತೆಗೆ ಮಾನವ ಜ್ವಲಂತ ಸಮಸ್ಯೆಯನ್ನು ನಿವಾರಣೆ ಮಾಡಲು ಸಾಧ್ಯ.' ಎಂದು ಕಾರ್ಲ್‌ಮಾರ್ಕ್ಸ್ ಹೇಳಿರುವುದನ್ನು ಗಮನದಲ್ಲಿಟ್ಟುಕೊಂಡರೆ, ಇಲ್ಲಿ ಪ್ರಮುಖವಾಗಿ ಎರಡು ಅಂಶಗಳನ್ನು ಗಮನಿಸಬೇಕಾಗುತ್ತದೆ.

ಒಂದು; ಕೈಗಾರಿಕಾ ಕ್ರಾಂತಿ ಬೇಕಿಲ್ಲ. ಅಂದರೆ ಪಾರಂಪರಿಕ ಕಸಬುಗಳಿಂದಲೇ ಜನರ ಅಭಿವೃದ್ಧಿ ಎಂದರ್ಥವೇ? ಈ ವಿದ್ಯಮಾನಕ್ಕೆ ಕಾರ್ಲ್‌ಮಾರ್ಕ್ಸ್‌ರವರು ೧೮೫೩ರಲ್ಲಿ ವ್ಯಾಖ್ಯಾನಿಸಿದ್ದು ಹೀಗೆ : "ಭಾರತೀಯ ಕೈಮಗ್ಗವನ್ನು ಮುರಿದು, ಚರಕವನ್ನು ನಾಶ ಪಡಿಸಿದ್ದು 'ಬ್ರಿಟೀಷ್ ಆಕ್ರಮಣಕಾರ'. ಯೂರೋಪಿಯನ್ ಮಾರುಕಟ್ಟೆಯಲ್ಲಿ ಭಾರತೀಯ ಹತ್ತಿಯನ್ನು ನಿರ್ಬಂಧಿಸಿತು. ನಂತರ ಹತ್ತಿಯ ತಾಯ್ನೆಲವೇ ಇಂಗ್ಲೆಂಡಿನ ಹತ್ತಿಯ ರಫ್ತಿನ ಮಹಾಪೂರದಲ್ಲಿ ಮುಳುಗಿತು."[೬] ಎರಡು; ವರ್ಗ ಕಲಹದಿಂದ ಮಾನವನ ಜ್ವಲಂತ ಸಮಸ್ಯೆಗಳು ನಿವಾರಣೆಯಾಗುತ್ತವೆ! ಸಮಾಜದಲ್ಲಿ ಆಳವಾಗಿ ಬೇರುಬಿಟ್ಟಿರುವ ಮೇಲು-ಕೀಳು ಮನೋಭಾವದ ವರ್ಗಗಳು ಕಲಹದಲ್ಲಿ ಅಂತ್ಯ ಕಾಣುತ್ತವೆ; ಮುಂದೆ ಬೇಧ ರಹಿತ ವರ್ಗಗಳ ಸಮಾಜದ ನಿರ್ಮಾಣವಾಗುತ್ತದೆ. ಇದರಿಂದ ಸಂಪತ್ತಿನ ಸಮಾನ ಹಂಚಿಕೆಯ ಸಾಧ್ಯವಾಗಿ ಕುಲಗಳಿಗೇ ಮೀಸಲಾದ ಕಸಬುಗಳು ಮಾಯವಾಗಿ, ತಮಗೆ ಇಷ್ಟವಾದ, ಅನಿವಾರ್ಯವಾದ ಕಸಬುಗಳನ್ನು ಯಾರು ಬೇಕಾದರೂ ಮಾಡಬಹುದೆಂಬ ಅಭಿಪ್ರಾಯವನ್ನು ಕಾರ್ಲ್‌ಮಾರ್ಕ್ಸ್ ಹೇಳಿರುವುದನ್ನು ತಳ್ಳಿ ಹಾಕುವಂತಿಲ್ಲ.

ಆಧುನಿಕತೆಯ ಜಾಗತಿಕ ಸಂಸ್ಕೃತಿಗೆ ತೆರೆದುಕೊಂಡಿರುವ ಆಧುನಿಕೋತ್ತರ ಸಮಾಜದಲ್ಲಿ ಪರಿಸರ ಸ್ನೇಹಿ, ಸಾವಯವ ಹಾಗೂ ಸುಸ್ಥಿರವಾದ ಪಾರಂಪರಿಕ ಕಸಬುಗಳು ಕಾಯಕಲ್ಪಕ್ಕೆ ಕಾಯುತ್ತಿವೆ; ಅವುಗಳಿಗೆ ಕಸುವಿನ ಅಗತ್ಯವಿದೆ.

**ಇಳಕಲ್ಲ ಸೀರೆ ನೇಕಾರಿಕೆಯಲ್ಲಿನ ಆತಂಕಗಳು :**

ಎಲ್ಲ ಕ್ಷೇತ್ರಗಳಲ್ಲೂ ದೇಸಿ ಸಂಸ್ಕೃತಿ, ಪರಂಪರೆ ಕ್ಷೀಣಿಸುತ್ತಿರುವಂತೆ ಇಳಕಲ್ಲ ಸೀರೆ ಉದ್ಯಮವೂ ಆತಂಕದ ಕ್ಷಣಗಳನ್ನು ಎದುರಿಸುತ್ತಿದೆ. ಇವುಗಳು ಸುಧಾರಣೆಯಾದಲ್ಲಿ

ಇಳಕಲ್ಲ ಸೀರೆ ಉದ್ದಿಮೆ ಉತ್ತುಂಗಕ್ಕೇರಲು ಭವಿಷ್ಯದ ಮೆಟ್ಟಿಲುಗಳಾಗ ಬಹುದು! ರೈತ(ಮೇಳಿ) ಬಿಸಿಲಲ್ಲಿ ದುಡಿದರೆ, ನೇಕಾರ(ಲಾಳಿ) ನೆರಳಲ್ಲಿ ದುಡಿಯುತ್ತಾನೆ. ಆದರೂ ನೇಕಾರ ನೆರಳಿನಲ್ಲಿ ದುಡಿದರೂ ನರಳಬೇಕಾಗಿದೆ!

- ಕ್ಷಣ ಕ್ಷಣಕ್ಕೂ ಬದಲಾಗುವ ಫ್ಯಾಶನ್.
- ಮಾರುಕಟ್ಟೆಯ ಏರಿಳಿತ.
- ಸರಕಾರದ ಜವಳಿ ನೀತಿ.
- ವೃತ್ತಿಗೆ ಆಧುನಿಕತೆಯ ಸ್ಪರ್ಶ.
- ವಿನ್ಯಾಸಕ್ಕೆ ಕಂಪ್ಯೂಟರ್ ಬಳಕೆಯಾಗುತ್ತಿರುವುದು. ನೈಟಿ, ಚೂಡಿದಾರಗಳು ಆಬಾಲ ವೃದ್ಧರಾದಿಯಾಗಿ ಸಾರ್ವತ್ರೀಕರಣಗೊಂಡಿವೆ.
- ಅಗ್ಗದ ದರದಲ್ಲಿ ಸಿಕ್ಕುವ ಫ್ಯಾಶನೇಬಲ್ ಸಿಂಥೆಟಿಕ್ ಸೀರೆಗಳ ಭರಾಟೆ.
- ಇಳಕಲ್ಲ ಸೀರೆ ಕೇವಲ ಹಳ್ಳಿಯ ಮುದುಕಿಯರ ಉ(ಮು)ಡುಪಾಗಿದೆ! ಈ ಭಾಗದಲ್ಲಿ ಇಂತಹ ಒಬ್ಬ ಮುದುಕಿಯೊಂದನ್ನು ಕಳೆದುಕೊಂಡರೆ(ಸತ್ತರೆ); ಒಂದು ಇಳಕಲ್ಲ ಸೀರೆಯ ಗಿರಾಕಿಯನ್ನು ಕಳೆದುಕೊಂಡಂತೆ!
- ಕೈಮಗ್ಗದ ನೇಕಾರರು ನೇಪಥ್ಯಕ್ಕೆ ಸರಿಯುತ್ತಿದ್ದಾರೆ. ಅವರ ಸಂಖ್ಯೆಯೂ ಕ್ಷೀಣಿಸುತ್ತಿದೆ.
- ವಿದ್ಯುತ್ ಮಗ್ಗಗಳಲ್ಲಿ ತಯಾರಾಗುವ ಸೀರೆಗಳ ಬಾ(ತಾ)ಳಿಕೆ ಹಾಗೂ ಬಣ್ಣದ ಗುಣಮಟ್ಟದ ಸಮಸ್ಯೆ.
- ನಕಲಿ ಇಳಕಲ್ಲ ಸೀರೆಗಳನ್ನು ಬೇರೆ ಪ್ರದೇಶಗಳಲ್ಲಿ ನೇಯ್ದು ಮಾರಾಟಕ್ಕೆ ಅಣಿಗೊಳಿಸುತ್ತಿರುವುದು ಆತಂಕಕಾರಿ ಸ್ಪರ್ಧೆಯನ್ನೊಡ್ಡುತ್ತಿವೆ! ಇದಕ್ಕಾಗಿ ಸಮತೋಲಿಕ ಮಾರುಕಟ್ಟೆಯ ಅಗತ್ಯವಿದೆ.
- ದಿಢೀರನೇ ಘೋಷಿಸುವ ಜವಳಿ ನೀತಿಗಳು ನೇಕಾರ ಹಾಗೂ ಉದ್ದಿಮೆದಾರರನ್ನು ನಿದ್ದೆಗೆಡಿಸಿವೆ.
- ಸೋತಿರುವಂತೆ ಭಾಸವಾಗುತ್ತಿರುವ ಸಹಕಾರಿ ಸಂಘಗಳು ಪುನಃಶ್ಚೇತನಗೊಳ್ಳಬೇಕಿದೆ.

- ಇಳಕಲ್ಲದಲ್ಲಿರುವ ಕೈಮಗ್ಗ ಅಭಿವೃದ್ಧಿ ನಿಗಮದ ಯೋಜನಾ ಕಚೇರಿಯೂ ಆಧುನಿಕ ಮಹಿಳೆಯು ಕೈಮಗ್ಗದ ಇಲಕಲ್ಲ ಸೀರೆಯತ್ತ ಆಕರ್ಷಿತಳಾಗುವಂತೆ ಮಾರ್ಪಾಡು ತರಲು ಯೋಜನೆಗಳನ್ನು ಹಾಕಿಕೊಳ್ಳುವ ದೊಡ್ಡ ಜವಾಬ್ದಾರಿ ಅದರ ಹೆಗಲ ಮೇಲಿದೆ.

- ಇಳಕಲ್ಲಿನ ನೇಕಾರ ಸಹಕಾರಿ ಸಂಘ ಮತ್ತು ಕೈಮಗ್ಗ ಅಭಿವೃದ್ಧಿ ನಿಗಮ ಹಾಗೂ ಖಾಸಗಿ ಧಣಿಗಳನ್ನೂ ಅವಲಂಬಿಸಿದ್ದಾನೆ. ಅಂದರೆ ಯಾವ ಕಡೆಗೆ ಅನುಕೂಲತೆ ಹಾಗೂ ಲಾಭವಿದೆಯೋ ಅತ್ತ ಸಂಬಂಧವಿಟ್ಟುಕೊಂಡಿರುವುದರಿಂದ ನೇಕಾರನನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಳ್ಳುವುದು ನಿತ್ರಾಣದ ಕೆಲಸವಾಗಿದೆ.

- ಕೈಮಗ್ಗ ಅಭಿವೃದ್ಧಿ ನಿಗಮಕ್ಕೆ ಲಾಭ ಮುಖ್ಯ ಅಲ್ಲ. ಏಕೆಂದರೆ ಅದಕ್ಕೆ ರಿಯಾಯಿತಿ ಸೌಲಭ್ಯ ಇದೆ. ಇದರಿಂದ ಗುಣಮಟ್ಟ ಉಳಿಸಿಕೊಳ್ಳುವುದು ಅಸಾಧ್ಯದ ಮಾತು. ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ಗುಣಮಟ್ಟ ಉಳಿಸಿಕೊಂಡು ಉದ್ದಿಮೆ ಮುಂದುವರಿಸುವುದು ಖಾಸಗಿಯವರಿಗೆ ಕಷ್ಟ ಹಾಗೂ ಅನಿವಾರ್ಯವೂ ಆಗಿದೆ. ಆದರೆ ಇವರಿಗೆ ಗುಣಮಟ್ಟ ಕಾಪಾಡಿಕೊಂಡು ಬರುವುದೇ ಸವಾಲಿನ ಕೆಲಸವಾಗಿದೆ.

- ಗಿರಾಕಿ ಸುಲಭವಾಗಿ ದಡಿ, ಒಡ್ಲು, ಸೆರಗು ನೋಡುವಂತಿರುವ ಸೂಕ್ತ ಪ್ಯಾಕಿಂಗ್ ವ್ಯವಸ್ಥೆ ಇಲ್ಲದಿರುವುದು.

- ಮಾರುಕಟ್ಟೆಯ ಏರಿಳಿತ, ಸರಕಾರದ ಜವಳಿ ನೀತಿ, ಭೀಕರ ಬರಗಾಲದಿಂದಾಗಿ ಒಮ್ಮೊಮ್ಮೆ ಬಡ ನೇಕಾರನಿಗೆ ಸುಧಾರಿಸಿಕೊಳ್ಳದಂತಹ ಪೆಟ್ಟು ಬೀಳುವುದರಿಂದ ಕೈಮಗ್ಗದ ಉದ್ದಿಮೆಯನ್ನು 'ರಕ್ಷಿತ ಉದ್ದಿಮೆ' ಎಂದು ಸರಕಾರ ಘೋಷಿಸಬೇಕೆಂಬುದು ನೇಕಾರರ ಬಹುದಿನದ ಬೇಡಿಕೆಯಾಗಿದೆ.

- ಜೊತೆಗೆ ನೇಕಾರನ ಅಜ್ಞಾನ, ಅನಕ್ಷರತೆ, ಸಂಘಟನೆಯ ಕೊರತೆ, ದುಶ್ಚಟಗಳು, ಅನಾರೋಗ್ಯ, ಕುಶಲತೆ ಅಭಾವಗಳೂ ಇಳಕಲ್ಲ ಸೀರೆ ಉದ್ಯಮಕ್ಕೆ ಆತಂಕಕಾರಿ ವಿಷಯವೂ ಹೌದು.

- ಬಹಳ ಹೊತ್ತಿನವರೆಗೆ ವಿದ್ಯುತ್ ಇಲ್ಲದಿರುವಾಗ ಮಗ್ಗಗಳ, ವೈಂಡಿಂಗ್ ಯಂತ್ರಗಳ ಕೆಲಸ ಸ್ಥಗಿತಗೊಂಡಿರುತ್ತದೆ. ಆಗ ಕೈಮಗ್ಗ ಹಾಗೂ ರಾಟೆ ಅಥವಾ ಚಕ್ರವೇ ಗತಿ.

ಬೇಸಿಗೆಯಲ್ಲಂತೂ ಲೋಡ್ ಶೆಡ್ಡಿಂಗ್ ಇರುವುದರಿಂದ ನೇಕಾರನ ಹೊಟ್ಟೆ ಬೆನ್ನಿಗೆ ಹತ್ತಿದಂತಾಗುತ್ತದೆ.

- ನಿಗಧಿಗಿಂತ ಹೆಚ್ಚು ಡೆಸಿಬಲ್ ಶಬ್ಧ ಮಾಡುತ್ತಿರುವ ವಿದ್ಯುತ್‌ಗಳಿಂದ ಶಬ್ಧ ಮಾಲಿನ್ಯ ಉಂಟಾಗುತ್ತಿರುವ ಬಗ್ಗೆಯೂ ದೂರುಗಳುಂಟು!

- ಬಳಕೆಯಾಗುತ್ತಿರುವ "ಇಳಕಲ್ಲ ಸೀರೆಯಂತಹ ವಿನ್ಯಾಸವನ್ನೇ ನಕಲು ಮಾಡಿ ಇತರೆ ಪ್ರದೇಶಗಳಲ್ಲಿ ನೇಯ್ದು ಮಾರಾಟ ಮಾಡುತ್ತಿದ್ದಾರಲ್ಲ..!" ಎಂದು ಕೇಳಿದರೆ, "ಇಳಕಲ್ಲ ಸೀರಿ ಅಂದ್ರ ಇಳಕಲ್ಲಿನ ಸೀರಿನs! ಇವುಗಳ ಗುಣಮಟ್ಟ ಚೊಲೋ ಗಿರಾಕಿಗೆ ಗೊತ್ತಾಗ್ತದ. ಭಾಳಾ ಜನ ಇಲ್ಲಿಗೇ ಬಂದು ಖರೀದಿ ಮಾಡ್ತಾರ. ನಕಲಿ ಸೀರಿ ಮಾರಿ ಖಾಯಂ ಗಿರಾಕಿಗೆ ಮೋಸ ಮಾಡಿ ವ್ಯಾಪಾರ ಕೆಡ್ಸಿಕೊಳ್ಳಾಕ ಯಾರೂ ತಯಾರಿರೂದಿಲ್ಲ. ಆದ್ರೂ... ಇದರಿಂದ ನಿಜವಾದ ಇಳಕಲ್ಲ ಸೀರಿ ವ್ಯಾಪಾರಸ್ಥರಿಗೆ ಸ್ವಲ್ಪ ಸಿಟ್ಟೈತಿ. ಆದ್ರ ನೇಕಾರಂಗೆ ತನ್ನ ಕೂಲಿಗೆ ಮೋಸ ಆಗೂದಿಲ್ಲ ಹೀಂಗಾಗಿ ನಕಲಿ ಸೀರಿ ಬಗ್ಗೆ ಸಿಟ್ಟಿರೂದಿಲ್ಲ." ಎಂದು ಇಳಕಲ್ಲಿನ ಪ್ರಸಿದ್ಧ ರೇಷ್ಮೆ ಸೀರೆ ಉತ್ಪಾದಕ ಹಾಗೂ ಮಾರಾಟಗಾರ ಕರ್ನಾಟಕ ರಾಜ್ಯ ಪ್ರಶಸ್ತಿ ವಿಜೇತ *ಸೀತಾರಾಮ ಸರೋದೆ* ಅಭಿಪ್ರಾಯಪಡುತ್ತಾರೆ.

**ಗುಳೇದಗುಡ್ಡದ ಖಣ ನೇಕಾರಿಕೆಯಲ್ಲಿನ ಆತಂಕಗಳು :**

"ಚಟಕ್ ಪಟಕ್ ಪುಟ್ಯಾಗ ರೊಟ್ಟಿಲ್ಲ !
ಕಾಗಿ ಕಾಗಿ ಕವ್ವಾ, ಯಾರ ಬಂದಾರವ್ವಾ?
ಮಾವ ಬಂದಾನವ್ವಾ, ಏನ ತಂದಾನವ್ವಾ?
ಹಂಡೇದಂಥ ಹೊಟ್ಟಿ ಬಿಟಗೊಂಡು ಹಂಗs ಬಂದಾನವ್ವಾ!
ಮಾವಗೇನ ಊಟ, ಬೀಸುಕಲ್ಲ ಗೂಟ!"[೭]

ಇದು ನೇಕಾರರ ಮಕ್ಕಳ ಬಾಯಲ್ಲಿ ಬರುವ ಹಾಡಿನ ಸತ್ಯ ದರ್ಶನ! ಅವರ ಆತಂಕವೇ ಹಾಡಾಗಿ ಹೊರಹೊಮ್ಮಿದೆ.

ಎಲ್ಲ ಕ್ಷೇತ್ರಗಳಲ್ಲೂ ದೇಸಿ ಸಂಸ್ಕೃತಿ, ಪರಂಪರೆ ಕ್ಷೀಣಿಸುತ್ತಿರುವಂತೆ ಗುಳೇದಗುಡ್ಡದ ಖಣ ಉದ್ಯಮವೂ ಆತಂಕದ ಕ್ಷಣಗಳನ್ನು ಎದುರಿಸುತ್ತಿದೆ. ಇವುಗಳು ಸುಧಾರಣೆಯಾದಲ್ಲಿ

ಗುಳೇದಗುಡ್ಡದ ಖಣ ಉದ್ದಿಮೆ ಉತ್ತುಂಗಕ್ಕೇರಲು ಭವಿಷ್ಯದ ಮೆಟ್ಟಿಲುಗಳಾಗ ಬಹುದು! ರೈತ(ಮೇಳಿ) ಬಿಸಿಲಲ್ಲಿ ದುಡಿದರೆ, ನೇಕಾರ(ಲಾಳಿ) ನೆರಳಲ್ಲಿ ದುಡಿಯುತ್ತಾನೆ.

ಆದರೂ ನೆರಳಿನಲ್ಲಿ ದುಡಿದರೂ ನರಳಬೇಕಾಗಿದೆ ನೇಕಾರ ! ಏಕೆಂದರೆ...

➢ **ಕುಪ್ಪಸದ ಖಣ ಸಹಿತ ಸೀರೆಯೊಂದಿಗೆ ಪೈಪೋಟಿ :**

"ನಮ್ಮ ರಾಜ್ಯದಲ್ಲಿ ಈಗ ಹೊಸ ವಿನ್ಯಾಸದ ೬.೨೦ ಮೀಟರ್ ಇಳಕಲ್ಲ ಸೀರೆಗೆ ಭಾರಿ ಬೇಡಿಕೆಯಿದ್ದು, ಇದರಲ್ಲಿ ೫.೩೦ ಮೀಟರ್ ಸೀರೆ + ೭೦ ಸೆಂ.ಮೀ. ಕುಪ್ಪಸದ ಬಟ್ಟೆ ಇರುತ್ತದೆ. ಇದು ಗುಳೇದಗುಡ್ಡದ ಖಣಕ್ಕೆ ತೀವ್ರ ಪೆಟ್ಟು ನೀಡುತ್ತದೆ" ಎಂಬುದು ಖಣದ ಉತ್ಪಾದಕ ಹಾಗೂ ಸಗಟು ವ್ಯಾಪಾರಿ ಮಲ್ಲಿಕಾರ್ಜುನ ರಾಜನಾಳರ ಅಭಿಪ್ರಾಯ.

➢ **ಕುಪ್ಪಸವೇ ನೀನೇಕೆ ಸೀರೆಯ ಹೊರಕುಳಿತೆ ? :**

ಏಕೆಂದರೆ ಒಂದೊಂದು ಪ್ರದೇಶದ ಒಂದೊಂದು ಜನಾಂಗದ ಸ್ತ್ರೀಯರು ಒಂದೊಂದು ನಮೂನೆಯ ಕುಪ್ಪಸಗಳನ್ನು ಧರಿಸುತ್ತಾರೆ. ಇನ್ನೂ ಕೆಲವು ಜನಾಂಗದಲ್ಲಿ ಕುಪ್ಪಸವನ್ನೇ ಧರಿಸುವುದಿಲ್ಲ! ಇಂಥವರು ಕೇವಲ ಸೀರೆಯನ್ನು ಮಾತ್ರ ಕೊಳ್ಳುತ್ತಾರೆಯೇ ಹೊರತು ಕುಪ್ಪಸದ ಜೊತೆಗಿರುವ ಸೀರೆಯನ್ನು ಕೊಳ್ಳುವುದಿಲ್ಲ.

ಗುಳೇದಗುಡ್ಡದ ಖಣ ಕೇವಲ ಹಳ್ಳಿಯ ಮುದುಕಿಯರ ಉ(ಮು)ಡುಪಾಗಿದೆ! "ಉತ್ತರ ಕರ್ನಾಟಕ ಹಾಗೂ ಮಹಾರಾಷ್ಟ್ರ ಭಾಗದಾಗ ಒಂದ್ ಮುದುಕಿ ಸತ್ತರೆ... ನಮ್ಮದು (ಗುಳೇದಗುಡ್ಡದ) ಒಂದು ಮಗ್ಗ ಬಂದ್ ಆಗ್ತೈತಿ!" ಎಂಬ ಆಘಾತಕಾರಿ ಸತ್ಯವನ್ನು ಬಿಚ್ಚಿಡುತ್ತಾರೆ ನೇಕಾರ ಸಂಗಪ್ಪ ಶೀಪ್ರಿ.

- ಕ್ಷಣ ಕ್ಷಣಕ್ಕೂ ಬದಲಾಗುವ ಫ್ಯಾಶನ್‌ದೊಂದಿಗೆ ಖಣ ಪೈಪೋಟಿ ನೀಡದು.
- ಋತುಮಾನಗಳಿಗೆ ಅನುಗುಣವಾಗಿ ಪರಿಮಿತ ಕಾಣು(ಡು)ವ ಮಾರುಕಟ್ಟೆ.
- ಸಿದ್ಧ ಉಡುಪುಗಳ ಮೇಲಿನ ಪ್ರೀತಿ ಸರಕಾರದ ಜವಳಿ ನೀತಿ.
- ವೃತ್ತಿಗೆ ಆಧುನಿಕತೆಯ ಸ್ಪರ್ಶ ನೀಡದಿರುವುದು.
- ರವಿಕೆಗಳ ವಿನ್ಯಾಸಕ್ಕೆ ಕಂಪ್ಯೂಟರ್‌ಬಳಕೆಯಾಗುತ್ತಿರುವುದು. ಆದರೆ... ಖಣಕ್ಕೆ ಟಿ ಇದರ ಬಳಕೆ ಇಲ್ಲದಿರುವುದು.

- ನೈಟಿ, ಚೂಡಿದಾರಗಳು ಆಬಾಲ ವೃದ್ಧರಾದಿಯಾಗಿ ಸಾರ್ವತ್ರೀಕರಣಗೊಂಡಿರುವುದು.
- ಅಗ್ಗದ ದರದಲ್ಲಿ ಸಿಕ್ಕುವ ರೆಡಿಮೇಡ್ ಫ್ಯಾಶನೇಬಲ್ ರವಿಕೆಗಳ ಭರಾಟೆ.
- ಕೈಮಗ್ಗದ ನೇಕಾರರು ನೇಪಥ್ಯಕ್ಕೆ ಸರಿಯುತ್ತಿದ್ದಾರೆ. ಅವರ ಸಂಖ್ಯೆಯೂ ಕ್ಷೀಣಿಸುತ್ತಿದೆ.
- ವಿದ್ಯುತ್ ಮಗ್ಗಗಳಲ್ಲಿ ತಯಾರಾಗುವ ಖಣಗಳ ಬಾ(ತಾ)ಳಿಕೆ ಹಾಗೂ ಬಣ್ಣದ ಗುಣಮಟ್ಟದ ಸಮಸ್ಯೆ.
- ನಕಲಿ ಖಣಗಳನ್ನು ಬೇರೆ ಪ್ರದೇಶಗಳಲ್ಲಿ ನೇಯ್ದು ಮಾರಾಟಕ್ಕೆ ಅಣಿಗೊಳಿಸುತ್ತಿರುವುದು ಆತಂಕಕಾರಿ ಸ್ಪರ್ಧೆಯನ್ನು ಒಡ್ಡುತ್ತಿವೆ! ಇದಕ್ಕಾಗಿ ಸಮತೋಲಿಕ ಮಾರುಕಟ್ಟೆಯ ಅಗತ್ಯವಿದೆ.
- ದಿಢೀರನೇ ಘೋಷಿಸುವ ಜವಳಿ ನೀತಿಗಳು ನೇಕಾರ ಹಾಗೂ ಉದ್ದಿಮೆದಾರರನ್ನು ನಿದ್ದೆಗೆಡಿಸಿವೆ.
- ಪುನಃಶ್ಚೇತನಗೊಳ್ಳದೇ ಸೋತಿರುವಂತೆ ಭಾಸವಾಗುತ್ತಿರುವ ಸಹಕಾರಿ ಸಂಘಗಳು.
- ಕೈಮಗ್ಗ ಅಭಿವೃದ್ಧಿ ನಿಗಮದ ಯೋಜನಾ ಕಚೇರಿಯೂ ಆಧುನಿಕ ಮಹಿಳೆಯು ಕೈಮಗ್ಗದ ಖಣಗಳತ್ತ ಆಕರ್ಷಿತಳಾಗುವಂತೆ ಮಾರ್ಪಾಡು ತರಲು ಯೋಜನೆಗಳನ್ನು ಹಾಕಿಕೊಳ್ಳುವ ದೊಡ್ಡ ಜವಾಬ್ದಾರಿ ಅದರ ಹೆಗಲ ಮೇಲಿದೆ.
- ನೇಕಾರ ಖಾಸಗಿ ಧಣಿಗಳನ್ನೇ ಅವಲಂಬಿಸಿದ್ದಾನೆ. ನೇಕಾರನನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಂಡಂತಾಗಿದೆ.
- ಕೈಮಗ್ಗ ಅಭಿವೃದ್ಧಿ ನಿಗಮಕ್ಕೆ ಲಾಭ ಮುಖ್ಯ ಅಲ್ಲ. ಏಕೆಂದರೆ ಅದಕ್ಕೆ ರಿಯಾಯಿತಿ ಸೌಲಭ್ಯ ಇದೆ. ಇದರಿಂದ ಗುಣಮಟ್ಟ ಉಳಿಸಿಕೊಳ್ಳುವುದು ಅಸಾಧ್ಯದ ಮಾತು.
- ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ಗುಣಮಟ್ಟ ಉಳಿಸಿಕೊಂಡು ಉದ್ದಿಮೆ ಮುಂದುವರಿಸುವುದು ಖಾಸಗಿಯವರಿಗೆ

ಕಷ್ಟವಾದರೂ ಅನಿವಾರ್ಯವೂ ಆಗಿದೆ. ಆದರೆ ಇವರಿಗೆ ಗುಣಮಟ್ಟ ಕಾಪಾಡಿಕೊಳ್ಳುವುದೊಂದು ಸವಾಲಾಗಿದೆ.

- ಗಿರಾಕಿ ಸುಲಭವಾಗಿ ದಡಿ, ಒಡ್ಲು, ಸೆರಗು ನೋಡುವಂತಿರುವ ಸೂಕ್ತ ಪ್ಯಾಕಿಂಗ್ ವ್ಯವಸ್ಥೆ ಇಲ್ಲದಿರುವುದು.
- ಮಾರುಕಟ್ಟೆಯ ಏರಿಳಿತ, ಸರಕಾರದ ಜವಳಿ ನೀತಿ, ಭೀಕರ ಬರಗಾಲದಿಂದಾಗಿ ಒಮ್ಮೊಮ್ಮೆ ಬಡ ನೇಕಾರನಿಗೆ

  ಸುಧಾರಿಸಿಕೊಳ್ಳದಂತಹ ಪೆಟ್ಟು ಬೀಳುವುದರಿಂದ ಕೈಮಗ್ಗದ ಉದ್ದಿಮೆಯನ್ನು 'ರಕ್ಷಿತ ಉದ್ದಿಮೆ' ಎಂದು ಸರಕಾರ

  ಘೋಷಿಸಬೇಕೆಂಬುದು ನೇಕಾರರ ಬಹುದಿನದ ಬೇಡಿಕೆಯಾಗಿದೆ.
- ಜೊತೆಗೆ ನೇಕಾರನ ಅಜ್ಞಾನ, ಅನಕ್ಷರತೆ, ಸಂಘಟನೆಯ ಕೊರತೆ, ದುಶ್ಚಟಗಳು, ಅನಾರೋಗ್ಯ, ಕುಶಲತೆ

  ಅಭಾವಗಳೂ ಗುಳೇದಗುಡ್ಡದ ಖಣ ಉದ್ಯಮಕ್ಕೆ ಆತಂಕಕಾರಿ ವಿಷಯವೂ ಹೌದು.
- ಬಹಳ ಹೊತ್ತಿನವರೆಗೆ ವಿದ್ಯುತ್ ಇಲ್ಲದಿರುವಾಗ ಮಗ್ಗಗಳ, ವೈಂಡಿಂಗ್ ಯಂತ್ರಗಳ ಕೆಲಸ ಸ್ಥಗಿತವಾಗಿರುತ್ತದೆ. ಆಗ ಕೈಮಗ್ಗ ಹಾಗೂ ರಾಟೆ ಅಥವಾ ಚಕ್ರವೇ ಗತಿ. ಬೇಸಿಗೆಯಲ್ಲಂತೂ ಲೋಡ್ ಶೆಡ್ಡಿಂಗ್ ಇರುವುದರಿಂದ ನೇಕಾರನ ಹೊಟ್ಟೆ ಬೆನ್ನಿಗೆ ಹತ್ತಿದಂತಾಗುತ್ತದೆ.
- "ಗುಳೇದಗುಡ್ಡದ ಖಣದಂತಹ ವಿನ್ಯಾಸವನ್ನೇ ನಕಲು ಮಾಡಿ ಇತರೆ ಪ್ರದೇಶಗಳಲ್ಲಿ ನೇಯ್ದು ಮಾರಾಟ ಮಾಡುತ್ತಿದ್ದಾರಲ್ಲ..!" ಎಂದು ಕೇಳಿದರೆ, "ಗುಳೇದಗುಡ್ಡದ ಖಣ ಅಂದ್ರ ಗುಳೇದಗುಡ್ಡದ ಖಣನs! ಇವುಗಳ ಗುಣಮಟ್ಟ ಚೊಲೋ ಗಿರಾಕಿಗೆ ಹಾಗೂ ಲಾಟ್ ಖರೀದಿದಾರರಿಗೂ ಗೊತ್ತಾಗ್ತದ. ನಕಲಿ ಖಣ ಮಾರಿ ಖಾಯಂ ಗಿರಾಕಿಗೆ ಮೋಸ ಮಾಡಿ ವ್ಯಾಪಾರ ಕೆಡ್ಸಿಕೊಳ್ಳಾಕ ಯಾರೂ ತಯಾರಿರೂದಿಲ್ಲ. ಆದ್ರೂ... ಇದರಿಂದ ನಿಜವಾದ ಗುಳೇದಗುಡ್ಡದ ಖಣದ ವ್ಯಾಪಾರಸ್ಥರಿಗೆ ಸ್ವಲ್ಪ ಸಿಟ್ಟೈತಿ. ಆದ್ರ ನೇಕಾರನಿಗೆ ತನ್ನ ಕೂಲಿಗೆ ಮೋಸ ಆಗೂದಿಲ್ಲ ಹೀಂಗಾಗಿ ನಕಲಿ ಖಣದ ಬಗ್ಗೆ ಸಿಟ್ಟಿರೂದಿಲ್ಲ." ಎಂದು ಖಣ ಉತ್ಪಾದಕ ಹಾಗೂ ಮಾರಾಟಗಾರ ಶ್ರೀಧರ ಕೊಳ್ಳಿ ಅಭಿಪ್ರಾಯಪಡುತ್ತಾರೆ.

- ಕೈಮಗ್ಗಗಳನ್ನು ವಿದ್ಯುತ್ ಚಾಲಿತ ಮಗ್ಗಗಳನ್ನಾಗಿ ಪರಿವರ್ತಿಸುವ 'ಕಾನುಂಗೊ ಸಮಿತಿ' ಒಂದೆಡೆಯಾದರೆ, 'ಸಂತಾನಂ ಸಮಿತಿ'ಯು ಕೈಮಗ್ಗದ ನೇಕಾರರನ್ನು ವಿದ್ಯುತ್ ಮಗ್ಗ ರಂಗದಲ್ಲಿ ಸೇರಿಸುವ ಸಲುವಾಗಿ ಕೈಮಗ್ಗ ಮೀಸಲಾತಿ ಕಾಯ್ದೆಯನ್ನೇ ರದ್ದುಪಡಿಸಲು ಹೊರಟಿದ್ದು ಮತ್ತೊಂದೆಡೆ! ಇವುಗಳ ನಡುವೆ ೧೯೮೫ರ ಹೊಸ ಜವಳಿ ಧೋರಣೆ ಬೇರೆ. ಈ ಎಲ್ಲರದೂ ವಿದ್ಯುತ್ ಮಗ್ಗಕ್ಕೇ ಜಯಕಾರ![೮]

**ಕಮತಗಿ ಪಟಗ ಮತ್ತು ರುಮಾಲು ನೇಕಾರಿಕೆಯಲ್ಲಿನ ಆತಂಕಗಳು :**

"ಈಗ ಬೊಕ್ಕತಲಿ ಬಿಟಗೊಂಡು ಫ್ಯಾಶನ್ ಮಾಡೋ ಕಾಲ ಬಂದೈತ್ರಿ, ನಮ್ಮ ಕೈಯ್ಯಾಗ ಸತುವು(ಶಕ್ತಿ) ಇರೋ ತನಕ ಲಾಳಿ ಜಗ್ಗತೀವ್ರಿ, ಮುಂದ ಹ್ಯಾಂಗೋ ಏನೋ.." ಎಂದು ನಿಟ್ಟುಸಿರು ಬಿಡುವ ಶಾಂತವ್ವ ಗಂಜಿಹಾಳ ತನ್ನ ಆತಂಕವನ್ನು ತೋಡಿಕೊಳ್ಳುತ್ತಾಳೆ. ಹೌದು! ದೇಸಿ ಸಂಸ್ಕೃತಿ, ಪರಂಪರೆ ಕ್ಷೀಣಿಸುತ್ತಿರುವಂತೆ ಪಟಗ ಅಥವಾ ರುಮಾಲು ಉದ್ಯಮವೂ ಆತಂಕದ ಕ್ಷಣಗಳನ್ನು ಎದುರಿಸುತ್ತಿದೆ. ರೈತ(ಮೇಳಿ) ಬಿಸಿಲಲ್ಲಿ ದುಡಿದರೆ, ನೇಕಾರ(ಲಾಳಿ) ನೆರಳಲ್ಲಿ ದುಡಿಯುತ್ತಾನೆ. ಆದರೂ *ನೇಕಾರ ನೆರಳಿನಲ್ಲಿ ದುಡಿದರೂ ನರಳಬೇಕಾಗಿದೆ!*

- ಮಾರುಕಟ್ಟೆಗೆ ಅಗ್ಗದ ಹಾಗೂ ಆಕರ್ಷಣೀಯ ಸೂರತ್ ಚೈನಾ ರುಮಾಲುಗಳ ದಾಳಿ.
- ಸಂಸ್ಕೃತಿಯ ನಿರ್ಲಕ್ಷ್ಯ , ಫ್ಯಾಶನ್ ಮೋಹ.
- ಮಾರುಕಟ್ಟೆಯಲ್ಲಿ ಬೇಡಿಕೆಯ ಏರಿಳಿತ.
- ಸರಕಾರದ ಜವಳಿ ನೀತಿಯಾಗಿರುವ ಕೈಮಗ್ಗ ಮೀಸಲು ಅಧಿ ನಿಯಮ-೧೯೮೫ನ್ನು ಪರಿಷ್ಕರಿಸುವುದು.
- ವೃತ್ತಿಗೆ ಆಧುನಿಕತೆಯ ಸ್ಪರ್ಶ ನೀಡದಿರುವುದು.
- ಅಗ್ಗದ ದರದಲ್ಲಿ ಸಿಕ್ಕುವ ಫ್ಯಾಶನೇಬಲ್ ಟರ್ಬನ್ ಹ್ಯಾಟ್‌ಗಳ ಭರಾಟೆ.
- ಕಮತಗಿಯ ರುಮಾಲು ಅಥವಾ ಪಟಗ ಕೇವಲ ಹಳ್ಳಿಯ ಮುದುಕರ ಉ(ಮು)ಡುಪಾಗಿದೆ!

- ಕೈಮಗ್ಗದ ನೇಕಾರರು ನೇಪಥ್ಯಕ್ಕೆ ಸರಿಯುತ್ತಿದ್ದಾರೆ. ಅವರ ಸಂಖ್ಯೆಯೂ ಕ್ಷೀಣಿಸುತ್ತಿದೆ.
- ನಕಲಿ ನಕಲಿ ಕಮತಗಿ ಪಟಗಗಳನ್ನು ಬೇರೆ ಪ್ರದೇಶಗಳಲ್ಲಿ ನೇಯ್ದು ಮಾರಾಟಕ್ಕೆ ಅಣಿಗೊಳಿಸುತ್ತಿರುವುದು
 ಆತಂಕಕಾರಿ ಸ್ಪರ್ಧೆಯನ್ನೊಡ್ಡುತ್ತಿವೆ! ಇದಕ್ಕಾಗಿ ಸಮತೋಲಿಕ ಮಾರುಕಟ್ಟೆಯ ಅಗತ್ಯವಿದೆ.
- ದಿಢೀರನೇ ಘೋಷಿಸುವ ಜವಳಿ ನೀತಿಗಳು ನೇಕಾರ ಹಾಗೂ ಉದ್ದಿಮೆದಾರರನ್ನು ನಿದ್ದೆಗೆಡಿಸಿವೆ.
- ಸೋತಿರುವಂತಿರುವ ಸಹಕಾರಿ ಸಂಘಗಳು ಪಟಗಗಳ ಮಾರಾಟಕ್ಕೆ ಪುನಃಶ್ಚೇತನಗೊಳ್ಳಬೇಕಿದೆ.
- ಕೈಮಗ್ಗ ಅಭಿವೃದ್ಧಿ ನಿಗಮಗಳು ಆಧುನಿಕ ಪುರುಷರು ಕೈಮಗ್ಗದ ಕಮತಗಿ ಪಟಗಗಳತ್ತ
 ಆಕರ್ಷಿತರಾಗುವಂತೆ ಮಾರ್ಪಾಡು ತರಲು ಯೋಜನೆಗಳನ್ನು ಹಾಕಿಕೊಳ್ಳುವ ದೊಡ್ಡ ಜವಾಬ್ದಾರಿ
 ಅದರ ಹೆಗಲ ಮೇಲಿದೆ.
- ಕಮತಗಿಯ ಪಟಗಗಳ ನೇಕಾರ ಖಾಸಗಿ ಧಣಿಗಳನ್ನೇ ಅವಲಂಬಿಸಿದ್ದಾನೆ.
- ಮಾರುಕಟ್ಟೆಯ ಏರಿಳಿತ, ಸರಕಾರದ ಜವಳಿ ನೀತಿ, ಭೀಕರ ಬರಗಾಲದಿಂದಾಗಿ ಒಮ್ಮೊಮ್ಮೆ ಬಡ ನೇಕಾರನಿಗೆ ಸುಧಾರಿಸಿಕೊಳ್ಳದಂತಹ ಪೆಟ್ಟು ಬೀಳುವುದರಿಂದ ಕೈಮಗ್ಗದ ಉದ್ದಿಮೆಯನ್ನು 'ರಕ್ಷಿತ ಉದ್ದಿಮೆ' ಎಂದು ಸರಕಾರ ಘೋಷಿಸಬೇಕೆಂಬುದು ನೇಕಾರರ ಬಹುದಿನದ ಬೇಡಿಕೆಯಾಗಿದೆ.
- ಜೊತೆಗೆ ನೇಕಾರನ ಅಜ್ಞಾನ, ಅನಕ್ಷರತೆ, ಸಂಘಟನೆಯ ಕೊರತೆ, ದುಶ್ಚಟಗಳು, ಅನಾರೋಗ್ಯ, ಕುಶಲತೆ ಅಭಾವಗಳೂ ಕಮತಗಿ ಪಟಗದ ಉದ್ಯಮಕ್ಕೆ ಆತಂಕಕಾರಿ ವಿಷಯವೂ ಹೌದು.

**ಅಮೀನಗಡದ ಕರದಂಟು ತಯಾರಿಕೆ : ಸಮಸ್ಯೆಗಳು**

ಅಮೀನಗಡದ ಕರದಂಟು ಉದ್ಯಮದಲ್ಲಿ ಸಮಸ್ಯೆಗಳು ಮೇಲ್ನೋಟಕ್ಕೆ ಕಂಡು ಬರುತ್ತಿಲ್ಲವಾದರೂ ಸಣ್ಣ ಸಣ್ಣ ತಯಾರಕರಿಗೆ ಅದೂ ಬಿಸಿ ತುಪ್ಪವಾಗಿ ಪರಿಣಮಿಸಿದೆ.

- ಅಮೀನಗಡದ ಒರಿನಲ್ ತಾವೇ ಎಂದು ಜಾತ್ರೆ, ವಸ್ತು ಪ್ರದರ್ಶನ, ಸಮ್ಮೇಳನಗಳಲ್ಲಿ ಅಂಗಡಿಯನ್ನಿಟ್ಟು ದೊಡ್ಡ ದೊಡ್ಡ ಬೋರ್ಡ್, ಬ್ಯಾನರ್ ಹಾಕಿಕೊಂಡು ಮರಳು ಮಾಡಿ ಮಾರಾಟ ಮಾಡುತ್ತಿದ್ದಾರೆ. ಇದರಿಂದ ಮೂಲ ತಯಾರಕರಿಗೆ ಹೊಡೆತ ಬೀಳುತ್ತದೆ.
- ಅಮೀನಗಡದಲ್ಲಿಯೇ ಎಲ್ಲರ ಅಂಗಡಿಗಳಿದ್ದು, ಮಾರಾಟವೂ ಇಲ್ಲಿಯೇ ನಡೆಯುವುದರಿಂದ ಗ್ರಾಹಕರು ಖರೀದಿಗೆ ಇಲ್ಲಿಗೇ ಬಂದು ಕೊಂಡುಕೊಳ್ಳುವುದು ಕಷ್ಟವಾಗುತ್ತದೆ. ಸಾರಿಗೆ ವೆಚ್ಚವೇ ಅಧಿಕವಾಗುತ್ತದೆ.
- ಈ ಗ್ರಾಮವು ನೇಕಾರರ ಊರಾಗಿರುವುದರಿಂದ ಕೆ.ಜಿ.ಗಳಲ್ಲಿ ಕರದಂಟು ಕೊಳ್ಳುವಷ್ಟು ಸಮರ್ಥರಿರುವುದಿಲ್ಲ. ಹೀಗಾಗಿ ಸಣ್ಣ ಸಣ್ಣ ಬೇಡಿಕೆಯನ್ನೂ ಗ್ರಾಹಕರಿಂದ ಸ್ವೀಕರಿಸಬೇಕಾಗುತ್ತದೆ.
- ರಾಜ್ಯದ ಬೇರೆ ಬೇರೆ ಭಾಗಗಳಲ್ಲಿಯೂ ಮೂಲ ಕರದಂಟು ಸಿಕ್ಕುತ್ತಿಲ್ಲವೆಂಬ ಕೊರಗು ಗ್ರಾಹಕರದ್ದಾಗಿದೆ.
- ಅಂಚೆ ಮೂಲಕ ತರಿಸಿಕೊಳ್ಳಲು ಅಂಚೆ (ಕೋರಿಯರ್) ವೆಚ್ಚ ಹೆಚ್ಚುವರಿಯಾಗುತ್ತದೆ.
- ಅಂಚೆ (ಕೋರಿಯರ್) ಮೂಲಕ ಬರುವಷ್ಟರಲ್ಲಿ ಕರದಂಟು ತನ್ನ ತಾಜಾತನ ಕಳೆದುಕೊಳ್ಳುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ.
- ಅಮೀನಗಡದ ಕರದಂಟು ತಯಾರಿಕೆಯಲ್ಲಿ ರುಚಿಯ ಜೊತೆಗೆ ಶುಚಿಯ ಕಡೆಗೂ ಇನ್ನಷ್ಟು ಗಮನ ಹರಿಸಬೇಕು.
- ಬೀದಿ ಬದಿಯ ಮಾರಾಟಗಾರರು ಹಾಗೂ ತಲೆ ಮೇಲೆ ಹೊತ್ತು ಮಾರುವವರು 'ತೆರೆದ ತಿಂಡಿ, ರೋಗದ ಬಂಡಿ' ಎಂಬ ಬಗ್ಗೆ ಸದಾ ಜಾಗೃತರಾಗಿದ್ದು, ಧೂಳು, ನೊಣಗಳು ಬರದಂತೆ ರಕ್ಷಾ ಕವಚ ಹೊದಿಸಬೇಕು.
- ದೊಡ್ಡ ದೊಡ್ಡ ಊರುಗಳಲ್ಲಿ ಮೂಲ ರುಚಿಯ ತಾಜಾ ಕರದಂಟು ಮಾರಾಟ ಕೇಂದ್ರಗಳನ್ನು ತೆರೆಯಬೇಕು.
- ಯಾವುದೇ ಕಾರಣಕ್ಕೂ ಗುಣಮಟ್ಟದಲ್ಲಿ ರಾಜೀಯಾಗ ಕೂಡದು.

**ರಾಜೂರ ಸುಣ್ಣ ತಯಾರಿಕೆಯಲ್ಲಿನ ಆತಂಕಗಳು :**

ಸುಣ್ಣ ಸುಡುವ ಕಾಯಕದಲ್ಲೂ ಅನೇಕ ಆತಂಕಗಳು ಎದುರಾಗುತ್ತವೆ. ಅವುಗಳಿಂದ ಪಾರಾಗಲು ತುಂಬಾ ಎಚ್ಚರಿಕೆ ವಹಿಸಬೇಕಾಗುತ್ತದೆ. ಸುಣ್ಣ ಸುಡುವವರ ಬದುಕು ಕೂಡಾ ಸುಣ್ಣದಂತೆ ಕುದಿಯುತ್ತದೆ.

- ಜಾಗತೀಕರಣ, ಆಧುನೀಕರಣದ ಪ್ರಭಾವಕ್ಕೆ ಎದೆಗೊಡಲು ತೀರಾ ಕಷ್ಟಸಾಧ್ಯ!
- ಸಾಕ್ಷರತೆಯ ಪ್ರಮಾಣ ಕಡಿಮೆಯಾಗುತ್ತದೆ.
- ಪಾಕೆಟ್ ಸುಣ್ಣದೊಂದಿಗೂ ಪೈಪೋಟಿ ನಡೆಸಲಾಗುತ್ತಿಲ್ಲ.
- ಸುಣ್ಣಗಾರಿಕೆಗೆ ಮಾರುಕಟ್ಟೆ ಹಾಗೂ ಬಂಡವಾಳದ ಕೊರತೆ.
- ಸುಣ್ಣಗಾರಿಕೆಯನ್ನೂ ಒಂದು ಪ್ರಮುಖ ಗುಡಿಕೈಗಾರಿಕೆ ಎಂದು ಬ್ಯಾಂಕಿನವರು ಪರಿಗಣಿಸಿಲ್ಲ.
- ಸುಣ್ಣದ ಬಗೆಗಿನ ಆಸಕ್ತಿ ಇಂದಿನ ಪೀಳಿಗೆ ಹಾಗೂ ಸರಕಾರಕ್ಕಿಲ್ಲ!
- ಮಳೆಗಾಲದಲ್ಲಿ ಸುಣ್ಣ ತಯಾರಿಸುವುದು ಹಾಗೂ ಮಾರಾಟ ಮಾಡುವುದು ಸುಲಭದ ಮಾತಲ್ಲ.
- ರೋಗಗಳನ್ನು ತಡೆಯಲು ಮುಂಜಾಗ್ರತಾ ಕ್ರಮಕೈಗೊಳ್ಳಬೇಕು. ಮಾಸ್ಕ್, ಗ್ಲೋವ್ಸ್ ಬಳಸುವುದು.
- ಭಟ್ಟಿಯ ಹೊಗೆಯು ಜನಸಂದಣಿ ಇಲ್ಲದ ಕಡೆ ಹೋಗುವಂತೆ ಮಾಡುವುದು.
- ಸುಣ್ಣದ ಕಲ್ಲು ಮುಗಿದುಹೋಗುವ ಕಚ್ಚಾವಸ್ತು, ಹಿತ–ಮಿತವಾಗಿ ಬಳಕೆ ಮಾಡಬೇಕು.
- ಸುಣ್ಣದ ಕಲ್ಲನ್ನು ತುಂಡು ಮಾಡಿದ ನಂತರ ಉಳಿಯು ಪುಡಿಯನ್ನೂ ಕುರುಳಾಗಿ ಬಳಸುವುದು.
- ಸುಣ್ಣಗಾರಿಕೆಗೆ ಏಕಸ್ವಾಮ್ಯತೆ ಇಲ್ಲ. ಅನ್ಯರೂ ಈ ಕಸಬಿಗೆ ಕೈ ಹಾಕಬಹುದು.
- ಸುಣ್ಣವನ್ನು ಬಳಸುವಾಗ, ಮಡಿಕೆಯ ನೀರಿನಲ್ಲಿ ಹಾಕುವಾಗ ಜಾಗೃತರಾಗಿಬೇಕು.
- ಸುಣ್ಣಗಾರಿಕೆಯಲ್ಲಿ ತಮ್ಮ ಮಕ್ಕಳನ್ನೂ ತೊಡಗಿಸಿದಾಗ ಶಿಕ್ಷಣದಿಂದ ವಂಚಿತರಾಗುತ್ತಾರೆ.

- ಮಕ್ಕಳು ಅವಕಾಶ ಸಿಕ್ಕರೆ ಮಾತ್ರ ಶಾಲೆಗೆ ಹೋಗುತ್ತಾರೆ!
- ತುಂಬಾ ದಣಿವು-ಪ್ರಯುಕ್ತ ಮಕ್ಕಳ ಓದಿನ ಕಡೆಗೆ ಗಮನ ನೀಡುವುದಿಲ್ಲ.

**ಭಾಗ್ಯನಗರದ ಕೇಶೋದ್ಯಮಕ್ಕೂ ಕ್ಲೇಶ !**

ಇಲ್ಲಿಯವರೆಗೆ ಕೋಟ್ಯಂತರ ರೂಪಾಯಿ ಲಾಭ ಗಿಟ್ಟಿಸಿಕೊಳ್ಳುತ್ತಿದ್ದ ಈ ಉದ್ಯಮಕ್ಕೂ ಈಗ ಗರ ಬಡಿದಿದೆ. ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ರೂಪಾಯಿ ಹಾಗೂ ಡಾಲರ್ ಮೌಲ್ಯಗಳ ಏರಿಳಿತವನ್ನೂ ಅವಲಂಬಿಸಿರುವ ಕೇಶೋದ್ಯಮಕ್ಕೆ ಆಗಾಗ್ಯೆ ಆತಂಕಗಳು ತೀರಾ ಸಾಮಾನ್ಯ. ಡಾಲರ್ ಎದಿರು ರೂಪಾಯಿ ಮೌಲ್ಯ ಕುಸಿತವಾಗುವುದರಿಂದ ರಫ್ತು ವ್ಯವಹಾರಕ್ಕೆ ದೊಡ್ಡ ಹೊಡೆತ ಬೀಳುತ್ತದೆ. ಇಂತಹ ಹೊಡೆದ ತಾಳದೆ ಚಿಕ್ಕ-ಪುಟ್ಟ ಉದ್ದಿಮೆದಾರರು ಕಿರು ಘಟಕಗಳನ್ನು ಈಗಾಗಲೇ ಮುಚ್ಚಿದ್ದಾರೆ.

ಅಲ್ಲದೇ ಮೊದಲಿನಂತೆ ಕಚ್ಚಾ ವಸ್ತುಗಳು ಈಗ ಅಗ್ಗದ ದರದಲ್ಲಿ ಸಿಗುತ್ತಿಲ್ಲ. ಇನ್ನೊಂದೆಡೆ ಸಂಸ್ಕರಣ ವೆಚ್ಚದಲ್ಲಿಯೂ ಗಣನೀಯ ಏರಿಕೆಯಾಗಿದೆ.

ಕೂದಲು ತ್ಯಾಜ್ಯದಿಂದ ಪರಿಸರ ಹಾಳಾಗುವುದನ್ನು ತಪ್ಪಿಸುವ ಜೊತೆಗೆ ಮರು ಬಳಕೆಗೆ ಪ್ರೋತ್ಸಾಹಿಸುವ ಈ ಉದ್ದಿಮೆಗೆ ಕೇಂದ್ರ ಸರಕಾರ ೨% ರೂಪಾಯಿ ಸಹಾಯಧನ ನೀಡುತ್ತಿದೆ. ಕೂದಲನ್ನು ಬಳಕೆ ಮಾಡಿದ ನಂತರವೂ ಉಳಿಯುವ ನಿರುಪಯುಕ್ತ ತ್ಯಾಜ್ಯವನ್ನು ಪರಿಸರಕ್ಕೆ ಹಾನಿಯಾಗದಂತೆ ತಗ್ಗು ತೋಡಿ ಮುಚ್ಚುವಂತಹ ಕೆಲಸಕ್ಕೆ ಈ ೨% ಸಹಾಯಧನ ಸಾಲದು.

"ಕಚ್ಚಾ ಕೂದಲನ್ನು ಚೀನಾಕ್ಕೆ ಕಳ್ಳ ಸಾಗಣೆ ಮೂಲಕ ರವಾನಿಸುವ ಕೃತ್ಯ ನಾಲ್ಕು ವರ್ಷಗಳಿಂದ ನಡೆಯುತ್ತಿದ್ದು, ಕೋಟ್ಯಂತರ ರೂಪಾಯಿ ರಫ್ತು ಆದಾಯ ಖೋತಾ ಆಗಿದೆ. ಕಚ್ಚಾ ಕೂದಲನ್ನು ರಫ್ತು ಮಾಡುವಂತಿಲ್ಲ. ಚೀನಾ ಕಾನೂನಿನಂತೆ ಕಚ್ಚಾ ಕೂದಲು ಖರೀದಿಸುವಂತಿಲ್ಲ. ಆದರೆ ವ್ಯಾಪಾರಿಗಳೇ ಅಸ್ಸಾಂನ ಗುವಾಟಿ, ಬರ್ಮಾ ಮೂಲಕ ಚೀನಾಕ್ಕೆ ಕಚ್ಚಾ ಕೂದಲು ಪೂರೈಸುತ್ತಿದ್ದಾರೆ. ಇದರಿಂದ ದೇಶದ ಕೂದಲು ಉದ್ಯಮ ಕುಸಿಯುತ್ತಿದೆ ಎಂದು ಗುಪ್ತಾ ಹೇಳಿದರು. ಬೆಂಗಳೂರಿನಲ್ಲೂ ಈ ಜಾಲವಿದೆ. ವ್ಯಾಪಾರಿಗಳು ಕೂದಲನ್ನು ಸಣ್ಣ ಪ್ರಮಾಣದ ಸಂಗ್ರಹಕಾರರಿಂದಲೇ ಪಡೆದು ಸಾಗಿಸುತ್ತಾರೆ. ಈ ಬಗ್ಗೆ ಕೇಂದ್ರ ಸರ್ಕಾರ ನಿಗಾ ವಹಿಸಬೇಕು ಎಂದು ಅವರು ಒತ್ತಾಯಿಸಿದರು."

ಇಂತಹ ವಿಷಯವನ್ನು ಆಗಾಗ್ಯೆ ಪತ್ರಿಕೆಗಳಲ್ಲಿ ಬರುವುದನ್ನು ನೋಡಿದಾಗ ನಿಜಕ್ಕೂ ಕೂದಲು ಕಸಬು, ಇಂದು ಬೃಹತ್ ಅಂತರರಾಷ್ಟ್ರೀಯ ಉದ್ದಿಮೆಯಾಗಿ ಬೆಳೆಯುತ್ತಿರುವುದರ ಮಹಿಮೆ ಅರ್ಥವಾಗುತ್ತದೆ. ಇದರಿಂದ ಕೂದಲು ಕಸಬನ್ನೇ ನಂಬಿದ ಸಣ್ಣ ಸಣ್ಣ ಕಸಬುದಾರರು ಕಸಬಿನಿಂದ ವಿಮುಖರಾಗುತ್ತಿರುವುದಕ್ಕೆ ಮೂಲ ಕಾರಣ ಇದೇ ಆಗಿದ್ದರೂ ಆಶ್ಚರ್ಯವಿಲ್ಲ.

ಭಾರತದಲ್ಲಿಯೇ ತಯಾರಿಸಿ ಪರಿಕಲ್ಪನೆ ಅಡಿಯಲ್ಲಿಯೇ ಆಗಲಿ ನಮ್ಮ ದೇಶದಲ್ಲಿ ಗುಣಮಟ್ಟದ ವಿಗ್ ತಯಾರಿಕೆ ತಂತ್ರಜ್ಞಾನ ಬರಬೇಕು, ಅಂತಹ ಘಟಕ ಸ್ಥಾಪಿಸಿದರೂ ಕಚ್ಚಾ ವಸ್ತು ಪೂರೈಕೆಗೆ ಭಾಗ್ಯನಗರ ಸಿದ್ಧವಿದೆ. ತಂತ್ರಜ್ಞಾನದ ನೆರವು ಅಥವಾ ವಿಗ್ ತಯಾರಿಕಾ ಘಟಕ ಸ್ಥಾಪನೆ ಇಲ್ಲಿಯೇ ಆದರೆ ಉದ್ಯಮದ ಪ್ರಗತಿ ದೃಷ್ಟಿಯಿಂದ ಒಳ್ಳೆಯದು.

ಈ ಉದ್ಯಮಕ್ಕೆ ಕಾರ್ಮಿಕರ ಕೊರತೆಯೂ ಎದುರಾಗಿದೆ ಎಂಬುದು ಕೇಶೋದ್ಯಮಿಗಳ ಅಳಲು.

ಕೂದಲೂ ಸಂಸ್ಕರಣಾ ಘಟಕಗಳಲ್ಲಿದ್ದ ಕಾರ್ಮಿಕರು ಪರ್ಯಾಯ ಉದ್ಯೋಗದತ್ತ ಮುಖಮಾಡಿದ್ದಾರೆ. ಕೂದಲು ಸಂಸ್ಕರಣೆಯಲ್ಲಿ ಆರೋಗ್ಯ ಸಮಸ್ಯೆಗಳೂ ಕಂಡು ಬರುವುದರಿಂದ ಕೆಲಸಗಾರರು ಬೇರೆ ಉದ್ಯೋಗದತ್ತ ಮುಖ ಮಾಡಿದ್ದಾರೆ. ಕಾರ್ಮಿಕರ ವಲಸೆ ಪ್ರವೃತ್ತಿಯು ಕೂಡ ಉದ್ದಿಮೆಯ ಮೇಲೆ ವ್ಯತಿರಿಕ್ತ ಪರಿಣಾಮ ಬೀರುತ್ತಿದೆ.

ಇದೇ ಊರಿನ ಸೀರೆ ಉದ್ಯಮ ಈಗ ಉಚ್ಛಾಯ ಸ್ಥಿತಿಯಲ್ಲಿದೆ. ಬಹುತೇಕರು ನೇಕಾರಿಕೆಯತ್ತ ಆಸಕ್ತಿ ತೋರಿದ್ದಾರೆ. ವಿದ್ಯುತ್ ಮಗ್ಗಗಳಿಗೂ ಸರ್ಕಾರದ ನೆರವು ಸಿಗುತ್ತಿದೆ. ನಗರದಲ್ಲಿ ಸಿದ್ದ ಉಡುಪು ಘಟಕವೂ ತಲೆಯೆತ್ತಿದೆ.

**ವಿಶ್ವವಿಖ್ಯಾತ ಕಿನ್ನಾಳ ಕಲೆಗೂ ಆತಂಕಕಾರಿ ಸವಾಲುಗಳು :**

ನ್ನಾಳ ಕಲೆ ದಿನದಿನವೂ ಸೊರಗುತ್ತಾ ನೆಲೆ ಕಳೆದುಕೊಳ್ಳುತ್ತಿದೆಯೇ? ಎಂಬ ಮಾತಿಗೆ... "ಕಲೆ ಇದೆ. ಕಲಾಕಾರರೂ ಇದ್ದಾರೆ. ಬೇಡಿಕೆಯೂ ಇದೆ. ಆದರೆ ನಾವೇ ಅದನ್ನು ಹಾಳು ಮಾಡುತ್ತಿದ್ದೇವೆ. ಸಂಘಟಿತರಾಗಿ ಕಲೆಯನ್ನು ಉಳಿಸಿ ಬೆಳೆಸಬೇಕಿದೆ." ಎಂದು ನೋವು ತೋಡಿಕೊಳ್ಳುತ್ತಾರೆ ಏಕಪ್ಪ ಚಿತ್ರಗಾರ. ವೈಭವದ ಕರಕುಶಲ

ಕಾಯಕದಲ್ಲೂ ಅನೇಕ ಆತಂಕಕಾರಿ ಸವಾಲುಗಳು ಎದುರಾಗುತ್ತವೆ. ಅವುಗಳಿಂದ ಪಾರಾಗಲು ತುಂಬಾ ಎಚ್ಚರಿಕೆವಹಿಸಬೇಕಾಗುತ್ತದೆ.

- ವಿನ್ಯಾಸದಲ್ಲಿನ ಕೊರತೆಯಿಂದಾಗಿ ಜಾಗತೀಕರಣ, ಆಧುನೀಕರಣದ ಪ್ರಭಾವಕ್ಕೆ ಎದೆಗೊಡಲು ಕಷ್ಟಸಾಧ್ಯ!
- ಆಕರ್ಷಕ ಹಾಗೂ ಅಗ್ಗದಿಂದಾಗಿ ಚೀನಾದ ಆಟಿಕೆಗಳೊಂದಿಗೆ ಪೈಪೋಟಿ ನಡೆಸಲಾಗುತ್ತಿಲ್ಲ.
- ಚೀನಾದಂತಹ ಸವಾಲನ್ನು ಎದುರಿಸಲು ಕಲಾಕಾರರು ಹೆಚ್ಚಿನ ಆಸಕ್ತಿ ವಹಿಸುತ್ತಿಲ್ಲ.
- ಗುಣಮಟ್ಟವನ್ನು ಕಾಪಾಡಿಕೊಳ್ಳಲಾಗದೇ ಕೈಯಾರೆ ಕಲೆಯನ್ನು, ಗ್ರಾಹಕರನ್ನು ಕಳೆದುಕೊಳ್ಳುತ್ತಿದ್ದಾರೆ.
- ತಂತ್ರಜ್ಞಾನವನ್ನು ಮೇಲ್ದರ್ಜೆಗೇರಿಸಲು ವಿಳಂಬವಾಗುತ್ತಿರುವುದು.
- ಗ್ರಾಮೀಣ ಸೊಗಡಿನ ಕಿನ್ನಾಳ ಕಲೆಯನ್ನು ವೃದ್ಧಿಸುವ ಆಸಕ್ತಿ ಇಂದಿನ ಪೀಳಿಗೆಗೆ ಇಲ್ಲ!
- ಸಾಲ ಪಡೆದವರು ಮರುಪಾವತಿ ಮಾಡುವವರೂ ವಿರಳ.
- ಎಲ್ಲ ತಯಾರಕರಿಗೂ ಕೌಶಲ ತರಬೇತಿ ನೀಡಬೇಕು.
- ಕರಕುಶಲ ಕಲೆಯಲ್ಲಿ ತಮ್ಮ ಮಕ್ಕಳನ್ನೂ ತೊಡಗಿಸಿದಾಗ ಶಿಕ್ಷಣದಿಂದ ವಂಚಿತರಾಗುತ್ತಾರೆ.
- ಕಾಡು ಕಾಣದಾಗುತ್ತಿರುವಾಗ ಕಟ್ಟಿಗೆ, ಕಚ್ಚಾವಸ್ತು ಸಿಕ್ಕುವುದು ದುರ್ಲಭವಾಗುತ್ತಿರುವುದು.
- ಕಿನ್ನಾಳ ಕಲೆಗೆ ಏಕಸ್ವಾಮ್ಯತೆ ಇಲ್ಲ. ಅನ್ಯರೂ ಈ ಕಸಬಿಗೆ ಕೈ ಹಾಕಬಹುದು.
- ವಿವಿಧೆಡೆ ನಡೆಯುವ ಕರಕುಶಲ ಪ್ರದರ್ಶನದಲ್ಲಿ ಪಾಲ್ಗೊಳ್ಳಲು ಆಸಕ್ತಿ ತೋರಿಸುವವರೂ ಕಡಿಮೆ.
- ರಫ್ತು ಕ್ಷೇತ್ರದಲ್ಲಿ ಬೆಳವಣಿಗೆಗಳ ಮಾಹಿತಿಯ ಕೊರತೆ.
- ಕರ್ನಾಟಕ ಕರಕುಶಲ ಅಭಿವೃದ್ಧಿ ನಿಗಮದ ತರಬೇತಿ ಕೇಂದ್ರ ಹಾಗೂ ಖರೀದಿ ಕೇಂದ್ರ ಮುಚ್ಚಿರುವುದು.

**ಹನಮಸಾಗರ ಕೌದಿ ಹೊಲಿಗಾರಿಕೆ ಕಸಬಿಗೆ ಸಂಚಕಾರ :**

ಭಾರತವು ಪಾರಂಪರಿಕ ಕಸಬುಗಳ ನೆಲೆವೀಡು ಎಂಬುದಕ್ಕೆ ಅನೇಕ ನಿದರ್ಶನಗಳಿವೆ. ಇದರಲ್ಲಿ ಕಲಾತ್ಮಕ ಕೌದಿ ತಯಾರಿಕೆಯೂ ಒಂದು. ಹೌದು! 'ಬಡವರ ರತ್ನಗಂಬಳಿ' ಅಂತಲೇ ಪ್ರಸಿದ್ಧಿ ಪಡೆದಿರುವ ಕೌದಿಯು ಇಂದಿನ ಆಧುನಿಕ ಭರಾಟೆ ಹಾಗೂ ನಿತ್ಯ ವಿನೂತನದತ್ತ ಮನಸ್ಸು ಹರಿಸುತ್ತಿರುವ ಜನತೆಯಿಂದಾಗಿ, ಸೀರೆಯ ದಡಿ ಅಂಚಿನಿಂದಲೇ ಮಿಂಚುತ್ತಿದ್ದ ಕೌದಿಗಳು ಇಂದು ಅವಸಾನದ ಅಂಚಿಗೆ ತಲುಪಿವೆ. ಎಷ್ಟೋ ಕುಟುಂಬಗಳಿಗೆ ಕೆಲಸ ನೀಡಿ ಆಸರೆಯಾಗಿದ್ದ ಕಸಬಿಗೆ ಸಂಚಕಾರ ಬಂದೆರಗಿದೆ.

೧) **ಆಧುನಿಕ ಹಾಸಿಗೆ ಮತ್ತು ಹೊದಿಕೆಗಳ ಆಕ್ರಮಣ** :- ಒಂದು ಕಾಲದಲ್ಲಿ ಪ್ರತಿಯೊಬ್ಬರ ಮನೆಯಲ್ಲೂ ಕಾಣುತ್ತಿದ್ದ ಕಲಾತ್ಮಕ ಹೊಸ ಕೌದಿಗಳು ತಯಾರಾಗುತ್ತಿದ್ದುದು ಹಳೆಯ ಬಟ್ಟೆಗಳಿಂದ! ಇವುಗಳ ಸ್ಥಾನವನ್ನು ಆಧುನಿಕ ಹಾಸಿಗೆ ಮತ್ತು ಹೊದಿಕೆಗಳು ಆಕ್ರಮಿಸಿಕೊಂಡಿವೆ. ಪಾರಂಪರಿಕವಾಗಿ ಕೌದಿ ಕಸಬನ್ನು ನಂಬಿ ಜೀವನದ ಜೋಕಾಲಿಯಲ್ಲಿ ಜೀಕುತ್ತಿದ್ದ ಅನೇಕ ಕುಟುಂಬಗಳು ಸಂಕಷ್ಟದಲ್ಲಿ ಕಾಲ ಕಳೆಯುತ್ತಿರುವುದು ನೋವಿನ ಸಂಗತಿ.

೨) **ಅಲೆಮಾರಿ ಜನಾಂಗದವರ ಪೈಪೋಟಿ** :- ಊರೂರು ತಿರುಗಿ, ಮನೆ ಮನೆಗಳಿಗೆ ತೆರಳಿ ಕೌದಿಯ ಬೇಡಿಕೆಯನ್ನೂ, ಹಳೆಯ ಬಟ್ಟೆಗಳ ಗಂಟನ್ನು ಹೊತ್ತು ತಂದು ಕೌದಿ ತಯಾರಿಸುತ್ತಿದ್ದ ಅನೇಕ ಮೋಚಿ ಜನಾಂಗದ ಮಹಿಳೆಯರ ಬದುಕಿನ ಕುಲ ಕಸಬಿಗೆ ಬೇರೆ ಬೇರೆ ಅಲೆಮಾರಿ ಜನಾಂಗದವರೂ ಪೈಪೋಟಿ ನೀಡುತ್ತಿದ್ದಾರೆ! ನೀಡಲಿ ತಪ್ಪೇನಿಲ್ಲ. ಆದರೆ... ಇವರು ಹಂಚಿಕೊಂಡ ಊರುಗಳಲ್ಲಿನ ಮನೆ ಮನೆಗಳಿಗೇ ತೆರಳಿ ಅವರ ಮನೆಯ ಮುಂದೆಯೇ ಕೌದಿ ತಯಾರಿಸುತ್ತಿದ್ದಾರೆ. ಅದೂ ಕಡಿಮೆ ದರದಲ್ಲಿ! ಏಕೆಂದರೆ ಅವರ ಮನೆಗೇ ತೆರಳಿ ಕೌದಿಯನ್ನು ಹೊಲಿದುಕೊಡುವುದರಿಂದ ಹಳೆಯ ಬಟ್ಟೆಯನ್ನು ತಮ್ಮೂರಿಗೆ ಹೊತ್ತು ತರುವ ಹಾಗೂ ಸಿದ್ಧವಾದ ಕೌದಿಗಳನ್ನು ಹೊತ್ತೊಯ್ದು ಕೊಟ್ಟು ಬರುವ ಸಾರಿಗೆಯ ಹಣ ಉಳಿಯುತ್ತದೆ. ಕೆಲವೊಮ್ಮೆ ಕೌದಿ ಹೊಲಿಸುವ ಕುಟುಂಬದವರೇ ಊಟ ನೀಡುವುದರಿಂದ ಅನುಕೂಲವೂ ಆಗುತ್ತದೆ. ಹೀಗೆ ಮೋಚಿ ಮಹಿಳೆಯರ ಬದುಕಿನ ಪಾರಂಪರಿಕ ಕಸಬು ತೀವ್ರ ಪೈಪೋಟಿ ಎದುರಿಸುತ್ತಿದೆ!

೩) **ಯಂತ್ರ ರಕ್ಕಸನ ದಾಳಿ** :- ಹಿಂದೆ ಯಂತ್ರಗಳಿಲ್ಲದಿರುವಾಗ ಕೌದಿ ಹೊಲಿಸಲು ಇವರಿಗಾಗಿಯೇ ಕಾಯುತ್ತಿದ್ದರು. ಹೀಗಾಗಿ ಕೈತುಂಬ ಕೂಲಿ, ಮೈ ತುಂಬ ಕೆಲಸ ದೊರೆಯುತ್ತಿದ್ದುದರಿಂದ ಹಾಸಿಗೆ ಇದ್ದಷ್ಟೇ ಕಾಲು ಚಾಚು ಎಂಬ ಗಾದೆಯಂತೆ ಇದ್ದುದರಲ್ಲೇ ನೆಮ್ಮದಿ ಬದುಕು ಬದುಕುತ್ತಿದ್ದರು. ಆದರೆ.. ಇದೀಗ ಆಂಧ್ರಪ್ರದೇಶದಿಂದ ಕೆಲವು ಕುಟುಂಬಗಳು ಊರೂರುಗಳಿಗೆ ಅಲೆದು, ಅಲ್ಲಿಯೇ ಕೆಲವು ದಿನಗಳವರೆಗೆ ನೆಲೆ ನಿಂತು ಕೌದಿಗಳನ್ನು ಜೀನ್ಸ್ ಬಟ್ಟೆಯ ಹೊಲಿಗೆ ರಾಟೆಯಲ್ಲಿ ಹೊಲಿದು ಕೊಡತೊಡಗಿದ್ದಾರೆ! ಕೌದಿ ತಯಾರಿಕೆಯ ಪಾರಂಪರಿಕ ಕಸಬನ್ನೇ ನಂಬಿದವರಿಗೆ ಮುಳುವಾಗುತ್ತಿದ್ದಾರೆ.

೪) **ಉದ್ರಿ ಕಾಟ** :- "ಒಂದs ಕಡೀಕ ದೃಷ್ಟಿ ನೆಟ್ಟೂ.. ನೆಟ್ಟೂ.. ಕಣ್ಣು ಮಂಜ್(ಮಂದ) ಆಗ್ಯಾವ್ರಿ, ಒಂದs ಕಡೀಕ ಕುಂತೂ.. ಕುಂತೂ ನಡ ಬಿದ್ದೋಗ್ಯಾವ್ರಿ. ನೆತ್ತಿ ಮ್ಯಾಲ ಕೌದಿ ಗಂಟು ಹೊತ್ತೂ.. ಹೊತ್ತೂ.. ಕುತ್ತಿಗಿ ಬ್ಯಾನಿ ಆದ್ರೂ... ಕೌದಿಗಳ ಗಂಟು ಕರಗೀದ್ರ ನಮ್ಮ ಕೈಯ್ಯಾಗ ಎಂಟು ರೂಪಾಯಿ ಗಂಟು ಉಳಿಯೋದು ಕಷ್ಟ ಆಗೈತ್ರಿ, ಯಾಕಂದ್ರs ರೋಖಡಿಗಿಂತ ಉದ್ರಿ ಹೇಳೋರs ಭಾಳ ಮಂದಿ ಅದಾರ್ರಿ. ಇನ್ನs ಉದ್ರಿ ಕೊಡೂದಿಲ್ಲ ಅಂದ್ರ ಬ್ಯಾಡ ನಡೀ ಅಂತಾರ್ರಿ! ಯಾಕಂದ್ರ.. ಅವರ ಲ್ಯಾವಿ ಗಂಟು(ಹಳೆ ಬಟ್ಟೆಗಳ ಗಂಟು) ಬಿಟ್ರ... ಅವ್ರ ಗಂಟೇನು ಹೊಕ್ಕಾತೇಳ್ರಿ?!" ಗಂಗಮ್ಮ ಹುಲ್ಲೂರ ಉದ್ರಿಗೆ ಬೇಸತ್ತು ನುಡಿಯುತ್ತಾಳೆ.

೫) **ದುಬಾರಿ ಸಾರಿಗೆ ವೆಚ್ಚ** :- ಕೌದಿ ಹೊಲಿಯುವವರ ಶ್ರಮವನ್ನು ಸಾರಿಗೆಗೆ ವ್ಯಯಿಸಬೇಕಾಗುತ್ತದೆ.

೬) **ತುಟ್ಟಿಯಾದ ದಾರ** :- ಶ್ರಮವೇ ಅತ್ಯಧಿಕ ಬಂಡವಾಳವಾಗಿರುವ ಕೌದಿ ಹೊಲಿಗೆಗೆ ಪ್ರಮುಖವಾಗಿ ಬೇಕಾಗಿರುವುದು ದಾರ. ಇದನ್ನು ದೂರದ ಲಾಥೂರದಿಂದ ದಾರವನ್ನು ತರಿಸಿಕೊಂಡು ಮಾರುವುದರಿಂದ ತುಸು ತುಟ್ಟಿಯೇ ಅನಿಸುತ್ತದೆ.

೭) **ಆಧುನಿಕ ಕೌದಿಗಳೊಂದಿಗೆ ಸೆಣಸಾಟ** :- ಇತ್ತೀಚಿಗೆ ಕೆಲವು ಸಂಘಟನೆಗಳು ಆಧುನಿಕ ಶೈಲಿಯಲ್ಲಿ ಹೊಸ ಹತ್ತಿ ಬಟ್ಟೆಗಳಿಂದ ಬಣ್ಣ ಬಣ್ಣದ ವಿಶೇಷ ವಿನ್ಯಾಸದ ಕೌದಿಗಳು ಮಾರುಕಟ್ಟೆಗೆ ಲಗ್ಗೆ ಇಟ್ಟಿದ್ದು, ಇವುಗಳೊಂದಿಗೆ ಸೆಣಸಾಡುವುದು ಕುಷ್ಟಗಿ ಪರಿಸರದ ಕೌದಿಗಳಿಂದ ಅಸಾಧ್ಯದ ಮಾತು.

೮) **ಕೌದಿಗಳ ಮಹತ್ವದ ತಿಳುವಳಿಕೆಯ ಕೊರತೆ** :- ಜನಪದರ ಬಳಕೆಯ ವಸ್ತುಗಳು ಸಾಮಾನ್ಯವಾಗಿ ವೈಜ್ಞಾನಿಕವಾಗಿ ಕಾರಣಗಳಿಂದಲೂ ಮಹತ್ವವನ್ನು ಹೊಂದಿರುತ್ತವೆ. ಈ ಮಹತ್ವವನ್ನು ವೈಜ್ಞಾನಿಕ ದೃಷ್ಟಿಕೋನದಿಂದ ತಿಳಿಸುವ ಪ್ರಯತ್ನ ನಡೆಯದಿರುವುದೂ ಕೌದಿಗೆ ಸಂಚಕಾರ ಬಂದಿರುವುದಕ್ಕೆ ಕಾರಣವಾಗಿದೆ.

೯) **ಮಾರುಕಟ್ಟೆ ಇಲ್ಲದಿರುವುದು** :- ಆಧುನಿಕ ಹಾಸಿಗೆ ಹಾಗು ಹೊದಿಕೆಗಳಿಗೆ ಇರುವಂತೆ ಕೌದಿಗಳಿಗೂ ಸೂಕ್ತ ಮಾರುಕಟ್ಟೆ ವ್ಯವಸ್ಥೆಯಿಲ್ಲದಿರುವುದು.

೧೦) **ಪ್ರಚಾರದ ಕೊರತೆ** : ಇತ್ತೀಚಿಗೆ ಜಾಹೀರಾತುಗಳಿದ್ದ ವಸ್ತುಗಳು ಮಾತ್ರ ಶ್ರೇಷ್ಠ ಎಂಬ ಭಾವನೆ ಈ ಕೊಳ್ಳುಬಾಕ ಸಂಸ್ಕೃತಿಗೆ ಇದೆ. ಹೀಗಾಗಿ ಕೌದಿಗಳಿಗೂ ಮಾಧ್ಯಮಗಳಲ್ಲಿ, ಮಾರಾಟ ಮಳಿಗೆಗಳಲ್ಲಿ, ಪ್ರದರ್ಶನಗಳಲ್ಲಿ ಪ್ರಚಾರ ಮಾಡದಿರುವುದೂ ಕೌದಿ ಅಳಿವಿನ ಅಂಚಿಗೆ ಬಂದಿರುವುದಕ್ಕೆ ಕಾರಣವೆನ್ನಬಹುದು.

೧೧) **ರಾಟೆಗಳ ಭರಾಟೆ :**

ಇತ್ತೀಚಿಗೆ ಕೌದಿ ಹೊಲಿಯವ ಕಸಬಿಗೆ ಯಂತ್ರ ರಾಕ್ಷಸ ಹೊಕ್ಕಾಗಿದೆ. ಬಟ್ಟೆಗಳನ್ನು ಹೊಲಿಯುವ ಅದರಲ್ಲೂ ಜೀನ್ಸ್ ಬಟ್ಟೆಗಳನ್ನು ಹೊಲಿಯಲು ಬಳಸುವ ರಾಟೆಗಳನ್ನು ಕೌದಿ ಹೊಲಿಯಲು ಬಳಸುತ್ತಿದ್ದಾರೆ. ಆಂಧ್ರಪ್ರದೇಶದ ಕೆಲವು ಕುಟುಂಬಗಳು ಊರೂರುಗಳಿಗೆ ತಾತ್ಕಾಲಿಕವಾಗಿ ವಲಸೆ ಹೋಗಿ, ಸುತ್ತಲಿನ ಜನರಿಂದ ಹಳೆಯ ಬಟ್ಟೆಗಳನ್ನು ತಂದು ರಾಟೆಗಳಿಂದ ಕೌದಿ ಹೊಲಿದು ಕೊಡುವ ವೃತ್ತಿಗಿಳಿದಿದ್ದಾರೆ. ಕೈಯಿಂದ ಹೊಲಿಯುವವರು ಒಂದು ಮೊಳಕ್ಕೆ ೫೦ ರಿಂದ ೬೦ ರೂಪಾಯಿ ತೆಗೆದುಕೊಂಡರೆ ಇವರು ಕೇವಲ ೩೫ ರಿಂದ ೪೦ ರೂಪಾಯಿಗೆ ಒಂದು ಮೊಳ ಕೌದಿಯನ್ನು ಹೊಲಿದು ಕೊಡುತ್ತಿದ್ದಾರೆ. ಹೀಗಾಗಿ ಜನರು ಕಡಿಮೆ ದರದಲ್ಲಿ, ರಾಟೆಯಲ್ಲಿ ಹೊಲಿದು ಕೊಡುವ ಕೌದಿಗಳಿಗೆ ಮರುಳಾಗುತ್ತಿದ್ದಾರೆ!

ಆಂಧ್ರದ ವಿಶಾಖಪಟ್ಟಣ ಜಿಲ್ಲೆಯ ರೇಗಡಿಯ ಚಿನ್ನಸಿರ್ಲಾಂ ಗ್ರಾಮದಿಂದ ರಾಟೆಯಿಂದ ಕೌದಿ ಹೊಲಿಯುವ ಮೂರು ಕುಟುಂಬಗಳು ಕುಷ್ಟಗಿ ಪಟ್ಟಣಕ್ಕೂ ಲಗ್ಗೆಯಿಟ್ಟಿವೆ. ಸುಮಾರು ೧೩ ಜನರಿರುವ ಈ ಕುಟುಂಬಗಳಿಂದ ಮೂರು ರಾಟೆಗಳು, ಆರು ಬೈಕುಗಳೂ ಇವೆ. ಕುಷ್ಟಗಿಯ ಅಕ್ಕ ಪಕ್ಕದ ಗ್ರಾಮಗಳಿಗೆ ಬೈಕಿನಲ್ಲಿ ತೆರಳಿ ಹಳೆಯ

ಬಟ್ಟೆಗಳನ್ನು, ಬೇಡಿಕೆಗಳನ್ನು ತರುತ್ತಾರೆ. ಎರಡ್ಮೂರು ದಿನಗಳಲ್ಲಿ ಪುನಃ ಅವರು ಹೇಳಿದ ಅಳತೆಗೆ ತಕ್ಕಂತೆ ಕೌದಿಗಳನ್ನು ಹೊಲಿದುಕೊಂಡು ತಲುಪಿಸುತ್ತಾರೆ.

"ನಾವು ದುಡಿದು ಜೀವನ ಸಾಗಿಸಲೆಂದು ಕರ್ನಾಟಕಕ್ಕೆ ಬಂದೆವು. ನಮ್ಮ ಕುಟುಂಬದ ಹೆಣ್ಮಕ್ಕಳಿಗೆ ಬಟ್ಟೆ ಹೊಲಿಯುವುದು ಗೊತ್ತಿತ್ತು. ಆದರೆ.. ಅಪರಿಚಿತರಾದ ನಮಗೆ ಯಾರೂ ಹೊಸ ಬಟ್ಟೆಗಳನ್ನು ಹೊಲಿಯಲು ಕೊಡಲಿಲ್ಲ. ಅಲ್ಲದೇ ಇಲ್ಲಿಯೂ ಮನೆಗೊಂದು ರಾಟಿಗಳಿವೆ! ಹೊಲದಲ್ಲಿ ಎಂದೂ ಕೆಲಸ ಮಾಡದ ನಮಗೆ ದಿಕ್ಕು ತೋಚದಾಗಿತ್ತು. ಇಲ್ಲಿ ಕೌದಿ ಹೊಲಿಯುವವರನ್ನು ನೋಡಿದ ನಮಗೆ ನಾವೂ ರಾಟೆಗಳಿಂದ ಕೌದಿಗಳನ್ನು ಹೊಲಿದು ಕೊಡಬಹುದೆಂದೆನಿಸಿತು. ಜನರು ಹಳೆಯ ಬಟ್ಟೆಗಳನ್ನು ಹೊಸಬರಿಗೆ ಕೊಡಲು ಹಿಂಜರಿಯಲಾರರು ಎಂಬ ಆಲೋಚನೆ ಮೂಡಿದ್ದೇ ತಡ, ಬಳ್ಳಾರಿಗೆ ಹೋಗಿ ೨೦೦೦ ರೂಪಾಯಿಗೆ ಒಂದರಂತೆ ಜೀನ್ಸ್ ಬಟ್ಟೆ ಹೊಲಿಯುವ ೩ ರಾಟೆಗಳನ್ನು ಕೊಂಡು ತಂದೆವು. ಅಲ್ಲಿಯೇ ೧೦೦ ರೂಪಾಯಿಗೆ ಒಂದು ಕಿಲೋಗ್ರಾಂ ದಾರವನ್ನು ಕೊಂಡು ತಂದೆವು. ಊರೂರು ತಿರುಗಿ ಹಳೆಯ ಬಟ್ಟೆ ತಂದು ಕೌದಿ ಹೊಲಿದು ಕೊಡತೊಡಗಿದೆವು. ಇಲ್ಲಿಯ ಜನ ನಮ್ಮ ಮೇಲೆ ವಿಶ್ವಾಸವಿಟ್ಟು ಆರ್ಡರ್ ಕೊಡುತ್ತಿದ್ದಾರೆ. ಸಧ್ಯಕ್ಕೆ ನಮ್ಮ ಬದುಕಿಗೊಂದು ನೆಮ್ಮದಿಯ ಉದ್ಯೋಗ ಸಿಕ್ಕಿದೆ." ಎಂದು ತೃಪ್ತಿಯಿಂದ ಹೇಳಿಕೊಳ್ಳುತ್ತಾರೆ ಜಗನ್ನಾಥಂ.

"ಇಲ್ಲಿ ಕೌದಿ ಹೊಲಿಯುವ ಕುಟುಂಬಗಳಿಗೆ ನಿಮ್ಮಿಂದ ತೊಂದರೆಯಾಗುತ್ತಿದೆ. ಕೌದಿ ಹೊಲಿಯುವುದನ್ನೇ ಪರಂಪರೆಯಾಗಿಸಿಕೊಂಡು ಅದನ್ನೇ ನಂಬಿದ ಕುಟುಂಬಗಳಿಗೆ ನೀವು ಅನ್ಯಾಯ ಮಾಡುತ್ತಿಲ್ಲವೇ?" ಎಂದು ಪ್ರಶ್ನಿಸಿದರೆ...

"ನಾವೂ ಇಲ್ಲಿಗೆ ಹೊಟ್ಟೆ ಹೊರೆಯಲು ಬಂದಿದೇವೆ, ಯಾರ ಹೊಟ್ಟೆ ಉರಿಸಲು ಅಲ್ಲ. ಕೆಲವು ಜನರಿಗೆ ಉತ್ತಮ ಗುಣಮಟ್ಟದ ಕೌದಿಗಳೇ ಬೇಕು. ತಾ(ಬಾ)ಳಿಕೆ ಬರಬೇಕು. ಮೆತ್ತಗಿರಬೇಕು. ಹೀಗೆಲ್ಲ ವಿಚಾರ ಇರುವವರು ನಮಗೆ ಕೌದಿ ಹೊಲಿಯಲು ಕೊಡುವುದಿಲ್ಲ. ನಮ್ಮ ಕೌದಿಗಳು ಬಿರುಸಾಗುತ್ತವೆ, ಚಿತ್ರವಿನ್ಯಾಸಗಳು ಅಷ್ಟಾಗಿ ಇರುವುದಿಲ್ಲ. ಹೀಗಾಗಿ ಅವರಿಗೆ ಕೆಲವು ಖಾಯಂ ಗಿರಾಕಿಗಳು ಇದ್ದಾರೆ. ನಾವು ಖಾಯಂ ಆಗಿ ಇಲ್ಲಿರಲ್ಲ. ಗುಳೇ ಬಂದವರು. ಒಂದೆರಡು ತಿಂಗಳವರೆಗೆ ಬಾಡಿಗೆ ಮನೆಯಲ್ಲಿರುತ್ತೇವೆ. ಅಲೆಮಾರಿಗಳಂತೆ ನಾವೂ ಮುಂದಿನ ಊರಿಗೆ ಹೋಗ್ತೀವಿ. ಯಾರಿಗೂ ತೊಂದರೆ

ಕೊಡುವ ಉದ್ದೇಶ ನಮಗಿಲ್ಲ. ಹೊಟ್ಟೆ ಪಾಡಿಗಾಗಿ ದುಡಿದು ತಿನ್ನಲು ಬಂದಿದ್ದೇವೆ." ಹೀಗೆಂದು ನಿಷ್ಕಲ್ಮಶ ಮನಸ್ಸಿನಿಂದ ಪೋಲನಾಯ್ಡು ಅಭಿಪ್ರಾಯ ಪಡುತ್ತಾನೆ.

**ಸಂಕಷ್ಟದಲ್ಲಿ ಕೊಪ್ಪಳ ಮಂಡಾಳು ತಯಾರಿಕೆ ಉದ್ದಿಮೆ :**

"೧೧೦೦ ರೂಪಾಯಿ ಕೊಟ್ಟು ಒಂದು ಚೀಲ(೭೫ ಕೆ.ಜಿ.) ನೆಲ್ಲು ಕೊಂಡು ಇಲ್ಲಿಗೆ ತಂದು ಹಾಕಿಕೊಳ್ಳಾದ್ರಾಗs ನೂರಿನ್ನೂರು ರೂಪಾಯಿ ಖರ್ಚಾಗ್ತಾವ. ೨೦೦ ರೂಪಾಯಿ ಕೊಟ್ಟು ಒಂದು ಚೀಲ ನೆಲ್ಲುಹೊಟ್ಟು ಕೊಂಡ್ಕೋಬೇಕು, ೧೦೦ ರೂಪಾಯಿ ಒಬ್ಬ ಕೂಲಿಯವರಿಗೆ ಕೊಡಬೇಕು, ೧೦೦ ರೂಪಾಯಿ ರೋಸ್ಟರ್‌ಗೆ, ೧೦೦ ರೂಪಾಯಿ ಗಿರಿಣಿಗೆ, ೩೦ ಚೀಲ ಮಾರ್ಕೆಟ್‌ಗೆ ಸಾಗಿಸಲು ಎತ್ತಿನ ಗಾಡಿಯವನಿಗೆ ೮೦ ರೂಪಾಯಿ, ೧೦೦ ರೂಪಾಯಿಗೆ ಒಂದು ಹಳೆ ಟೈರು, ಒಮಧು ಚೀಲಕ್ಕ ೨ ರೂಪಾಯಿ ಕಮೀಷನ್ನು, ಅದೂ ಇದೂ ಅಂತಾ ಎಲ್ಲಾ ಖರ್ಚು ತೆಗೆದ್ರ ನಮ್ಗೇನ್ ಉಳಿತೈತಿ ಹೇಳ್ರಿ?" ಎನ್ನುತ್ತಾರೆ ಖಾಸೀಂ ಸಾಬ ರಾಜೊಳ್ಳಿ.

"ನಮ್ಮ ಹೊಟ್ಟೆ ಪಾಡಿಗೆ ನಾವ್ ಮಂಡಕ್ಕಿ ಬಟ್ಟಿ ಮಾಡಿಕೊಂಡು ತಿಂತೀವಿ ಅಂದ್ರ.... ಧೂಳ ಬರ್ತಾತ ಅಂತಾರ. ಕಂಪ್ಲೇಂಟೂ ಕೊಡ್ತಾರ. ನಮ್ಮಂಥ ದುಡ್ಕಂಡು ತಿನ್ನಾವ್ರು ಎಲ್ಲಿಗೆ ಹೋಗಬೇಕ್ರಿ?" ಎನ್ನುತ್ತಾರೆ ನೊಂದ ಮಹಿಳೆ ರಹಮತ್‌ಬಿ.

'ಬಾಣಲಿಗೆ ಮಂಡಾಳು ; ಬೆಂಕಿ ಅವರ ಬಾಳು...!' ಎಂಬಂತಾಗಿದೆ ಕೊಪ್ಪಳ ಮಂಡಾಳು ತಯಾರಕರ ಸ್ಥಿ(ಗ)ತಿ. ಇದಕ್ಕೆ ಕಾರಣಗಳು ಹೀಗಿವೆ –

- ಆಧುನಿಕ ಜೀವನಕ್ರಮ,
- ಆಧುನಿಕ ಫಾಸ್ಟ್ ಫುಡ್‌ಗಳ ಲಗ್ಗೆ
- ಗಗನಕ್ಕೇರಿದ ಭತ್ತದ ಧಾರಣೆ,
- ಕೂಲಿಯಾಳುಗ ಕೊರತೆ
- ಕೂಲಿ ದರ ಹೆಚ್ಚಳ
- ಲಾಭಾಂಶ ಕಡಿಮೆಯಾಗಿರುವುದು.
- ಪಾರಂಪರಿಕ ಕಸಬು ಮಂಡಾಳು ತಯಾರಿಕೆಗೆ ಮಧ್ಯಮ ಮತ್ತು ಬೃಹತ್ ಕೈಗಾರಿಕೆಗಳ ಪೈಪೋಟಿ.

- ಕೊಪ್ಪಳದ ಮಂಡಾಳು ತಯಾರಿಕಗಾಗಿಯೇ ಮೀಸಲಾದ ಕಾಯಂ ನೆಲೆ ಇಲ್ಲದಿರುವುದು.
- ಧೂಳು ಮತ್ತು ಹೊಗೆಯಿಂದ ವಾಯು ಮಾಲಿನ್ಯವೆಂದು ಬೇರೆ ಜನರು ಆರೋಪಿಸುತ್ತಿರುವುದು.
- ಪರಿಸರಸ್ನೇಹಿ ವ್ಯವಸ್ಥೆಯಿಲ್ಲದಿರುವುದು.
- ಈ ಪ್ರದೇಶಕ್ಕೆ ರಸ್ತೆ, ಕುಡಿಯುವ ನೀರು, ಚರಂಡಿ ವ್ಯವಸ್ಥೆ ಸೇರಿದಂತೆ ಮೂಲ ಸೌಲಭ್ಯ ಅಭಿವೃದ್ಧಿಪಡಿಸುವುದು.
- ಸೂಕ್ತ ಮಾರುಕಟ್ಟೆ ಇಲ್ಲದಿರುವುದು.
- ಸೂಕ್ತ ಪ್ರಚಾರದ ಕೊರತೆ.
- ರಾಸಾಯನಿಕ ಸಿಂಪಡಿಸಿ ಬೆಳ್ಳಗೆಮಾಡದೇ ಇರುವುದು.
- ಮಕ್ಕಳು ಶಿಕ್ಷಣದಿಂದ ವಂಚಿತರಾಗಿ ಪಾಲಕರೊಂದಿಗೆ ಸಹಾಯಕ್ಕೆ ನಿಲ್ಲುವುದು.
- ಸ್ಥಳ ಬಾಡಿಗೆಯನ್ನು ಕಟ್ಟಲಾಗದ ಸ್ಥಿತಿ.

ಹೀಗೆ ಇನ್ನೂ ಮುಂತಾದ ಕಾರಣಗಳಿಂದಾಗಿ ಮಂಡಾಳು ಬಟ್ಟಿಗಳು ಅಥವಾ ಕೈಬಟ್ಟಿಗಳು ಕಡಿಮೆಯಾಗುತ್ತಿವೆ.

"೧೯೯೮-೯೯ರಲ್ಲಿ ನಾನು ಕೊಪ್ಪಳದ ಕೌನ್ಸಿಲರ್ ಆಗಿದ್ದಾಗ ಕೇಂದ್ರ ಸರ್ಕಾರದ ಯೋಜನೆಯೊಂದರಿಂದ ಮಂಡಾಳಿಗಾಗಿಯೇ ಕೈಗಾರಿಕಾ ವಲಯವನ್ನು ಸ್ಥಾಪಿಸಲು ಉದ್ದೇಶಿಸಿದ್ದೆ, ಅದಕ್ಕಾಗಿ ೨೦% ರಷ್ಟು ಹಣವನ್ನು ನಾವು ವ್ಯಯಿಸಿದರೆ ಉಳಿದ ೮೦% ರಷ್ಟು ಹಣವನ್ನು ಸರ್ಕಾರವೇ ಭರಿಸುತ್ತಿತ್ತು! ಇದಕ್ಕಾಗಿ ೨೨ ಎಕರೆ ಭೂಮಿಯನ್ನೂ ಖರೀದಿಸಲು ಉದ್ದೇಶಿಸಿದ್ದೆ. ಆದರೆ... ನಮ್ಮವರು ಸಹಕರಿಸದ ಕಾರಣ ಅದು ಅಲ್ಲಿಗೇ ನಿಂತಿತು." ಎಂದು ನೊಂದು ನುಡಿಯುತ್ತಾರೆ ಮಾಜಿ ಕೌನ್ಸಿಲರ್ ಶಹಾಬುದ್ದೀನ್.

### ೪.೨ ಮಾರಾಟ ಪ್ರಕ್ರಿಯೆಯ ಸಮಸ್ಯೆಗೆ ಪರಿಹಾರೋಪಾಯಗಳು

ಪಾರಂಪರಿಕ ಕಸಬುಗಳು ಇನ್ನೂ ಸಂಪ್ರದಾಯದೊಂದಿಗೆ ಬೆರೆತಿವೆ; ಆರ್ಥಿಕ ಸ್ಥಿತಿ ಉತ್ತಮಪಡಿಸುತ್ತವೆ; ಪರಿಣಿತಿಯನ್ನು ಪ್ರದರ್ಶಿಸುತ್ತವೆ ಎಂಬ ನಿಲುವಿಗೆ ಬಂದಾಗ ಮಾತ್ರ ಆಧುನಿಕರಣ ಪ್ರಕ್ರಿಯೆಯಿಂದ ಕುಪ್ಪಗಿ ಪರಿಸರದ ಪಾರಂಪರಿಕ ಕಸಬುಗಳು ಪುನಃಶ್ಚೇತನಗೊಳ್ಳಲು ಸಾಧ್ಯ. ಈ ಕಸಬುದಾರರು ಆರ್ಥಿಕ, ತಾಂತ್ರಿಕ, ಸಾಮಾಜಿಕ ಮತ್ತು

ಸಂಘಟನಾತ್ಮಕ ಸಮಸ್ಯೆಗಳನ್ನು ಎದುರಿಸುತ್ತಿವೆ. ಪರಿಹಾರಗಳಿಲ್ಲದ ಸಮಸ್ಯೆಗಳೇ ಇರುವುದು ತೀರಾ ವಿರಳ. ಹಾಗೆಯೇ ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳಾದ ಇಳಕಲ್ ಸೀರೆ, ಗುಳೇದಗುಡ್ಡದ ಖಣ, ಕಮತಗಿ ಪಟಗ ಮತ್ತು ರುಮಾಲು

ಅಮೀನಗಡದ ಕರದಂಟು, ರಾಜೂರ ಸುಣ್ಣ, ಭಾಗ್ಯನಗರದ ಕೇಶೋದ್ಯಮ, ಕಿನ್ನಾಳ ಕಿಟ್ಟದ ಗೊಂಬೆಗಳು, ಹನಮಸಾಗರ ಕೌದಿ, ಕೊಪ್ಪಳ ಮಂಡಾಳು ಉದ್ಯಮಗಳಲ್ಲಿರುವ ಎಲ್ಲಾ ಸಮಸ್ಯೆಗಳಿಗೂ ಪರಿಹಾರಗಳಿವೆ. ಹಾಗೆಯೇ ಸಾಮಾನ್ಯ ಪಾರಂಪರಿಕ ಕಸಬುಗಳಾದ ಕುಂಬಾರಿಕೆ, ಕಮ್ಮಾರಿಕೆ, ಪತ್ತಾರಿಕೆ, ಬಡಗಿತನ, ಕೊರವರು(ಭಜಂತ್ರಿ), ಮೇದಾರಿಕೆ, ಚಿತ್ರಗಾರರು, ಹೂಗಾರರು, ಅಗಸರು, ಕ್ಷೌರಿಕರು, ಬಯಲು ಕಮ್ಮಾರರು, ಕಲ್ಲುಕುಟಿಗರು, ಚಮ್ಮಾರಿಕೆ, ಶಿಲ್ಪಗಾರಿಕೆ, ನಾಲಗಾರಿಕೆ ಮುಂತಾದ ಕಸಬುದಾರರ ಸಮುದಾಯಗಳ ಎಲ್ಲಾ ಸಮಸ್ಯೆಗಳಿಗೂ ಪರಿಹಾರಗಳಿವೆ.

**ಪರಿಹಾರೋಪಾಯಗಳು :**

ಇಲ್ಲಿ ಸಾಮಾನ್ಯವಾದ ಹಾಗೂ ಎಲ್ಲ ಪಾರಂಪರಿಕ ಕಸಬುಗಳಿಗೂ ಅನ್ವಯಿಸಲ್ಪಡುವ ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕಲು ಪ್ರಯತ್ನಿಸಲಾಗಿದೆ.

ಪಾರಂಪರಿಕ ಕಸಬುಗಳ ಪೋಷಣಾ ಕೇಂದ್ರಗಳೆಂದರೆ ಗ್ರಾಮಗಳು; ಇವರ ಮಹಾಪೋಷಕ ರೈತ. ರೈತರು ಹಾಗೂ ಕಸಬುದಾರರ ಕಾರ್ಯಕ್ಷೇತ್ರಗಳಾದ ಒಂದೊಂದು ಹಳ್ಳಿಯೂ ಒಂದೊಂದು ಗಣರಾಜ್ಯದಂತೆ ಕಾರ್ಯ ನಿರ್ವಹಿಸುತ್ತಿದ್ದವು. ಈ ಗಣರಾಜ್ಯದಲ್ಲಿ ಪಾರಂಪರಿಕ ಕಸಬುಗಳು ಪುನರ್ಜನ್ಮ ತಾಳಬೇಕು; ಪುನರುಜ್ಜೀವನಗೊಳ್ಳಬೇಕು ಎಂಬುದು ನಮ್ಮ ಬಹುದೊಡ್ಡ ಒತ್ತಾಸೆ. ನಿರುದ್ಯೋಗ ನಿವಾರಣೆಯ ಮೂಲಕ ಬಡತನವನ್ನೂ ನಿರ್ಮೂಲನೆಗೊಳಿಸುವ ತಾಕತ್ತು ನಮ್ಮ ದೇಶದ ಪಾರಂಪರಿಕ ಕಸಬುಗಳಿಗಿದೆ. ಇವುಗಳು ಒಂದು ಇಡೀ ಕುಟುಂಬದ ವೃತ್ತಿಗಳಾಗಿದ್ದು, ಮಕ್ಕಳು, ಮಹಿಳೆಯರು, ಪುರುಷರುಗಳೆನ್ನದೇ ಎಲ್ಲ ವಯೋಮಾನದವರಿಗೂ ಉದ್ಯೋಗವನ್ನು ಕಲ್ಪಿಸುವ 'ಗ್ರಾಮ ಭಾರತದ ಕಲ್ಪವೃಕ್ಷ' ಎಂದರೂ ತಪ್ಪಗಲಾರದು. ಇಲ್ಲಿಯ ಯಾವುದೇ ವಸ್ತು ಪರಿಕರಗಳು ನೆಲಮೂಲದ ತಂತ್ರಜ್ಞತೆಯಿಂದ ಸಿದ್ಧವಾಗುವುದರಿಂದ ಮುರಿಯುವುದು, ಒಡೆಯುವುದು, ಹಾಳಾಗುವುದು ತೀರಾ ಸಹಜ ಕ್ರಿಯೆ. ಇದರಿಂದಾಗಿ ವಸ್ತುವಿನ ಪುನರ್ ಸೃಷ್ಟಿ ಹಾಗೂ ಪುನರ್ ಬೇಡಿಕೆ ಉಂಟಾಗುವುದರಿಂದ ಕಸಬುದಾರರಿಗೆ ನಿರಂತರ ಉದ್ಯೋಗ ದೊರೆಯುತ್ತದೆ. ಕುಂಬಾರರ ಮಡಿಕೆ-ಕುಡಿಕೆಗಳು ಮಣ್ಣಿನಿಂದಲೇ ತಯಾರಾಗುವುದರಿಂದ ಮೂಲವಸ್ತು

ಬರಿದಾಗುವುದಿಲ್ಲ. ಹಾಗೆಯೇ ಬಡಿಗನ ಮರ-ಮುಟ್ಟುಗಳು; ನೇಕಾರನ ಹತ್ತಿಯ ನೂಲು ಅಥವಾ ರೇಷ್ಮೆಯ ನೂಲು; ಕೌದಿ ಹೊಲಿಯುವವರ ಹಳೆಯ ಬಟ್ಟೆಗಳು ಹೀಗೆ. ಸಾಂಪ್ರದಾಯಿಕ ಕರಕುಶಲ ವಸ್ತುಗಳು ಪ್ರಕೃತಿ ಜನ್ಮ ಆಹಾರದ ತಾಜಾತನಗಳನ್ನು ಮೂಲ ಸ್ಥಿತಿಯಲ್ಲಿ ಉಳಿಸಿಕೊಳ್ಳಲು ನೆರವಾಗುತ್ತವೆ. ಹಾಗಾಗಿ ಪಾರಂಪರಿಕ ಕಸಬುದಾರರ ಕೈಚಳಕದಿಂದ ಉತ್ಪನ್ನಗೊಂಡ ವಸ್ತುಗಳಲ್ಲಿ ಔಷಧೀಯ ಗುಣಗಳು ಹಾಗೂ ಪೌಷ್ಠಿಕಾಂಶಗಳೂ ಇರುವುದರಿಂದ ಮನುಷ್ಯನ ಆರೋಗ್ಯವನ್ನು ಕಾಪಾಡುತ್ತವೆ. ಇದಕ್ಕೆ ತಾಜಾ ಉದಾಹರಣೆ ಎಂದರೆ ನಮ್ಮ ಪಾರಂಪರಿಕ ಕಸಬುಗಳಲ್ಲಿ ಒಂದಾದ ಅಮೀನಗಡದ ಕರದಂಟು. ಒಟ್ಟಿನಲ್ಲಿ ನಮ್ಮ ಪೂರ್ವಿಕರು ತಮ್ಮ ದೈನಂದಿನ ಬದುಕಿನಲ್ಲಿ ಬಳಸುತ್ತಿದ್ದ ಪರಿಕರಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲು ಯಾವುದೇ ಅಡ್ಡಪರಿಣಾಮಗಳಾಗಲೀ, ದುಷ್ಪರಿಣಾಮಗಳಾಗಲೀ ಇಲ್ಲ.

"ರಾಜಕೀಯ ಕ್ಷೇತ್ರದಲ್ಲಿ ಸ್ವದೇಶಿ ಸಂಸ್ಥೆಗಳ ಉಪಯೋಗವನ್ನೇ ಮಾಡಿಕೊಳ್ಳಬೇಕು. ಅವುಗಳಲ್ಲಿ ದೋಷವಿದ್ದರೆ ಅವನ್ನು ಸರಿಪಡಿಸಿ ಸೇವೆ ಸಲ್ಲಿಸಬೇಕು. ಆರ್ಥಿಕ ಕ್ಷೇತ್ರದಲ್ಲಿ ನನ್ನ ಹತ್ತಿರದ ನೆರೆಹೊರೆಯವರು ಮಾಡಿದ ವಸ್ತುಗಳನ್ನೇ ಬಳಸಬೇಕು. ಆ ಕೈಗಾರಿಕೆಗಳಲ್ಲಿ ಇರುವ ದೋಷಗಳನ್ನು ತಿದ್ದಿ ಅವನ್ನು ಸಾಕಾರಗೊಳಿಸಬೇಕು. ಸಂಪೂರ್ಣಗೊಳಿಸಬೇಕು. ಅಂತಹ ಸ್ವದೇಶಿಯನ್ನು ಕೃತಿಗೆ ಇಳಿಸಿದ್ರೆ ಸತ್ಯಯುಗವೇ ಮೂಡೀತು."[೧೦] ಎಂದು ಎಂದೋ ಗಾಂಧೀಜಿಯವರು ಪಾರಂಪರಿಕ ಕಸಬುಗಳ ಸಮಸ್ಯೆಗಳಿಗೆ ಪರಿಹಾರ ನೀಡಿದ್ದಾರೆ. ಇದು ಅವರ ಭವಿಷ್ಯ ದೃಷ್ಟಿಗೂ ನಿದರ್ಶನವೂ ಹೌದು.

"ಕುಶಲ ಕೈಕೆಲಸ, ಕಲೆ, ಆರೋಗ್ಯ ಮತ್ತು ಶಿಕ್ಷಣ ಎಲ್ಲವನ್ನೂ ಒಂದೇ ಯೋಜನೆಯಲ್ಲಿ ಮೇಳೈಸಬೇಕು. ನಯೀ ತಾಲೀಂ ಈ ನಾಲ್ವರ ಸುಂದರ ಸಂಗಮ. ಗರ್ಭಾವಸ್ಥೆಯಿಂದ ಹಿಡಿದು ಮರಣ ಕಾಲದವರೆಗೂ ವ್ಯಕ್ತಿಯ ಪೂರಾ ಶಿಕ್ಷಣವೇ ಅದರಲ್ಲಿದೆ. ಕೈಕೆಲಸ ಹಾಗೂ ಕಸಬು ಶಿಕ್ಷಣದಿಂದ ಬೇರೆ ಬೇರೆ ಎಂದು ನಾನು ಭಾವಿಸುವುದಿಲ್ಲ. ಕೈಕೆಲಸವೇ ಶಿಕ್ಷಣದ ಮಾಧ್ಯಮ ಎನ್ನುತ್ತೇನೆ. ನಮ್ಮ ಮೂಲ ಶಿಕ್ಷಣ ಪದ್ಧತಿ ಮನಸ್ಸು, ದೇಹ ಹಾಗೂ ಆತ್ಮ ವಿಕಾಸಕ್ಕೆ ದಾರಿ. ಇದನ್ನು ಕಸಬಿನ ಮೂಲಕ ಶಿಕ್ಷಣ ಎಂದು ಕರೆದಿರುವುದು ಸೂಕ್ತವೇ. ಅದು ಭಾಗಶಃ ಸತ್ಯ. ಅಕ್ಷರ ಶಿಕ್ಷಣ ಕೈಶಿಕ್ಷಣದ ನಂತರ ಬರಬೇಕು."[೧೧] ಗಾಂಧೀಜಿಯವರು ಅಂದು ನೀಡಿದ ಆ ಸಲಹೆ ಇಂದು ಭಾರತದ ಭವಿಷ್ಯವೂ ಆಗಿದೆ! ಜೊತೆಗೆ "Basic Education, The Latest fad" (ಮೂಲ ಶಿಕ್ಷಣ,

ಹೊಚ್ಚ ಹೊಸ ಗೀಳು) ಎಂದು ಆಚಾರ್ಯ ಕೃಪಲಾನಿಯವರು ಒಂದು ಪುಸ್ತಕವನ್ನೇ ಬರೆದಿರುವುದನ್ನು ಇಲ್ಲಿ ಎಷ್ಟೊಂದು ಸಮಂಜಸವಲ್ಲವೇ?

"೧೯೨೭ ರಲ್ಲಿ ಪಂಜಾಬಿನ ಗುರುಗಾಂವ್ ಎಂಬಲ್ಲಿ ಆಗಿನ ಬ್ರಿಟಿಷ್ ಜಿಲ್ಲಾಧಿಕಾರಿ ಬ್ರೈನ್ ಎಂಬುವನು ಹಳ್ಳಿಯ ಜನರಿಗಾಗಿ ಕಠಿಣ ದುಡಿಮೆ, ಮಿತವ್ಯಯ, ಸ್ವಾಭಿಮಾನ, ಸ್ವಯಂಸೇವೆ, ಪರಸ್ಪರ ಸಹಾಯ ತತ್ವಗಳ ಮೇಲೆ 'ಉತ್ತಮ ಹಳ್ಳಿಗಳು' ಎಂಬ ವಿನೂತನ ಕಾರ್ಯಕ್ರಮವನ್ನು ಆರಂಭಿಸಿದನು. ಮುಂದೆ ಭಾರತ ಸ್ವತಂತ್ರಗೊಂಡ ಮೇಲೆ ೧೯೫೨ ರಲ್ಲಿ ರಾಷ್ಟ್ರವ್ಯಾಪಿ ಗ್ರಾಮ ಅಭಿವೃದ್ಧಿ ಯೋಜನೆಯನ್ನು ಆರಂಭಿಸಿದ್ದಾಯಿತು."[೧೨] ಇಂತಹ ಸಾಹಸಕ್ಕೆ ಸರ್ಕಾರವೂ ಪಾರದರ್ಶಕವಾಗಿ ಪ್ರಯತ್ನಿಸಿದರೆ ಹಳ್ಳಿಗಳ ಗತವೈಭವ ಮರುಕಳಿಸಬಹುದು; ನಮ್ಮ ಪಾರಂಪರಿಕ ಕಸಬುಗಳು ಮೈ ಕೊಡವಿ ಎದ್ದು ನಿಲ್ಲಬಹುದು.

"ಗ್ರಾಮೀಣ ಜನರು ತಯಾರಿಸುವ ವಸ್ತುಗಳನ್ನೇ ಆದಷ್ಟು ಮಟ್ಟಿಗೆ ನಾವು ಕೊಂಡಿಕೊಳ್ಳಬೇಕು. ಅವರು ತಯಾರಿಸಿದ ವಸ್ತುಗಳು ಚೆನ್ನಾಗಿಲ್ಲದೇ ಇರಬಹುದು, ಹಾಗೆಂದು ಅವುಗಳನ್ನು ತಿರಸ್ಕರಿಸಿ ವಿದೇಶಿ / ನಗರಗಳ ದೊಡ್ಡ ಕಾರ್ಖಾನೆಗಳಲ್ಲಿ ತಯಾರಾದ ವಸ್ತುಗಳು ಉತ್ತಮವೆಂದು ಅವುಗಳಿಗೆ ಮಾರು ಹೋಗಬಾರದು. ಹಳ್ಳಿಗಳು ತಯಾರಿಸಿದ ವಸ್ತುಗಳನ್ನೇ ಕೊಂಡುಕೊಳ್ಳುವುದರಿಂದ ಅವರಿಗೆ ಇನ್ನೂ ಉತ್ತಮವಾದ ಪ್ರೋತ್ಸಾಹ ದೊರೆತಂತಾಗುತ್ತದೆ. ಅವರಲ್ಲಿರುವ ಕಲಾಭಿರುಚಿ ಜಾಗೃತಗೊಳಿಸಬೇಕು; ಇದರಿಂದ ಅವರ ಋಣವನ್ನು ಸ್ವಲ್ಪವಾದರೂ ತೀರಿಸಿದಂತಾಗುತ್ತದೆ. ಈ ಪ್ರಯತ್ನದಲ್ಲಿ ನಾವು ಸಫಲರಾಗುತ್ತೇವೆಯೇ? ಎಂಬ ಸಂದೇಹ ಬೇಡ."[೧೩] ಹೀಗೆಂದು ಕರೆ ನೀಡಿದ ಗಾಂಧೀಜಿಯವರು ೧೯೩೪ರಲ್ಲಿ ಕಾಂಗ್ರೆಸ್‌ನೊಂದಿಗೆ ಸಂಪೂರ್ಣವಾಗಿ ತಮ್ಮ ಸಂಪರ್ಕವನ್ನು ಕಡಿದುಕೊಂಡ ನಂತರ ತಮ್ಮ ಕಾಲವನ್ನು ಅಭಿವೃದ್ಧಿಕಾರ್ಯದಲ್ಲಿ ವಿನಿಯೋಗಿಸಿದ್ದರು.

ಪರಿಶಿಷ್ಟರು ಮತ್ತು ಮಹಿಳೆಯರು ಹೊಸ ಉದ್ಯಮ ಆರಂಭಿಸಲು ಅಉಲಭ ರೂಪದಲ್ಲಿ ಸಾಲ ಒದಗಿಸುವ 'ಸ್ಟ್ಯಾಂಡ್‌ಅಪ್ ಇಂಡಿಯಾ' (Stand up India) ಯೋಜನೆಗೆ ಪ್ರಧಾನಿ ನರೇಂದ್ರ ಮೋದಿಯವರು ಚಾಲನೆ ನೀಡಿರುವುದು, ದೇಸಿ ಉದ್ಯಮ ಲೋಕದಲ್ಲಿ ಹೊಸ ಶಕೆಗೆ ಮುನ್ನುಡಿ ಬರೆಯಲಿದೆ. ಈ ಯೋಜನೆ ಅನ್ವಯ ರೂ. ೧೦ ಲಕ್ಷದಿಂದ ಗರಿಷ್ಠ ರೂ. ೧ ಕೋಟಿವರೆಗೆ ಸಾಲ ಸೌಲಭ್ಯ ಲಭ್ಯವಾಗಲಿದೆ. ಈ ಯಶಸ್ಸಿಗೆ ಸರ್ಕಾರ, ಬ್ಯಾಂಕ್ ಹಾಗೂ ಫಲಾನುಭವಿಗಳು ಬದ್ಧತೆ ಪ್ರದರ್ಶಿಸಬೇಕಷ್ಟೆ.

೭ನೇ ಅಗಸ್ಟ್ ೨೦೧೬ರಂದು ನಮ್ಮ ದೇಶದ ಪ್ರಧಾನಿ ನರೇಂದ್ರ ಮೋದಿಯವರು "ಹಳ್ಳಿಗಳ ಅಭಿವೃದ್ಧಿ, ಕೈಮಗ್ಗದಂತಹ ಸ್ಥಳೀಯ ಉದ್ಯಮಗಳ ಬೆಳವಣಿಗೆ ಮೂಲಕವಷ್ಟೇ ಭಾರತದ ಬೆಳವಣಿಗೆ ಸಾಧ್ಯ" ಎಂದು ಪ್ರತಿಪಾದಿಸುವ ಮೂಲಕ ದೇಸಿ ಉದ್ದಿಮೆಗೆ ಬಲ ನೀಡಿದರು. "Khadi for Nation and Fashion" ಎಂಬ ಘೋಷಣೆಯೊಂದನ್ನೂ ಘೋಷಿಸಿದ್ದು ನಮ್ಮ ಕಸಬುದಾರರಿಗೆ ಕಗ್ಗತ್ತಲೆಯಲ್ಲಿ ಮಿಂಚೊಂದು ಸುಳಿದಂತಾಗಿದೆ.

ನಾನು ಅಧ್ಯಯನಕ್ಕೆ ಆಯ್ದುಕೊಂಡಿರುವ ಪಾರಂಪರಿಕ ಕಸಬುಗಳಲ್ಲಿ ನೇಕಾರಿಕೆಯದ್ದೇ ಬಹುಪಾಲಿದೆ. ಇಳಕಲ್ಲ ಸೀರೆ, ಗುಳೇದಗುಡ್ಡದ ಖಣ ಹಾಗೂ ಕಮತಗಿಯ ಪಟಗಗಳು ನೇಕಾರರ ಕಸಬುಗಳಾಗಿವೆ. ಇಂದು ನೇಕಾರಿಕೆ ಕೇವಲ ಒಂದೇ ಸಮುದಾಯದ(ನೇಕಾರರ) ಸ್ವತ್ತಾಗಿಲ್ಲ. ಅನೇಕ ಬೇರೆ ಸಮುದಾಯದ ಬದುಕಿನ ಬವಣೆಯಾಗಿದೆ. ಅನೇಕ ಸಮುದಾಯದವರು ಅದನ್ನೇ ಒಂದು ಪರಂಪರೆಯಾಗಿ ಉಳಿಸಿ, ಬೆಳೆಸಿಕೊಂಡು ಬರುತ್ತಿದ್ದಾರೆ. ಅದೀಗ ಅವರ ಪಾರಂಪರಿಕ ಕಸಬಾಗಿದೆ. ಜಾತಿಯ ಭೂತವಿಲ್ಲದ ಈ ಪಾರಂಪರಿಕ ಕಸಬುಗಳು ಗತವೈಭವಕ್ಕೆ ಮರಳಬೇಕಿದೆ. ಕೈಮಗ್ಗ ಉದ್ಯಮವು ಇಂದು ಬಡತನ ನಿರ್ಮೂಲನೆಯ ಒಂದು ಆಯುಧವಾಗಿದ್ದು, ಅನೇಕ ನೇಕಾರರಿಗೆ ಉದ್ಯೋಗ ಭದ್ರತೆಯನ್ನು ನೀಡಿದೆ. ಈ ನಿಟ್ಟಿನಲ್ಲಿ ಇವರ ಸಮಸ್ಯೆಗಳಿಗೆ ಸ್ಪಂದಿಸುವ ಪ್ರಯತ್ನ ಮಾಡಲಾಗಿದೆ.

ಭಾಗ್ಯನಗರದ ಸಾಹಿತಿ ವಿಠ್ಠಪ್ಪ ಗೋರಂಟ್ಲಿಯವರು ತಮ್ಮ ಕವನ ಸಂಕಲನದಲ್ಲಿ ಒಂದು ಕಡೆ 'ಯಾರೂ ಹಾಡದ ಹಾಡು' ಎಂದು ಹೀಗೆ ಹಾಡಿದ್ದಾರೆ -

"ಎಳೆಗಿಂತ ಸಣ್ಣಾಗಿ ಮುಗಿಲಿದ್ದ ನೆಯ್ದರೂ
ಬಟ್ಟೆಯನ್ನೇ ಕಾಣದೆ ಬೆತ್ತಲಾದ ಜನ ನಾವು
ಸೋರುವಾ ಸೂರಿನಡಿ ನೆಂದವರು ನಾವು
ದೌರ್ಜನ್ಯದ ತುಳಿತದಲಿ ನೊಂದವರು ನಾವು
ಕಷ್ಟಗಳ ಕುಲುಮೆಯಲಿ ಬೆಂದವರು ನಾವು
ಹಾಡಲಿಲ್ಲ ಹಾಡಲಿಲ್ಲ ಹಾಡಲಿಲ್ಲವೊ
ಯಾರೂ ನಮ್ಮೆದೆಯಾಳದ ನೋವಿನಾ ಹಾಡು."[೧೪]

ಈ ಕವನದಲ್ಲಿ ನೇಕಾರರ ಸಮಗ್ರ ಬದುಕಿನ ಬವಣೆಯನ್ನು ತಿಳಿಸುತ್ತದೆ. ನಿಜಕ್ಕೂ ನೇಕಾರಿಕೆಯನ್ನೇ ನಂಬಿದವರ ಬದುಕಿನ ಚಿತ್ರಣವನ್ನು ತುಂಬಾ ಹತ್ತಿರದಿಂದ ನೋಡಿದರೆ

ಕರುಳು ಕಿತ್ತುಬರುವಂತಿದೆ. ಈ ನೇಕಾರರ ಸಂಕಷ್ಟಕ್ಕೆ ನಮ್ಮ ಅಧ್ಯಯನದ ಮುಂದಿರುವ ಸಾಧ್ಯತೆಗಳು : ಜಿಲ್ಲಾ ವಲಯ ಯೋಜನೆಗಳು ಹಾಗೂ ಕೇಂದ್ರ ಸರ್ಕಾರದ ಯೋಜನೆಗಳನ್ನು ಒಳಗೊಂಡ ರಾಜ್ಯ ಸರ್ಕಾರದ ಯೋಜನೆಗಳು ಎಂಬ ಎರಡು ರೀತಿಯ ಸವಲತ್ತುಗಳನ್ನು ನೇಕಾರರಿಗೆ ಒದಗಿಸಲಾಗಿದೆ. ಆದರೆ ಅವುಗಳ ಸದುಪಯೋಗಪಡಿಸಿಕೊಳ್ಳಲಾಗದೆ ಬಡತನದ ರೇಖೆಗಿಂತ ಮೇಲೆ ಬರುಲು ತಮ್ಮ ಅಜ್ಞಾನ, ಅನಕ್ಷರತೆಗಳೇ ಕಾರಣ! ಜೊತೆಗೆ ಸರ್ಕಾರದ ಅಧಿಕಾರಿಗಳು ನೇರವಾಗಿ ನೇಕಾರರ ಮಟ್ಟಕ್ಕಿಳಿದು ಶ್ರೇಯೋಭಿವೃದ್ಧಿಗೆ ಶ್ರಮಿಸದಿರುವುದೂ ಕಾರಣವಾಗಿದೆ.

**ಜಿಲ್ಲಾ ವಲಯ ಯೋಜನೆಗಳು :** ನೇಕಾರರ ನೈಪುಣ್ಯತೆಯನ್ನು ಹೆಚ್ಚಿಸುವ ಸಲುವಾಗಿ ಭಾಗವಹಿಸುವ ನೇಕಾರರಿಗೆ ಗೌರವಧನ ನೀಡಿ, ಜಿಲ್ಲಾ ಮಟ್ಟದಲ್ಲಿ 'ಕೈಮಗ್ಗ ನೇಕಾರಿಕೆ ತರಬೇತಿ'ಯನ್ನು ನೀಡಲಾಗುತ್ತದೆ.

ಕೈಮಗ್ಗದ ನೇಕಾರರು ಹೇರಳವಾಗಿರುವ ಊರುಗಳಲ್ಲಿ ಎಲ್ಲ ನೇಕಾರರು ಗುಂಪುಗೂಡಿ ಒಂದೇ ಕಡೆ ನೇಯ್ಗೆ ಮಾಡಲು ನೇಕಾರ ಸಹಕಾರ ಸಂಘಗಳ ವತಿಯಿಂದ 'ಸಾಮೂಹಿಕ ನೇಯ್ಗೆ ಕೇಂದ್ರ'ಗಳಿಗೆ ಸ್ಥಳಾವಕಾಶ ಒದಗಿಸುವುದು. ಅಲ್ಲದೇ ಕಚ್ಚಾವಸ್ತು ಹಾಗೂ ಸಲಕರಣೆಗಳನ್ನು ಖರೀದಿಸಲು ೫೦% ರಷ್ಟು ಸಾಲ ಹಾಗೂ ೫೦%ರಷ್ಟು ಅನುದಾನ ನೀಡಲಾಗುವುದು. ಇದರಿಂದ ಕಡುಬಡವ ನೇಕಾರನೂ ಸ್ವಾವಲಂಬಿಯಾಗಿ ಕಸಬನ್ನು ಮುಂದುವರೆಸಬಹುದು.

ಉತ್ಪಾದನಾ ವೆಚ್ಚವನ್ನು ಕಡಿಮೆ ಮಾಡಲು ಹಾಗೂ ವೈವಿಧ್ಯಮಯ ಬಣ್ಣದ ನೂಲುಗಳನ್ನು ಸದಸ್ಯರಿಗೆ ನೀಡಲು ಸಂಘಗಳಿಗೆ ಸ್ವತಃ 'ಬಣ್ಣದ ಘಟಕ'ಗಳನ್ನು ಹೊಂದಲು ೧೦೦%ರಷ್ಟು ಅನುದಾನ ನೀಡಲಾಗುತ್ತದೆ.

ಸ್ವಂತ ನಿವೇಶನವಿದ್ದು, ಸ್ವಂತ ಮನೆ ಇಲ್ಲದವರಿಗೆ 'ಮನೆ ಕಟ್ಟಿಸಿಕೊಡುವ ಯೋಜನೆ'ಯೊಂದಿದ್ದು, ಸಾಲದ ರೂಪದಲ್ಲಿ ರೂ. ೨೦,೦೦೦ ಗಳನ್ನು ನೀಡುತ್ತಿದ್ದು ೨೫ ವರ್ಷದೊಳಗೆ ನಿಗಧಿತ ಬಡ್ಡಿಯೊಂದಿಗೆ ಮರು ಪಾವತಿಸುವ ಈ ಯೋಜನೆಗೆ ಸಹಾಯಧನದ ರೂಪದಲ್ಲಿ ರೂ. ೧೦,೦೦೦ ಕೂಡಾ ಇರುತ್ತದೆ. ಈ ಹಣದ ಮೊತ್ತದಲ್ಲಿ ಕಾಲಕಾಲಕ್ಕೆ ಬದಲಾವಣೆಯಾಗುವ ಸಾಧ್ಯತೆಗಳಿವೆ.

ನವೀನ ಮಾದರಿಯ ಬಟ್ಟೆಗಳನ್ನು ಉತ್ಪಾದಿಸಲು 'ಆಧುನಿಕ ಮಗ್ಗಗಳನ್ನು ಪೂರೈಕೆ' ಮಾಡಲಾಗುತ್ತಿದೆ. ಇದು ಕೂಡಾ ಸಹಕಾರಿ ಸಂಘಗಳ ಮೂಲಕ ನಡೆಯುವ ಯೋಜನೆಯಾಗಿದೆ.

Rural Artisan Programme ಹಾಗೂ Rural Industrial Programme ಯೋಜನೆಗಳ ಮೂಲಕ ಗ್ರಾಮೀಣ ಕುಶಲಕರ್ಮಿಗಳಿಗೆ ತರಬೇತಿ ಹಾಗೂ ಸುಧಾರಿತ ಉಪಕರಣಗಳಿಗಾಗಿ ೩೩.೩೩% (ಗರಿಷ್ಠ ರೂ. ೩೦೦೦) ಸಹಾಯಧನ ನೀಡುವುದಲ್ಲದೇ ಪ್ರವಾಸಕ್ಕೂ ಅವಕಾಶ ಕಲ್ಪಿಸಲಾಗಿದೆ. ಒಂದು ವೇಳೆ ಗ್ರಾಮೀಣ ಪ್ರದೇಶದಲ್ಲಿ ಕಿರು ಜವಳಿ ಉದ್ಯಮವನ್ನು ಸ್ಥಾಪಿಸಲು ಇಚ್ಛಿಸಿದರೆ ಗರಿಷ್ಠ ರೂ. ೪೦,೦೦೦ ಹಾಗೂ ಪರಿಶಿಷ್ಟ ಜಾತಿಯವರಿಗೆ ಗರಿಷ್ಠ ರೂ. ೬೦,೦೦೦ ಸಾಲ ಮಂಜೂರು ಮಾಡಲು ಅವಕಾಶವಿದೆ.

'ಕೇಂದ್ರ ವಲಯ ವಸತಿ ಕಾರ್ಯಾಗಾರ ಯೋಜನೆ'ಯಡಿ ಕಟ್ಟಡಕ್ಕೆ (ವಸತಿ ಸಹಿತ) ಗ್ರಾಮೀಣ ಭಾಗದಲ್ಲಿ ರೂ. ೧೪,೦೦೦ ಹಾಗೂ ನಗರ ಭಾಗದಲ್ಲಿ ಗರಿಷ್ಠ ರೂ. ೨೦,೦೦೦ ಇದೆ. ಇದನ್ನು ಸ್ಥಳೀಯ ಬ್ಯಾಂಕು ಅಥವಾ ರಾಜೀವ ಗಾಂಧಿ ಗ್ರಾಮೀಣ ಗೃಹ ನಿರ್ಮಾಣ ನಿಗಮದ ಮುಖಾಂತರ ಪಡೆದುಕೊಳ್ಳಬಹುದು.

**ಕೇಂದ್ರ ಸರ್ಕಾರದ ಯೋಜನೆಗಳನ್ನು ಒಳಗೊಂಡ ರಾಜ್ಯ ಸರ್ಕಾರದ ಯೋಜನೆಗಳು :**

ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ನಿಗಮ ಯೋಜನೆ (National Co-operative Development Corporation) ಪ್ರಾಥಮಿಕ ಕೈಮಗ್ಗ ಹಾಗೂ ನೇಕಾರ ಸಹಕಾರ ಸಂಘಗಳ ಆರ್ಥಿಕ ನೆರವನ್ನು ಪಡೆಯಲು ಅವಕಾಶವಿರುತ್ತದೆ.

ನಬಾರ್ಡ ಯೋಜನೆಯಲ್ಲಿ ದುಡಿಯುವ ಬಂಡವಾಳ ಸಾಲ ಯೋಜನೆ ಮುಖಾಂತರ ಡಿಸಿಸಿ ಬ್ಯಾಂಕ್ ಅಥವಾ ರಾಷ್ಟ್ರೀಕೃತ ಬ್ಯಾಂಕ್‌ಗಳ ಮೂಲಕ ಸಾಲ ಪಡೆಯಬಹುದು.

ನೇಕಾರ ಕಲ್ಯಾಣ ಯೋಜನೆಯ ಮುಖಾಂತರ ಕೈಮಗ್ಗ ನೇಕಾರರ ಮೂಲಭೂತ ಅವಶ್ಯಕತೆಗಳಾದ ಆರೋಗ್ಯ ಯೋಜನೆಗಳು ಅಡಿಯಲ್ಲಿ ಕ್ಯಾನ್ಸರ್, ಹೃದಯ ರೋಗ, ಮೂತ್ರಪಿಂಡ ಜೋಡಣೆ, ಕುಷ್ಠರೋಗ, ಮಾನಸಿಕ ಚಿಕಿತ್ಸೆ ಮುಂತಾದವುಗಳಿಗೆ ಹಣಕಾಸಿನ ಸಹಾಯ ನೀಡಲಾಗುವುದು.

ಕೆ.ಹೆಚ್.ಡಿ.ಸಿ ನೇಕಾರ ಸಂಘದವರು ಸದಸ್ಯ ನೇಕಾರ ಮರಣ ಹೊಂದಿದರೆ ರೂ.೧೦೦೦ ಅಂತ್ಯ ಸಂಸ್ಕಾರ ವೆಚ್ಚಕ್ಕೆ ನೀಡುತ್ತಾರೆ. ನೇಕಾರರ ಮಕ್ಕಳ ಕಾಲೇಜು ವ್ಯಾಸಂಗಕ್ಕೆ ಶೇಕಡಾವಾರು ಅಂಕಗಳ ಆಧಾರದ ಮೇಲೆ ಶಿಷ್ಯವೇತನ ನೀಡಲಾಗುತ್ತದೆ ಮಾತ್ರವಲ್ಲ ಪುಸ್ತಕಗಳ ಖರೀದಿಗೆ ಅನುದಾನವನ್ನೂ ನೀಡಲಾಗುವುದು.

ಕೈಮಗ್ಗ ನೇಕಾರ ಯೋಜನೆ ಅಡಿಯಲ್ಲಿ ರಾಷ್ಟ್ರೀಯ ಕೈಮಗ್ಗ ಅಭಿವೃದ್ಧಿ ನಿಗಮದ ಮೂಲಕ ರಿಯಾಯಿತಿ ದರದಲ್ಲಿ ನೂಲು ಖರೀದಿಸಬಹುದಾಗಿದೆ.

ಇವುಗಳಲ್ಲದೇ ಕೈಮಗ್ಗ ನೇಕಾರ ಆರೋಗ್ಯ ವಿಮೆ, ಮಹಾತ್ಮಾ ಗಾಂಧಿ ಬುಣಕರ ಬಿಮಾ ಯೋಜನೆ, ಕೆ.ಹೆಚ್.ಡಿ.ಸಿ. ವಿಶೇಷ ಪ್ಯಾಕೇಜ್‌ಗಳನ್ನು ನೇಕಾರ ಸದುಪಯೋಗಪಡಿಸಿಕೊಳ್ಳಬಹುದು.

"ಕರ್ನಾಟಕ ಸರ್ಕಾರದ ಕೈಮಗ್ಗ ಮತ್ತು ಜವಳಿ ಇಲಾಖೆಯವರು ಜಾರಿಗೊಳಿಸಿದ ಜವಳಿ ನೀತಿ ೨೦೦೪-೦೯ರ ಪ್ರಕಾರ :

೧. ಪುರಾತನ ಮತ್ತು ಸಾಂಪ್ರದಾಯಿಕ ಕೈಮಗ್ಗಗಳನ್ನು ಸಂರಕ್ಷಿಸುವುದು ಮತ್ತು ನೇಕಾರರ ಜೀವನಮಟ್ಟವನ್ನು ಸುಧಾರಿಸುವುದು.

೨. ವಿನ್ಯಾಸಾಭಿವೃದ್ಧಿ ತರಬೇತಿಯ ಬೆಂಬಲ, ತಾಂತ್ರಿಕ ಉನ್ನತೀಕರಣ ಹಾಗೂ ಮಾರುಕಟ್ಟೆಯ ಮಾಹಿತಿಯ ಮುಖಾಂತರ ಕೈಮಗ್ಗವನ್ನು ಆಧುನೀಕರಣಗೊಳೀಸುವುದು.

ವಿಶಿಷ್ಟ ವಿನ್ಯಾಸ ಮತ್ತು ಹೆಚ್ಚಿನ ಮೌಲ್ಯವುಳ್ಳ ಕರಕುಶಲ ಆಧಾರಿತ ವಸ್ತುವಿಗೆ ವಿಶೇಷ ಮಾರುಕಟ್ಟೆಯನ್ನು ಕಲ್ಪಿಸಿಕೊಡಲಾಗುವುದು."[೧೫] ಈ ಮೇಲ್ಕಂಡ ಉದ್ದೇಶಗಳ ಪ್ರಕಾರ ರಾಷ್ಟ್ರೀಯ ಫ್ಯಾಶನ್ ತಂತ್ರಜ್ಞಾನ ಸಂಸ್ಥೆ (National Institute of Fashion Technology) ಹಾಗೂ ಜವಳಿ ಸಂಶೋಧನಾ ಕೇಂದ್ರವನ್ನು ಬೆಂಗಳೂರಿನಲ್ಲಿ ತೆರೆಯಲಾಗಿದ್ದು, ಇದರ ಸಹಯೋಗದೊಂದಿಗೆ ಪುರಾತನ ಕೈಮಗ್ಗ ಇಳಕಲ್ಲ ಸೀರೆಗಳಿಗೆ ಹೆಚ್ಚಿನ ಆಕರ್ಷಣೆಗಾಗಿ ವಿನ್ಯಾಸ ಬೆಂಬಲ ನೀಡುವುದು. ಅಲ್ಲದೇ ಇಳಕಲ್ಲ, ಭಾಗ್ಯನಗರ ಪಟ್ಟಣಗಳನ್ನು ರಫ್ತಿನ ಸಲುವಾಗಿ ಖಾಸಗಿಯವರ ಸಹಭಾಗಿತ್ವದಲ್ಲಿ ಕೈಮಗ್ಗ ಗುಂಪುಗಳನ್ನು ಅಭಿವೃದ್ಧಿಪಡಿಸಿ ಭಾರತ ಸಕಾರದ ಯೋಜನೆಗಳ ಅನುಷ್ಠಾನಕ್ಕಾಗಿ ಉಪಯೋಗಿಸಿಕೊಳ್ಳು ಅದೃಷ್ಟ ಪಡೆದಿವೆ. ನೇಕಾರರು ತಯಾರಿಸಿದ ವಸ್ತುಗಳ ಪ್ರದರ್ಶನ ಹಾಗೂ ಮಾರಾಟಕ್ಕೆ ಮಳಿಗೆಗಳನ್ನು ಸ್ಥಾಪಿಸಲಾಗಿದೆ.

ವಿದ್ಯುತ್ ಮಗ್ಗಗಳ ವಲಯದ ನೇಕಾರರಿಗೆ ನಿಗಮದ ವತಿಯಿಂದ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಅನೇಕ ಸವಲತ್ತುಗಳನ್ನು ನೀಡಿವೆ. :

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಿಂದ ಶಾಶ್ವತ ನೋಂದಣಿ ಪ್ರಮಾಣಪತ್ರ ಪಡೆದು, ಅದರ ಮೂಲಕ ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮದ ಸದಸ್ಯತ್ವವನ್ನು ಪಡೆಯಬಹುದಾಗಿದೆ.

ತಾಂತ್ರಿಕ ಉನ್ನತೀಕರಣ ಯೋಜನೆಯನ್ವಯ ಜವಳಿ ಘಟಕಗಳ ಸ್ಥಾಪನೆಗೆ ನಿಗಧಿಪಡಿಸಿದ ಬ್ಯಾಂಕುಗಳು ಹಾಗೂ ಹಣಕಾಸು ಸಂಸ್ಥೆಗಳಿಂದ ಪಡೆದ ಸಾಲದ ಮೊತ್ತಕ್ಕೆ ಶೇ.೫ ಬಡ್ಡಿ ರಿಯಾಯಿತಿಯನ್ನು ಮರು ಸಂದಾಯ ರೂಪದಲ್ಲಿ ಪಡೆಯಬಹುದಾಗಿದೆ.

ಅಸಂಘಟಿತ ವಿದ್ಯುತ್ ಮಗ್ಗ ವಲಯದ ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಶೇ. ೨೦ ರಷ್ಟು Credit Linked Capital Subsidy ಅಡಿಯಲ್ಲಿ ಸಹಾಯಧನ ಒದಗಿಸಲಾಗುವುದು. ಇದು ವಿದ್ಯುತ್ ಮಗ್ಗ ನೇಕಾರರ ಸಂಘಗಳಿಗೂ ಅನ್ವಯಿಸಲ್ಪಡುತ್ತದೆ.

ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ನಿಗಮ ಯೋಜನೆ (National Co-operative Development Corporation) ಅಡಿಯಲ್ಲಿ Power loom Complex Processing Unit ಹಾಗೂ Free loom ಘಟಕಗಳನ್ನು ಸ್ಥಾಪಿಸಲು ನೆರವನ್ನು ಪಡೆಯಬಹುದಾಗಿದೆ.

ನಬಾರ್ಡ ಯೋಜನೆಯಲ್ಲಿ ದುಡಿಯುವ ಬಂಡವಾಳ ಸಾಲ ಯೋಜನೆ ಮುಖಾಂತರ ಡಿಸಿಸಿ ಬ್ಯಾಂಕ್ ಅಥವಾ ರಾಷ್ಟ್ರೀಕೃತ ಬ್ಯಾಂಕ್‌ಗಳ ಮೂಲಕ ಸಾಲ ಪಡೆಯಬಹುದು.

ಇವುಗಳಲ್ಲದೇ ಪವರ್ ಲೂಮ್ ಸರ್ವಿಸ್ ಸೆಂಟರ್‌ಗಳ ಮೂಲಕ ನೇಯ್ಗೆ ತರಬೇತಿಯನ್ನು ಪಡೆಯಬಹುದಾಗಿದೆ. ಅಲ್ಲದೇ ಕ್ಯಾಡ್ ಕಾಮ್ ಸೌಲಭ್ಯ ಪಡೆಯುವ ಮೂಲಕ ಕಂಪ್ಯೂಟರ್ ಏಡೆಡ್ ಡಿಜೈನ್‌ಗಳನ್ನು ಪಡೆದುಕೊಳ್ಳಬಹುದಾಗಿದೆ. ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಮುಖಾಂತರ ೨ಎ ವರ್ಗದಲ್ಲಿ ಬರುವ ನೇಕಾರರಿಗೆ ಸಾಕಷ್ಟು ಸಹಾಯಧನವನ್ನೂ ಒಳಗೊಂಡಂತೆ; ಕಡಿಮೆ ವಿದ್ಯುತ್ ದರ, ೪ ಮಗ್ಗಗಳಿಗೆ ಬಂಡವಾಳ ಸಹಾಯಧನ, ಜನಶ್ರೀ ಬಿಮಾ ಯೋಜನೆ ಹಾಗೂ ಗುಂಪು ವಿಮಾ ಯೋಜನೆಗಳಂತಹ ಅನೇಕ ಸವಲತ್ತುಗಳನ್ನು ಸರ್ಕಾರ ನೀಡಿದೆ.

ಕರ್ನಾಟಕ ಸರ್ಕಾರದ ನೂತನ ಜವಳಿ ನೀತಿ ೨೦೧೩-೧೮ ರ ಅಡಿಯಲ್ಲಿ ರೂ.೧೦,೦೦೦ ಕೋಟಿ ಬಂಡವಾಳ ಆಕರ್ಷಣೆ ಮತ್ತು ೫ ಲಕ್ಷ ಹೊಸ ಉದ್ಯೋಗ ಸೃಜನೆ ಗುರಿಯನ್ನು ಹೊಂದಿದೆ. ಎಂ.ಎಸ್.ಎಂ.ಇ. ೪೧೯ ಜವಳಿ ಘಟಕಗಳಿಗೆ ಪ್ರೋತ್ಸಾಹಧನ ನೀಡುವ ಮೂಲಕ ಉತ್ತೇಜಿಸುವುದು. ೬೦,೩೮೫ ನಿರುದ್ಯೋಗಿಗಳಿಗೆ ರೂ.೩೫.೫೯ ಕೋಟಿ ವೆಚ್ಚದಲ್ಲಿ ಕೌಶಲ್ಯಾಭಿವೃದ್ಧಿ ತರಬೇತಿ ನೀಡಿದೆ. 'ಇನ್ವೆಸ್ಟ್ ಕರ್ನಾಟಕ-೨೦೧೬' ಸಮಾವೇಶದಲ್ಲಿ ૩೨૪ ಹೊಸ ಪ್ರಾಜೆಕ್ಟ್‌ಗಳಿಗೆ ರೂ.೬೩೪೯.೪૪ ಕೋಟಿ ಬಂಡವಾಳ ಹೂಡಿಕೆ ಮತ್ತು ಸುಮಾರು ೮೫,೦೦೦ ಉದ್ಯೋಗ ಸೃಜನೆಗೆ ಒಡಂಬಡಿಕೆಗೆ ಕ್ರಮವಹಿಸಿಸಲಾಗಿದೆ.

ನೇಕಾರರ ವಿಶೇಷ ಪ್ಯಾಕೇಜಿನಡಿ ೨೬,೦೦೦ ವಿದ್ಯುತ್‌ಮಗ್ಗ ಘಟಕಗಳಿಗೆ ವಿದ್ಯುತ್ ಸಹಾಯಧನ ನೀಡುವುದು. ೨ ವಿದ್ಯುತ್‌ಮಗ್ಗ ಒದಗಿಸುವ ಯೋಜನೆಯಡಿ ೧೩೫೫ ನೇಕಾರರುಗಳಿಗೆ ೨೭೧೦ ವಿದ್ಯುತ್‌ಮಗ್ಗಗಳನ್ನು ವಿತರಿಸಿರುವುದು. ೧೨೫ ಕೈಮಗ್ಗ ಸಹಕಾರ ಸಂಘಗಳಿಗೆ ಮಾರುಕಟ್ಟೆ ಸಹಾಯಧನ ನೀಡಿರುವುದು; ೩೧೬ ಪರಿಶಿಷ್ಟ ಜಾತಿ, ೧೮೪ ಪರಿಶಿಷ್ಟ ಪಂಗಡ ಹಾಗೂ ೨೮೭೪ ಸಾಮಾನ್ಯ ವರ್ಗದ ನೇಕಾರರಿಗೆ ವಸತಿ ಕಾರ್ಯಾಗಾರಗಳ ನಿರ್ಮಾಣಕ್ಕೆ ಸಹಾಯಧನ ರೂ.೩೫.೪೩ ಕೋಟಿಗಳನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮಕ್ಕೆ ನೇಕಾರರ ವಿಶೇಷ ಪ್ಯಾಕೇಜ್ ಯೋಜನೆಯಡಿಯಲ್ಲಿ ಸಾಮಾನ್ಯ ಕಾರ್ಯಕ್ರಮಕ್ಕೆ, ವಿಶೇಷ ಘಟಕ ಯೋಜನೆ ಕಾರ್ಯಕ್ರಮಕ್ಕೆ, ಗಿರಿಜನ ಉಪಯೋಜನೆ ಕಾರ್ಯಕ್ರಮಗಳಿಗೆ ಹಣ ಬಿಡುಗಡೆಗೊಳಿಸಿದೆ. ೪೪೩೩೧ ನೇಕಾರರನ್ನು ಕೈಮಗ್ಗ ನೇಕಾರರ ಗುಂಪು ವಿಮಾ ಯೋಜನೆಗೆ ಅಳವಡಿಸಿದ್ದು, ರೂ.೫.೧೩ ಕೋಟಿ ವಿಮಾ ವಂತಿಕೆ ಒದಗಿಸಿದೆ. ಅಲ್ಲದೇ ೨೧೯೫ ಕೈಮಗ್ಗ ನೇಕಾರರ ಮಕ್ಕಳಿಗೆ ವಿದ್ಯಾರ್ಥಿ ವೇತನ ನೀಡಿದೆ.

೨೦೧೬-೧೭ನೇ ಸಾಲಿನ ಆಯ-ವ್ಯಯದಲ್ಲಿ ಕೈಮಗ್ಗ ಮತ್ತು ಜವಳಿ ಇಲಾಖೆಗೆ ೨೬೨೪ ಲಕ್ಷ ರೂಪಾಯಿಗಳನ್ನು ಮೀಸಲಿರಿಸಲಾಗಿದ್ದು, ಅನೇಕ ಹೊಸ ಯೋಜನೆಗಳನ್ನು ಹಾಕಿಕೊಂಡಿದೆ. ವಸತಿ ಕಾರ್ಯಾಗಾರ ಯೋಜನೆಯಡಿ ನೀಡಲಾದ ರೂ.೧೭ ಕೋಟಿಗಳ ಸಾಲ ಮತ್ತು ಬಡ್ಡಿ ಮನ್ನಾ ಮಾಡಲಾಗಿದ್ದು, ಇದರಿಂದ ಸುಮಾರು ೯೦೦೦ ನೇಕಾರರುಗಳಿಗೆ ಸಹಾಯವಾಗುತ್ತದೆ.

ನೇಕಾರರಿಗೆ ಸಹಕಾರ ಬ್ಯಾಂಕು ಮತ್ತು ಸಂಘಗಳ ಮೂಲಕ ರೂ. ೨ ಲಕ್ಷದವರೆಗೆ ಶೇ.೧ ರ ಬಡ್ಡಿದರದಲ್ಲಿ ಸಾಲ ಹಾಗೂ ರೂ. ೫ ಲಕ್ಷದವರೆಗೆ ಶೇ.೩ ರ ಬಡ್ಡಿದರದಲ್ಲಿ ಸಾಲ ಮಂಜೂರು ಮಾಡುವಂತೆ ಘೋಷಿಸಲಾಗಿದೆ. ಗ್ರಾಮೀಣ ಪ್ರದೇಶದ ಸಣ್ಣ ಪ್ರಮಾಣದ ವಿದ್ಯುತ್‌ಮಗ್ಗ ಘಟಕಗಳಿಗೆ ಸೌರಶಕ್ತಿ ಉಪಕರಣಗಳಿಗೆ ಶೇ.೫೦ ರಷ್ಟು ಸಹಾಯಧನ ನೀಡಲಾಗುವುದು.

ಭಾರತ ಸಕಾರದ ವಿದ್ಯುತ್‌ಮಗ್ಗಗಳ ಆಧುನೀಕರಣ ಯೋಜನೆಯಡಿ ವಿದ್ಯುತ್ ಮಗ್ಗಗಳನ್ನು ಉನ್ನತೀಕರಿಸಲು ರಾಜ್ಯ ಸರ್ಕಾರದ ವತಿಯಿಂದ ಪ್ರತಿ ಮಗ್ಗಕ್ಕೆ ರೂ.೧೦,೦೦೦ ಗಳ ಕೊಡುಗೆ ಸಹಾಯಧನ ನೀಡುವುದು. ಜೊತೆಗೆ ಆರ್ಥಿಕ ಸಂಕಷ್ಟದಲ್ಲಿರುವ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ಹಾಗೂ ಕಾವೇರಿ ಹ್ಯಾಂಡ್‌ಲೂಮ್ಸ್ ಸಂಸ್ಥೆಗಳ ವಿಸ್ತೃತ ಪುನರ್ ರಚನೆ ಹಾಗೂ ಸಂಯೋಜನೆಗೆ ಕ್ರಮವಹಿಸಿರುವುದಾಗಿ ಕೈಮಗ್ಗ ಮತ್ತು ಜವಳಿ ಇಲಾಖೆಯು ೬.೮.೨೦೧೬ರ ವಿಜಯವಾಣಿ ದೈನಿಕದ ಜಾಹೀರಾತಿನಲ್ಲಿ ತಿಳಿಸಿದೆ.

ಇವುಗಳನ್ನು ಸದುಪಯೋಗಪಡಿಸಿಕೊಳ್ಳುವಷ್ಟು ನೇಕಾರ ಜಾಣನಾಗಬೇಕಿದೆ. ತನ್ನ ಶ್ರೇಯೋಭಿವೃದ್ಧಿ ತನ್ನ ಕೈಯಲ್ಲಿಯೇ ಇದೆ! ಕಚ್ಚಾವಸ್ತುವಾದ ಹತ್ತಿಯನ್ನು ವಿದೇಶಗಳಿಗೆ ರಫ್ತು ಮಾಡುವ ಬದಲು; ಅದೇ ಹತ್ತಿಯನ್ನು ಸಂಸ್ಕರಿಸಿ, ಬಟ್ಟೆಯನ್ನಾಗಿ ತಯಾರಿಸಿ, ಅದನ್ನು ವಿದೇಶಕ್ಕೆ ರಫ್ತು ಮಾಡಿದಲ್ಲಿ ನಮ್ಮ ದೇಶ ಪ್ರಗತಿಯತ್ತ ಹೆಜ್ಜೆ ಹಾಕುವುದರ ಜೊತೆಗೆ ಮಗ್ಗವನ್ನೇ ನಂಬಿದ ನೇಕಾರರ ಬದಕೂ ಹಸನಾಗುವುದರಲ್ಲಿ ಸಂದೇಹವಿಲ್ಲ.

ಅಮೀನಗಡದ ಕರದಂಟು ತಯಾರಿಕೆ ಕಸಬು ಇಂದು ಉದ್ದಿಮೆಯಾಗುವತ್ತ ದಾಪುಗಾಲು ಹಾಕುತ್ತಿದೆ. ಇಲ್ಲಿ ಗಂಭೀರವಾದ ಜ್ವಲಂತ ಸಮಸ್ಯೆಗಳಿಲ್ಲದಿರುವುದು ಮೇಲ್ನೋಟಕ್ಕೆ ಕಂಡುಬಂದರೂ ಅಮೀನಗಡದ ಕರದಂಟು ತಯಾರಕರೆಂದು ರಾಜ್ಯದ ಹಲವಾರು ಊರುಗಳಲ್ಲಿ ಸ್ವೀಟ್ ಮಾರ್ಟ್‌ಗಳನ್ನು ಇಟ್ಟುಕೊಂಡು ಅಮೀನಗಡ ಕರದಂಟಿನ ತಾಜಾ ಹಾಗೂ ಅಸಲಿ ತಯಾರಕರೇ ತಾವೆಂದು ಮಾರಾಟ ಮಾಡುತ್ತಿದ್ದಾರೆ. ಇದರಿಂದ ಮೂಲತಃ ಇದೇ ಕಸಬನ್ನು ನಂಬಿದವರಿಗೆ ಪರೋಕ್ಷವಾಗಿ ಹೊಡೆತ ಬೀಳುತ್ತದೆ. ಇದಕ್ಕಾಗಿ ಅವರು ತಮ್ಮದೇ ಒಂದು ಸಂಘವನ್ನೋ, ಸಂಗಟನೆಯನ್ನೋ ರಚಿಸಿಕೊಳ್ಳುವ ಮೂಲಕ ಈ ಸಮಸ್ಯೆಗೆ ಕೊಂಚ ಪರಿಹಾರ ಕಂಡುಕೊಳ್ಳಬಹುದು. ಟ್ರೇಡ್ ಮಾರ್ಕ್ ಹೊಂದಿದರೂ ಆಗುತ್ತದೆ.

ಇದೇ ಕರದಂಟು ಬೇರೆ ಬೇರೆ ಊರುಗಳಲ್ಲಿ ತಾಜ ತಾಜ ಆಗಿ ಸಿಕ್ಕುವಂತಿದ್ದರೆ ಚೆನ್ನಾಗಿರುತ್ತದೆ ಎಂಬ ಗ್ರಾಹಕರ ಬೇಡಿಕೆಗೆ ಇರುವುದೊಂದೇ ದಾರಿ – ಅಮೀನಗಡದಲ್ಲಿರುವ ಎಲ್ಲಾ ಕರದಂಟು ತಯಾರಕರು ಆ ಒಂದೇ ಊರಲ್ಲಿ ಬೀಡು ಬಿಡುವ ಬದಲು ಬೇರೆ ಬೇರೆ ಊರುಗಳಲ್ಲಿ ಅಂಗಡಿಗಳನ್ನಿಟ್ಟು ಮಾರಾಟ ಮಾಡಿದರೆ ಗ್ರಾಹಕರ ಆಸೆಯನ್ನು ಈಡೇರಿಸಿದಂತೆಯೂ ಆಗುತ್ತದೆ; ತಮ್ಮ ತಮ್ಮಲ್ಲಿರುವ ಪೈಪೋಟಿಯೂ ಕಡಿಮೆಯಾಗುತ್ತದೆ!

ತೃತೀಯ ಜಗತ್ತಿನ ಗ್ರಾಮ ಸಂಸ್ಕೃತಿಗೆ ಮಾತ್ರ ದೇಸಿ ಸಂಸ್ಕೃತಿಯನ್ನು ಎತ್ತಿ ಹಿಡಿಯುವ ತಾಕತ್ತಿದೆ. ಆಧುನೀಕರಣದ ಯುದ್ಧದಲ್ಲಿ ದೇಸಿ ಸಂಸ್ಕೃತಿಯನ್ನು ಗುರಾಣಿಯಾಗಿ ಬಳಸಬೇಕಿದೆ! ಶೈಕ್ಷಣಿಕ ಅರ್ಹತೆಯ ಹಂಗಿಲ್ಲದ ಜನಪದರ ಪಾರಂಪರಿಕ ವಿಜ್ಞಾನ–ತಂತ್ರಜ್ಞಾನಗಳು 'ಪುನಃ' ನಮ್ಮ ಪಾಲಿಗೆ ಲೋಕದರ್ಶನಗಳಾಗಬೇಕಿದೆ. ಬೇಸಾಯಗಾರರು, ಕಸಬುದಾರರು, ದಲಿತರು, ಆದಿವಾಸಿಗಳು, ಬುಡಕಟ್ಟು ಜನಾಂಗದವರುಗಳೇ ಪಾರಂಪರಿಕ ಜ್ಞಾನದ ನಿಜವಾದ ವಾರಸುದಾರರು. ಜನಸಾಮಾನ್ಯರ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಬದುಕಿನಲ್ಲಿ ಹಾಸುಹೊಕ್ಕಾಗಿರುವ, ಕಷ್ಟಕಾಲದಲ್ಲೂ ಸಮುದಾಯವನ್ನು ಪೋಷಿಸುತ್ತಾ ಬಂದಿರುವ ಈ ಪಾರಂಪರಿಕ ಜ್ಞಾನವನ್ನೇ ಜಾಗತೀಕರಣ ಮತ್ತು ಆಧುನೀಕರಣಕ್ಕೆ ಪರ್ಯಾಯವಾಗಿ ಅಳವಡಿಸಿಕೊಳ್ಳಬೇಕಿದೆ. ಗ್ರಾಮ ಸ್ವಾಯತ್ತೆಗಾಗಿ ಜನಪರ ಚಳುವಳಿ ರೂಪಿಸುವುದು ರಾಜಕೀಯೇತರ ಮಾರ್ಗಗಳಲ್ಲಿ ಒಂದು. ಹಳ್ಳಿಗರ ಆರ್ಥಿಕ ಅಭಿವೃದ್ಧಿಗಾಗಿ ನಿರುದ್ಯೋಗಿ, ಅನಕ್ಷರಸ್ಥ ಪಾರಂಪರಿಕ ಕಸಬುದಾರರಿಗೆ ರೂಪಾಂತರಗೊಂಡ ಕಸಬನ್ನು ಅಳವಡಿಸಿಕೊಳ್ಳಲು ಸೂಕ್ತ ತರಬೇತಿ ನೀಡಿ ಕಸಬುದಾರರನ್ನು ಮತ್ತು ಕಸಬುಗಳನ್ನು ಉಳಿಸಿ, ಸಾಂಸ್ಕೃತಿಕ ಕಸಬುಗಳಿಗೆ ಆಧುನಿಕತೆಯ ಸ್ಪರ್ಶ ನೀಡಿ, ಮಾಧ್ಯಮಗಳ ಮೂಲಕ ಸಾಕಷ್ಟು ಪ್ರಚಾರ ಕೊಟ್ಟರೆ, ಅವರ ಉತ್ಪಾದನಾ ವಸ್ತುಗಳಿಗೆ ಸೂಕ್ತ ದರ ಸಿಗುವಂತೆ ಉತ್ತಮ ಮಾರುಕಟ್ಟೆ ವ್ಯವಸ್ಥೆ ಒದಗಿಸಿಕೊಟ್ಟರೆ... ಅವರಿಗೆ ತಮ್ಮದೇ ಸಾಂಸ್ಕೃತಿಕ ಬದುಕು ಕಟ್ಟಿಕೊಟ್ಟಂತಾಗುತ್ತದೆ.

ಕಸಬುದಾರ ತಮ್ಮ ವಂಶಪಾರಂಪರ್ಯವಾಗಿ ಬಂದ ಕಸಬಿನೊಂದಿಗೆ ಹಿರಿಯರು ಮಾಡಿಟ್ಟ ಆ ಯಂತ್ರ, ಸಾಧನ, ಸಲಕರಣೆಗಳನ್ನೇ ಬಳಸುತ್ತಿದ್ದಾನೆ. ಇದರಿಂದ ಆಧುನಿಕ ಗ್ರಾಹಕರ ಮನಸ್ಸೆಳೆಯುವಲ್ಲಿ ಕಸಬುದಾರ ಎಡವುತ್ತಿದ್ದಾನೆ. ಇದನ್ನು ಮನಗಂಡ ಸರ್ಕಾರ ಉತ್ಪಾದನಾ ತಂತ್ರದ ಸಂಶೋಧನೆಗೆ ಪ್ರೋತ್ಸಾಹಿಸುತ್ತಿದೆ. ಹೊಸ ಉತ್ಪಾದನಾ ವಿವಿಧ

ಕ್ಷೇತ್ರಗಳನ್ನು ಸೃಷ್ಟಿಸಲು ಹುಡುಕಾಟ ನಡೆಸುತ್ತಿದೆ. ಯಂತ್ರೋಪಕರಣಗಳ ಸ್ಥಾಪನೆ ಹಾಗೂ ಸಲಕರಣೆಗಳ ಪೂರೈಕೆಗೆ ತಾಂತ್ರಿಕ ನೆರವು ನೀಡಲು ಸರಕಾರವು 'ಕೇಂದ್ರೀಯ ಸಣ್ಣ ಕೈಗಾರಿಕಾ ಸಂಸ್ಥೆಯನ್ನು ಸ್ಥಾಪಿಸಿದೆ. ಇದು ತನ್ನ ಸಣ್ಣ ಕೈಗಾರಿಕಾ ಕೇಂದ್ರಗಳು ಹಾಗೂ ವಿಸ್ತರಣಾ ಕೇಂದ್ರಗಳನ್ನು ಹೊಂದಿದ್ದು ಉದ್ಯಮಗಳನ್ನೂ ಸ್ಥಾಪಿಸಲು ಮಾದರಿ ಯೋಜನೆಗಳನ್ನು ತಯಾರಿಸುತ್ತದೆ. ಉತ್ಪಾದನಾ ವಸ್ತುಗಳ ಮಾರಾಟ ಮತ್ತು ಪ್ರಚಾರವನ್ನೂ ಮಾಡಲು ನೆರವು ಹಾಗೂ ಸಲಹೆ ನೀಡುತ್ತಿದೆ. ಗೃಹ ಕೈಗಾರಿಕೆಗಳಲ್ಲಿ ಸಂಶೋಧನೆಗೆ ನೆರವಾಗಲು ಸಣ್ಣ ಕೈಗಾರಿಕೆಗಳ ಸಂಶೋಧನಾ ಅಭಿವೃದ್ಧಿ ಮಂಡಳಿಯನ್ನು ಸ್ಥಾಪಿಸಿದೆ. ಇದರ ನೆರವಿನಿಂದ ಪಾರಂಪರಿಕ ಕಸಬುದಾರರು ಪ್ರಗತಿ ಹೊಂದಬಹುದಾಗಿದೆ.

ಕಸಬುದಾರರಲ್ಲಿ ಸಂಘಟನೆ ಮೂಡಿಸಲು ಹಾಗೂ ಪ್ರಗತಿ ಹೊಂದಲು ಸರಕಾರವೂ ಸತತ ಪ್ರಯತ್ನದಲ್ಲಿದೆ. ಆದರೆ ಕಸಬುದಾರರಲ್ಲಿ ಬಹಳಷ್ಟು ಜನ ಅನಕ್ಷರಸ್ಥರಾಗಿರುವುದರಿಂದ ಅವರನ್ನು ತಲುಪುತ್ತಿಲ್ಲ. ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಗೃಹ ಕೈಗಾರಿಕಾ ಮಂಡಳಿ, ಅಖಿಲ ಭಾರತ ಕರಕುಶಲ ಕೈಗಾರಿಕಾ ಮಂಡಳಿ, ಅಖಿಲ ಭಾರತ ಕೈಮಗ್ಗ ಮಂಡಳಿ, ಕೇಂದ್ರೀಯ ರೇಷ್ಮೆ ಮಂಡಳಿ, ನಾರು ನಿಗಮ ಮಂಡಳಿ ಮುಂತಾದವು ಸಣ್ಣ ಮತ್ತು ಗುಡಿಕೈಗಾರಿಕೆಗಳ ಅಭಿವೃದ್ಧಿಗೆ ಶ್ರಮಿಸುತ್ತಿವೆ.

ಗಾಂಧೀಜಿಯವರ ಕನಸಿನಂತೆ ಬಂಡವಾಳಶಾಹಿಯಿಂದ ಮುಕ್ತವಾಗಿರುವುದೇ ನಿಜವಾದ ಆರ್ಥಿಕ ಸ್ವಾತಂತ್ರ್ಯ, ಆರ್ಥಿಕ ಸಮಾನತೆಯಾಗಿರಬೇಕು. ಬಡವ-ಬಲ್ಲಿದರೆಂಬ, ದಲಿತ-ಬಲಿತರೆಂಬ ಭೇದಭಾವಗಳಿಲ್ಲದೇ ಕಾರ್ಮಿಕ ಅಥವಾ ಕೂಲಿಯವ ಮತ್ತು ಯಜಮಾನ ಇಬ್ಬರೂ ಆರ್ಥಿಕ ವ್ಯವಸ್ಥೆಯ ಸಮಪಾಲುದಾರರಾಗಿಬೇಕು. ಅಂದಾಗ ಮಾತ್ರ ಕಸಬುದಾರ ತನ್ನ ಕಸಬನ್ನು ಮುಂದುವರಿಸಿಕೊಂಡು ಹೋಗಲು ಸಾಧ್ಯವಾಗುತ್ತದೆ.

ಪ್ರಧಾನಿ ಮೋದಿಯವರ ಕನಸಿನ "ಬನ್ನಿ ಭಾರತದಲ್ಲಿ ನಿರ್ಮಾಣ ಮಾಡಿ" (Make in India) ಹಾಗೂ ೨೦೧೫'ರ "ಕೌಶಲ್ಯ ಭಾರತ" (Skill India)ಗಳ ಮೇಲೇ ಪಾರಂಪರಿಕ ಕಸಬುದಾರ ಬೃಹತ್ ನಿರೀಕ್ಷೆಯನ್ನಿರಿಸಿದ್ದಾನೆ.

ಬಹುತೇಕ ಕಸಬುಗಳು ಹಣಕಾಸಿನ ಅಡಚಣೆಯಿಂದಾಗಿ ಮೂಲೆಗುಂಪಾಗುತ್ತಿವೆ. ಭಾರತೀಯ ಸಣ್ಣ ಕೈಗಾರಿಕಾ ಅಭಿವೃದ್ಧಿ ಬ್ಯಾಂಕುಗಳನ್ನು ಸ್ಥಾಪಿಸಿದೆ. ಸಣ್ಣ ಕೈಗಾರಿಕಾ ಅಭಿವೃದ್ಧಿ ನಿಧಿಗಳನ್ನು ಸ್ಥಾಪಿಸಿದೆ. ಸ್ಟೇಟ್ ಬ್ಯಾಂಕುಗಳು, ಗ್ರಾಮೀಣ ಬ್ಯಾಂಕುಗಳು, ಸಹಕಾರಿ ಬ್ಯಾಂಕು/ಸಂಘಗಳೂ ಕಸಬುದಾರರಿಗೆ ಸಾಲ ಸೌಲಭ್ಯ ನೀಡುತ್ತಿವೆ.

ಕುಶಲ ಕಸಬುದಾರರ ಸೃಜನಶೀಲತೆ ಹಾಗೂ ಕಲೆ ಅಳಿಯದಂತೆ ನೋಡಿಕೊಳ್ಳುವುದು ಸಮಾಜದ, ಸರಕಾರದ ಹೊಣೆಯಾಗಿದೆ. ಅಂಥವರನ್ನು ಗುರುತಿಸಿ, ಗೌರವಿಸಿ ಸಾಧ್ಯವಾದಲ್ಲಿ ಪ್ರಶಸ್ತಿ ನೀಡಿ ಪ್ರೋತ್ಸಾಹಿಸಿದರೆ ಪಾರಂಪರಿಕ ಉದ್ದಿಮೆ ಪ್ರಗತಿಯತ್ತ ದಾಪುಗಾಲು ಹಾಕಬಹುದು!

ಬಹುತೇಕ ಪಾರಂಪರಿಕ ಕಸಬುದಾರರು ಕಚ್ಚಾ ವಸ್ತುವಿನ ಪೂರೈಕೆಯಲ್ಲಿನ ಕೊರತೆಯನ್ನು ಎದುರಿಸುತ್ತಿದ್ದಾರೆ. ಅದನ್ನು ನೀಗಿಸಲು ಪ್ರಮುಖವಾದ ಕಚ್ಚಾವಸ್ತುಗಳನ್ನು ಪೂರೈಸಲು ರಾಜ್ಯ ಸಣ್ಣ ಕೈಗಾರಿಕಾ ನಿಗಮಗಳ ಮೂಲಕ ವಿತರಿಸಲು ಕ್ರಮಕೈಗೊಂಡಿದೆ.

ಪಾರಂಪರಿಕ ಕಸಬುದಾರರು ಎದುರಿಸುತ್ತಿರುವ ಮತ್ತೊಂದು ಸಮಸ್ಯೆ ಎಂದರೆ ತಾವು ತಯಾರಿಸಿದ ವಸ್ತುಗಳನ್ನು ಮಾರಾಟ ಮಾಡುವುದು ದುಸ್ತರವಾಗಿದೆ. ಏಕೆಂದರೆ ಬೃಹತ್ ಕೈಗಾರಿಕೆಯ ವಸ್ತುಗಳೊಂದಿಗೆ ಪೈಪೋಟಿ ಎದುರಿಸಲು ಸಮರ್ಥರನ್ನಾಗಿಸುವ ಕಾರ್ಯಕ್ರಮವನ್ನೂ ಹಾಕಿಕೊಂಡಿದೆ. ರಾಷ್ಟ್ರೀಯ ಸಣ್ಣ ಕೈಗಾರಿಕಾ ನಿಗಮ ಮಾರುಕಟ್ಟೆ ಸೌಲಭ್ಯವನ್ನು ಒದಗಿಸುತ್ತದೆ.

ಗ್ರಾಮೀಣ ಪ್ರದೇಶದಲ್ಲಿ ಗುಡಿಕೈಗಾರಿಕೆಗಳ ಉತ್ತೇಜನಕ್ಕಾಗಿ ಗ್ರಾಮೀಣ ಕೈಗಾರಿಕಾ ಯೋಜನೆ ಹಾಗೂ ಕುಶಲಕರ್ಮಿ ಯೋಜನೆಯನ್ನು ಜಾರಿಗೆ ತಂದಿದೆ. ನಿರಂತರ ವಿದ್ಯುತ್ ಪೂರೈಕೆ ಯೋಜನೆಯ್ನು ಜಾರಿಗೆ ತಂದಿದೆ.  ಕಸಬುದಾರರು ಸ್ವಾವಲಂಬಿಗಳಾಗಲು ಜಿಲ್ಲಾ ಕೈಗಾರಿಕಾ ಕೇಂದ್ರಗಳನ್ನು ಸ್ಥಾಪಿಸಿದೆ.

ಗ್ರಾಮೀಣ ಪ್ರದೇಶದಲ್ಲಿ ಸ್ವಉದ್ಯೋಗ ಕೈಗೊಳ್ಳಲು ಮತ್ತುಸಮುದಾಯದ ಸೇವೆ ಮಾಡಲು ಯುವ ಜನತೆಗೆ ಉತ್ತೇಜನ ನೀಡಲು ಗ್ರಾಮೀಣಾಭಿವೃದ್ಧಿ ಯೋಜನೆಯಲ್ಲಿ ರಾಜ್ಯ ಸರ್ಕಾರವು ಹಲವಾರು ಕಾರ್ಯಕ್ರಮಗಳನ್ನು ಘೋಷಿಷಿದೆ. ರಾಷ್ಟ್ರೀಕೃತ ಹಾಗೂ ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳು ಗಾಮೀಣ ಪ್ರದೇಶದಲ್ಲಿ ಗ್ರಃ ಮತ್ತು ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಹಣಕಾಸಿನ ನೆರವನ್ನು ನೀಡುತ್ತಿವೆ.

ಇತ್ತೀಚಿನ ದಿನಗಳಲ್ಲಿ ನಮ್ಮ ರಾಜ್ಯವು ಜಾನಪದ ಜ್ಞಾನವನ್ನು ಮರುಶೋಧಿಸುತ್ತಿದೆಯೆಂದರೆ ತಪ್ಪಾಗದು. ಜನತೆಗೆ ನಮ್ಮ ನಾಡಿನ ಸಂಸ್ಕೃತಿ, ವೈಭವವನ್ನು ಪರಿಚಯಿಸುವ ಧ್ಯೇಯೋದ್ದೇಶವನ್ನು ಹೊಂದಿರುವ ಜಾನಪದ ಉತ್ಸವ, ಜಾನಪದ ಜಾತ್ರೆ, ಜಿಲ್ಲಾ ಉತ್ಸವ, ಗಡಿನಾಡು ಉತ್ಸವ, ಕರಾವಳಿ ಉತ್ಸವ, ಚಾಲುಕ್ಯ ಉತ್ಸವ, ಹಂಪಿ ಉತ್ಸವ,

ಕದಂಬೋತ್ಸವ ಹಾಗೂ ಜಾನಪದ ಮೇಳಗಳಲ್ಲಿ ನಮ್ಮ ಪಾರಂಪರಿಕ ಕಸಬುಗಳ ಉತ್ಪಾದನಾ ವಸ್ತುಗಳ ಪ್ರದರ್ಶನ ಹಾಗೂ ಮಾರಾಟ ವ್ಯವಸ್ಥೆಯನ್ನು ಇನ್ನೂ ವ್ಯವಸ್ಥಿತವಾಗಿ ಕಲ್ಪಿಸಬೇಕಾಗಿದೆ.

ಜನಪದರ ಅಭಿಲಾಷೆಗಳು ಹಿಂದಿನ ಸಂಸ್ಕೃತಿಗೆ ಅನುಗುಣವಾಗಿದ್ದಾಗ ಪಾರಂಪರಿಕ ಕಸುಬುದಾರರ ಸಾಮಾಜಿಕ ಜೀವನಮಟ್ಟ ಉತ್ತಮವಾಗಿಯೇ ಇತ್ತು. ಸಾಮಾಜಿಕ ಜೀವನದಲ್ಲಿ ಕಸುಬುದಾರರಿಗೆ 'ಉತ್ತಮ'ವಾದ ಹಾಗೂ ಅವರಿಗೆಂದೇ 'ಮೀಸಲಾದ ಸ್ಥಾನ'ವಿತ್ತು. ಆ ಸ್ಥಾನವು ಪವಿತ್ರ ಮನೋಭಾವನೆಯನ್ನೂ ಹೊಂದಿದ್ದನ್ನು ಜನಪದರ ಚಾರಿತ್ರಿಕ ಅಧ್ಯಯನದಿಂದ ತಿಳಿದುಕೊಳ್ಳಬಹುದಾಗಿದೆ. ಆಯಗಾರಿಕೆ, ವಸ್ತುವಿನಿಮಯ ಪದ್ಧತಿಯ ಸಂದರ್ಭದಲ್ಲಿ ಅವರ ಆರ್ಥಿಕಸ್ಥಿತಿ ಕೂಡಾ ಉತ್ತಮವಾಗಿತ್ತು.

ಆದರೆ..... ಈಗೀಗ ಇಲ್ಲಿ ಉತ್ಪಾದನೆಯಾದ ವಸ್ತುಗಳು ಅನುಭೋಗಿಗಳನ್ನು ಹುಡುಕಿಕೊಂಡು ಹೋಗಲೇ ಬೇಕಿದೆ. ಕಸಬುದಾರರು ಉತ್ಪಾದಿಸಿದ ವಸ್ತುಗಳು ಗ್ರಾಹಕರಿಗೆ ಆಕರ್ಷಣೀಯವಾಗಿ ಮಾತುಗಾರಿಕೆಯ ಮೋಡಿಯ ಮೂಲಕ ಸರಕು ಮಾರಾಟ ಮಾಡಬೇಕಾಗಿದೆ. ಕಸಬುದಾರರ ವಸ್ತುಗಳ ಉತ್ಪಾದನೆಯಲ್ಲಿ ಹಣರೂಪಿ ವೆಚ್ಚಕ್ಕಿಂತ ನೈಜ ವೆಚ್ಚ ಅಧಿಕವಾಗಿರುತ್ತದೆ.

ಇಂದು ದೂರದರ್ಶನ, ಗಣಕಯಂತ್ರ, ಬಾನುಲಿ, ಅಂತರ್ಜಾಲ, ಚಲನಚಿತ್ರ, ವೃತ್ತ ಪತ್ರಿಕೆ ಮುಂತಾದ ಪ್ರಭಾವಿ ಸಮೂಹ ಮಾಧ್ಯಮಗಳು ಒಂದಲ್ಲ ಒಂದು ವಿಧದಲ್ಲಿ ಸಮಾಜವನ್ನು ಆಳುತ್ತಿವೆ. ಈ ಸಮೂಹ ಮಾಧ್ಯಮಗಳ ಮೂಲಕ ಕಸಬುದಾರರಿಗೆ ಅವರ ಜೀವನಮಟ್ಟ ಹಾಗೂ ಉತ್ಪಾದನೆ ಹೆಚ್ಚಿಸಲು ಕೇಂದ್ರ ಸರ್ಕಾರವು ಘೋಷಿಸಿರುವ ಯೋಜನೆಗಳನ್ನು ಜಾರಿಗೆ ತಂದು ಉದೇಶಿತ ಗುರಿಗಳನ್ನು ಸಾಧಿಸುವ ಕಾರ್ಯವನ್ನೂ ಕರ್ನಾಟಕ ಸರ್ಕಾರ ಮಾಡುತ್ತಲೇ ಇದೆ ಎಂಬುದನ್ನು ಮನವರಿಕೆ ಮಾಡಬೇಕಿದೆ. ಪಾರಂಪರಿಕ ಕಸಬುಗಳು ಇನ್ನೂ ಸಂಪ್ರದಾಯದೊಂದಿಗೆ ಬೆರೆತಿವೆ; ಆರ್ಥಿಕ ಸ್ಥಿತಿ ಉತ್ತಮಪಡಿಸುತ್ತವೆ; ಪರಿಣಿತಿಯನ್ನು ಪ್ರದರ್ಶಿಸುತ್ತವೆ ಎಂಬ ನಿಲುವಿಗೆ ಪಾರಂಪರಿಕ ಕಸಬುದಾರ ಬರಬೇಕಾಗಿದೆ. ಆದಾಗ್ಯೂ "ಇಂದಿಗೂ ಸರಾಸರಿ ಪ್ರತಿಶತ ೨೬ ರಷ್ಟು ಜನರಿಗೆ ಓದಲು, ಬರೆಯಲು ಬಾರದು. ಇದರಲ್ಲಿ ಕಸಬುದಾರರ ಪಾಲೂ ಇದೆ! ಗ್ರಾಂಥಿಕ ಮತ್ತು ಉನ್ನತ ಮಟ್ಟದ ಸಾಹಿತ್ಯಕ ಭಾಷೆಯನ್ನು ಬಳಸುತ್ತಿರುವ ಸಮೂಹ ಮಾಧ್ಯಮಗಳು ನೀಡುವ ಸಂದೇಶಗಳನ್ನು ಗ್ರಹಿಸಲು ಇಂತಹ ಜನರು ಅಸಮರ್ಥರಾಗಿದ್ದಾರೆ. ಆದರೆ...

ಅದೇ ಜನರಿಗೆ, ಅದೇ ಸಂದೇಶವನ್ನು, ಅವರದ್ದೇ ಆದ ಪಾರಂಪರಿಕ ಮಾಧ್ಯಮದ ಮೂಲಕ ಹೇಳಿದಾಗ ಸ್ಪಷ್ಟವಾಗಿ ಅರ್ಥೈಸಿಕೊಳ್ಳುವರು."[೧೫] ಆದರೆ... ಈ ಪಾರಂಪರಿಕ ಮಾಧ್ಯಮವು ಆಧುನಿಕ ಸಮೂಹ ಮಾಧಯಮಗಳ ಮೂಲಕ ಗ್ರಾಮೀಣ ಭಾಗದ ಕಸಬುದಾರರ ಮನ-ಮನೆಗೂ ತಲುಪಬೇಕಾದ ಅನಿವಾರ್ಯತೆ ಇದೆ. ಗ್ರಾಮಾಂತರ ಪ್ರದೇಶದ ಅನಕ್ಷರಸ್ಥ ಕಸಬುದಾರರ ಹೃದಯವನ್ನು ಪಾರಂಪರಿಕ ಜನಪದ ಕಲಾ ಮಾಧ್ಯಮ ಮಾತ್ರ ತಟ್ಟಲು ಸಾಧ್ಯವಿದೆಯೇ ಹೊರತು ಆಧುನಿಕ ಪಾಪ್ ಮತ್ತು ರಾಪ್ ಸಂಗೀತಗಳಲ್ಲ ಎಂಬುದಂತೂ ಸ್ಪಷ್ಟ!

ನೇಕಾರರ ಉತ್ಪಾದನೆಯ ಜವಳಿ ಮಾರಾಟದ ವ್ಯವಸ್ಥೆಗಳು ಗುಜರಾತ, ಮಹಾರಾಷ್ಟ್ರದಲ್ಲಿರುವಂತೆ ನಮ್ಮ ರಾಜ್ಯದಲ್ಲಿಯೂ 'ಕಪಡ ಮಾರ್ಕೆಟ್' ನಿರ್ಮಾಣಗೊಳ್ಳಬೇಕು. ಪ್ರತ್ಯೇಕ ಮಾರುಕಟ್ಟೆ ಇರುವೆಡೆ, ಸಗಟು ವ್ಯಾಪಾರಸ್ಥರು ನೇರವಾಗಿ ಖರೀದಿಗೆ ಬರುವುದಕ್ಕೆ ಅವಕಾಶವಾಗುತ್ತದೆ. ಸಾಂಪ್ರದಾಯಿಕ ಬಟ್ಟೆಗಳ ಜನಾಕರ್ಷಣೆಗೆ ಸರ್ಕಾರ ಪ್ರಸಾರ, ಪ್ರದರ್ಶನ ಇತ್ಯಾದಿ ಪ್ರಚಾರದ ಕ್ರಮಕೈಗೊಳ್ಳಬೇಕು. ಹೊರದೇಶದಲ್ಲಿರುವ ನಮ್ಮ ಸಂಪ್ರದಾಯಸ್ಥರಿಗೆ ನೇಕಾರರಿಂದ ಉತ್ಪಾದಿಸಿ ಮಾರಾಟ ಮಾಡುವ ಹೊಣೆಯನ್ನು ಕೈಮಗ್ಗಗಳ ಅಭಿವೃದ್ಧಿ ನಿಗಮ ಕ್ರಮಕೈಗೊಳ್ಳಬೇಕು.

"I wear Hand loom" (ನಾನು ಕೈಮಗ್ಗದ ಬಟ್ಟೆ ಧರಿಸುತ್ತೇನೆ.) ಎಂದು ಕೇಂದ್ರದ ನೂತನ ಜವಳಿ ಸಚಿವೆ ಸ್ಮೃತಿ ಇರಾನಿ ಬಿಹಾರದ ರೇಷಿಮೆ ಸೀರೆ ಧರಿಸಿದ ತಮ್ಮ ಚಿತ್ರದ ದಹಿತ ಟ್ವಿಟರ್ ಪ್ರಚಾರಾಂದೋಲನ ಶುರು ಮಾಡಿದ್ದು ದೊಡ್ಡ ಸದ್ದು ಮಾಡಿದ್ದಷ್ಟೇ ಅಲ್ಲ; ಅವರ ಹ್ಯಾಷ್ ಟ್ಯಾಗ್ ಟ್ವಿಟರ್ ಆಂದೋಲನಕ್ಕೆ ಘಟಾನುಘಟಿಗಳಿಂದಷ್ಟೇ ಅಲ್ಲ; ದೇಶದ ಮೂಲೆ ಮೂಲೆಗಳಿಂದ ಉತ್ತಮ ಪ್ರತಿಕ್ರಿಯೆಯೂ ಸಿಕ್ಕಿತು.

ಹೀಗೆಯೇ ಭಾರತದ ಕೈಮಗ್ಗ ಉದ್ಯಮ ಜಾಗತಿಕ ಮಟ್ಟದಲ್ಲಿ ಗುರುತಿಸಿಕೊಳ್ಳುವಂತೆ ಕೈಮಗ್ಗದ ಉತ್ಪನ್ನಗಳನ್ನು ಯುವ ಸಮೂಹದಲ್ಲಿ ಜನಪ್ರಿಯಗೊಳಿಸುವ ಸಲುವಾಗಿ ಪ್ರಚುರಪಡಿಸಲು ಚಲನಚಿತ್ರ ರಂಗಕ್ಕೆ ಪ್ರಧಾನಿ ಮೋದಿಯವರು ಮನವಿ ಮಾಡಿದ್ದರು.

"I thank Soniya Gandhi is the country's most stylish politician. But that's because she's inherited the best collection of saris from her mother-in-law. I'm also happy that, she supports the INDIAN HAND LOOM industry with her selection." ಎಂದು ವಿನ್ಯಾಸಕಾರ ಪ್ರಸಾದ ಬಿದ್ದಪ್ಪರವರು

ಪ್ರಶಂಸಿದ್ದೂ ಶ್ಲಾಘನೀಯ. ಹೀಗೆ ದೇಶದ ಪ್ರಮುಖ ನಾಯಕ-ನಾಯಕಿಯರು ಕೈಮಗ್ಗದ ಉತ್ಪನ್ನಗಳ ಬಳಕೆ ಉತ್ತೇಜಿಸಿದರೆ, ನಮ್ಮ ಬಳಲಿದ ನೇಕಾರರ ಬದುಕಿನಲ್ಲಿ ಆಶಾಕಿರಣ ಮೂಡಬಹುದು.

ವಿಶಾಲವಾದ ಮಾರುಕಟ್ಟೆಯ ಅವಕಾಶದಿಂದ ವಂಚಿತರಾದ, ಮಧ್ಯವರ್ತಿಗಳ ಶೋಷಣೆಗೆ ಒಳಗಾದ, ನ್ಯಾಯಯುತ ಬೆಲೆ ಸಿಗದೆ ನಿರಾಶರಾದ ಗ್ರಾಮೀಣ ಪ್ರದೇಶದ ನೇಕಾರರು ಹಾಗೂ ಕರಕುಶಲ ಕಲಾವಿದರಿಗೆ ನೆರವಾಗುವ ಸದುದ್ದೇಶದೊಂದಿಗೆ ನವೋದ್ಯಮಕ್ಕೆ ಕೈ ಹಾಕಿರುವ ಸಿಕ್ಕಿಂ ಮೂಲದ ಬೆಂಗಳೂರಿಗ ಕರ್ಮಾ ಭೂಟಿಯಾ ಇದೀಗ ಸ್ಟಾರ್ಟ್‌ಅಪ್ 'ಐಷಿಪ್ಪೊ ಡಾಟ್ ಕಾಂ' ಪ್ರಾರಂಭಿಸಿದ್ದಾರೆ! ಜ'ಗತ್ತಿನ' ಪ್ರತಿಯೊಂದು ಸರಕಿಗೆ ಮಾರುಕಟ್ಟೆ ಒದಗಿಸಿ ವಿಶ್ವದ ಮೂಲೆ ಮೂಲೆಯಲ್ಲಿರುವ ಖರೀದಿದಾರರು ಮತ್ತು ವಿನ್ಯಾಸಕರಿಗೆ ಸ್ಥಳೀಯ ಕಲಾವಿದರು ಹಾಗೂ ನೇಕಾರರ ಜೊತೆ ನೇರ ಸಂಪರ್ಕ ಕಲ್ಪಿಸಿ ವಹಿವಾಟು ವಿಸ್ತರಣೆಗೆ ನೆರವಾಗಿದೆ. ಐಷಿಪ್ಪೊ ಡಾಟ್ ಕಾಂನಲ್ಲಿ ಕುಷ್ಟಗಿ ಪರಿಸರದ ಇಳಕಲ್ಲ ಸೀರೆಯೂ ಆನ್ ಲೈನ್ ಮಾರುಕಟ್ಟೆಯಲ್ಲಿ ಜಾಗ ಪಡೆದಿದೆ!! ಹಾಗೆಯೇ ಇದೇ 'ಐಷಿಪ್ಪೊ ಡಾಟ್ ಕಾಂ'ನಲ್ಲಿ ಕುಷ್ಟಗಿ ಪರಿಸರದ ಕಿನ್ನಾಳ ಕಿಟ್ಟದ ಬೊಂಬೆಗಳು, ಗುಳೇದ ಗುಡ್ಡದ ಖಣ, ಕಮತಗಿಯ ರುಮಾಲು, ಹನಮಸಾಗರದ ಕೌದಿ ಮುಂತಾದ ಪಾರಂಪರಿಕ ಕಸಬುಗಳಿಗೂ ಸ್ಥಾನ ಸಿಕ್ಕರೆ... ಕಸಬು ನಂಬಿದವರ ಬದುಕಿಗೆ ಇಂಬು ನೀಡಿದಂತಾಗುತ್ತದೆ.

ಸರಕುಗಳ ತಯಾರಿಕೆಗೆ ಹಣದ ಕೊರತೆ ಎದುರಾದಾಗ ಅವರಿಗೆ ಸುಲಭವಾಗಿ ಕೇಂದ್ರ ಜವಳಿ ಸಚಿವಾಲಯದಿಂದ 'ಮುದ್ರಾ ಯೋಜನೆ'ಯಡಿ ಬ್ಯಾಂಕ್ ಸಾಲ ದೊರೆಯಲು ಅಗತ್ಯವಾದ ಶಿಫಾರಸ್ಸನ್ನೂ 'ಐಷಿಪ್ಪೊ ಡಾಟ್ ಕಾಂ'ನವರು ಮಾಡುತ್ತಾರೆ.

೬೦ ಕ್ಕೂ ಹೆಚ್ಚು ನೇಕಾರರಿರುವ ಬಡಾವಣೆಗಳನ್ನು 'ಗುಡಿ ಕೈಗಾರಿಕೆ ಬಡಾವಣೆ'ಗಳೆಂದು ಗುರುತಿಸುವ ಮೂಲಕ ನೇಕಾರಿಕೆಗೆ ಪ್ರೋತ್ಸಾಹಿಸುವ ಕಾಯಿದೆಯನ್ನು ರೂಪಿಸಲು ಜವಳಿ ಇಲಾಖೆ ಚಿಂತಿಸುತ್ತಿದೆ. ಅವರಿಗೆ ಕಡಿಮೆ ಶಬ್ಧ ಮಾಡುವ ಮತ್ತು ಕಡಿಮೆ ವಿದ್ಯುತ್ ಬೇಡುವ ಮಗ್ಗಗಳನ್ನು ನೀಡಲು ಯೋಜನೆಯೂ ಸಿದ್ಧಗೊಳ್ಳುತ್ತಿದೆ.

ಸರ್ಕಾರದಿಂದ ಬಟ್ಟೆಗಳನ್ನು ವಿತರಿಸಲಾಗುವ ಎಲ್ಲ ಯೋಜನೆಗಳಿಗೂ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ (ಪ್ರಿಯದರ್ಶಿನಿ) ಮೂಲಕ ಪೂರೈಸಯವ ವ್ಯವಸ್ಥೆ ಕಲ್ಪಿಸುವುದರ ಮೂಲಕ ನೇಕಾರರಿಗೆ ನೇರ ಮಾರುಕಟ್ಟೆ ಒದಗಿಸುವುದು.

ಅತ್ಯಂತ ವೇಗದಲ್ಲಿ ಗ್ರಾಮೀಣ ಜನರನ್ನೂ ಒಳಗೊಂಡಂತೆ ಭಾರತೀಯರ ದೈನಂದಿನ ಬದುಕಿನಲ್ಲಿ ಪಸರಿಸಿ, ಬದುಕಿನ ಎಲ್ಲಾ ರಂಗಗಳಿಗೂ ಹರಡಿ, ನೈಸರ್ಗಿಕ ಸಂಪತ್ತಿನ ಶೋಷಣೆಗೆ ದಾರಿ ಮಾಡಿ, ಏಕಮುಖ ಸಂಸ್ಕೃತಿಗೆ ತಳ್ಳಿ, ಸಮಾನತೆಯ ನೆಲೆಯ ಮೇಲೆ ಮಾರುಕಟ್ಟೆ ವ್ಯವಸ್ಥೆಯನ್ನು ಸ್ಥಾಪಿಸಲು ಹೊರಟಿರುವ ಜಾಗತೀಕರಣದ ಮೂಲ ಬೇರು ಆಧುನೀಕರಣಕ್ಕೆ ಪರ್ಯಾಯ ಸಾಧ್ಯತೆಗಳನ್ನು ಹುಡುಕಬೇಕಿದೆ! ಭಾರತದಂತಹ ನೆಲೆದಲ್ಲಿ ನಮ್ಮ ಪೂರ್ವಜರು ಅಳವಡಿಸಿಕೊಂಡಿದ್ದ ಬಹುಸಂಸ್ಕೃತಿಯ ಸರಳ ಜೀವನ, ನೈಸರ್ಗಿಕ ಸಂಪತ್ತಿಗೆ ಧಕ್ಕೆಯಾಗದಂತೆ ಅಳವಡಿಸಿಕೊಂಡಿದ್ದ ಪಾರಂಪರಿಕ ಕಸಬುಗಳ ಜ್ಞಾನಪರಂಪರೆಗಳು ಇಂದಿನ ಕೊಳ್ಳುಬಾಕ ಸಂಸ್ಕೃತಿಗೆ ಕಡಿವಾಣ ಹಾಕಬಲ್ಲವು!

ಹಾಗೆ ನೋಡಿದರೆ ಶ್ರೀಮಂತರು ಶ್ರೀಮಂತರಾಗುವ, ಬಡವರು ಬಡವರಾಗಿಯೇ ಮುಂದುವರೆಯುವ ಆಧುನೀಕರಣ ಹಾಗೂ ಜಾಗತೀಕರಣ ವ್ಯವಸ್ಥೆಯನ್ನು ಬದಲಿಸಿ, ಸಮಾಜವಾದಿ ತಳಹದಿಯ ಮೇಲೆ ಪ್ರಜಾಪ್ರಭುತ್ವ ಮಾದರಿಯನ್ನು ಜಾರಿಗೆ ತರಬೇಕು; ಕಾಯಕ ಸಂಸ್ಕೃತಿ ಉಳಿಯಬೇಕು. ದುಡಿಯು ವರ್ಗಗಳಿಗೆ ಜಾತಿ ಪದ್ಧತಿ, ಪಾಳೇಗಾರಿ ಪದ್ಧತಿ ಹಾಗೂ ಗ್ರಾಮ ಜೀವನ ಪದ್ಧತಿಗಳ ಬಗ್ಗೆ ಅನುಮಾನಗಳಿವೆ. ಇವುಗಳನ್ನು ಹೋಗಲಾಡಿಬೇಕೆಂದು ಹಲವಾರು ಚಿಂತಕರ ಚಿಂತನೆಯು ಇಂದಿನ ಅವಶ್ಯಕತೆಗಳಲ್ಲೊಂದಾಗಿದೆ.

ಭಾರತದಲ್ಲಿ ಬಹರಾಷ್ಟ್ರೀಯ ಕಂಪನಿಗಳ ಉದಾರತೆಯ ನಡುವೆಯೂ ಸ್ಥಳೀಯರ ಉದ್ಯೋಗಕ್ಕೆ ಭದ್ರತೆ ಒದಗಿಸುವ ಕಾನೂನಿನ ಜರೂರತ್ತಿದೆ. ವಿದೇಶಿ ಬಂಡವಾಳ ಹೂಡಿಕೆಗೆ ಅವಕಾಶ ಕಲ್ಪಿಸಿಕೊಟ್ಟಿದ್ದರೂ, ಉದ್ಯೋಗಗಳ ನೇಮಕಾತಿಯಲ್ಲಿ ಭಾರತ ಸರ್ಕಾರದ ಅಥವಾ ಆಯಾ ರಾಜ್ಯ ಸರ್ಕಾರಗಳ ಅನುಮತಿಯಂತೆ ನಡೆಯುವ ಕಾನೂನು ಕಡ್ಡಾಯಗೊಳೀಸಬೇಕಿದೆ. ಅಲ್ಲದೇ ಸರ್ಕಾರದ ವತಿಯಿಂದ 'ಸೇವಾ ನಿಗಮ'ವೊಂದನ್ನು ಸ್ಥಾಪಿಸಿ, ಕಸಬುಗಳಲ್ಲಿ ವಿಶೇಷ ಪರಿಣಿತಿ ಹೊಂದಿದ ಕಸಬುದಾರರನ್ನು ಈ ನಿಗಮದ ಮೂಲಕವೇ ನೇಮಕ ಮಾಡಿಕೊಳ್ಳಬೇಕು ಹಾಗೂ ಅವರಿಗೆ ಇನ್ನೂ ಹೆಚ್ಚಿನ ತರಬೇತಿ ನೀಡಿ ಬಳಸಿಕೊಳ್ಳಬೇಕು!

ಎಲ್ಲದಕ್ಕೂ ಪಶ್ಚಿಮ ದೇಶಗಳನ್ನು ಅನುಕರಿಸುವ ನಮ್ಮ ಚಾಳಿಯನ್ನು ಬಿಡಬೇಕಷ್ಟೆ. ಆರೋಗ್ಯಕರ ರೀತಿಯಲ್ಲಿ ಯಂತ್ರಗಳನ್ನು ಕಳಚುವುದು ಭಾರತ ದೇಶಕ್ಕೆ ಖಂಡಿತಾ ಸಾಧ್ಯವಿದೆ. ಯಂತ್ರ ನಾಗರೀಕತೆಯಿಂದಾಗಿ ಮೂಲೆಗುಂಪಾಗಿದ್ದ ನಮ್ಮ ಪಾರಂಪರಿಕ ಕೃಷಿ

ಪದ್ಧತಿ, ಗ್ರಾಮೀಣ ಕುಶಲಕರ್ಮ, ಅತಿಸಣ್ಣ ಕೈಗಾರಿಕೆಗಳು ಹಾಗೂ ದೇಸಿ ಜೀವನ ಪದ್ಧತಿಯು ನಮ್ಮಲ್ಲಿ, ಆಶ್ಚರ್ಯಕರ ರೀತಿಯಲ್ಲಿ ಈಗಲೂ ಜೀವಂತ ಉಳಿದಿದೆ; ಏಟು ತಿಂದಿದೆ, ಬಳಲಿದೆ, ಬಡವಾಗಿದೆ ಆದರೆ ಉಳಿದು ಬಂದಿದೆ. ಭಾರತದ ಪಾರಂಪರಿಕ ಕೈಗಾರಿಕೆಗಳು ನಮ್ಮ ನಿಜವಾದ ಸಂಪತ್ತಾಗಿದೆ.

"ವಿಚಿತ್ರ ನೋಡಿ! ಇಪ್ಪತ್ತನೆಯ ಶತಮಾನದುದ್ದಕ್ಕೂ, ಭಾರತ ದೇಶದ ಕೊರಳಿಗೆ ಕಟ್ಟಿದ ಕಲ್ಲು ಎಂಬ ಬೈಗುಳಕ್ಕೆ ಪಕ್ಕಾಗಿದ್ದ ಪಾರಂಪರಿಕ ಉತ್ಪಾದನಾ ರಂಗಗಳು, ಆರ್ಥಿಕ ಹಿಂಜರಿತದ ನೇರ ಹೊಡೆತದಿಂದ ತಪ್ಪಿಸಿಕೊಂಡಿದೆ. ಇಷ್ಟು ದಿನ, ಕೈಗಾರಿಕಾ ಕ್ರಾಂತಿ, ಹಸಿರು ಕ್ರಾಂತಿ, ವಿಶ್ವ ಮಾರುಕಟ್ಟೆ ಇತ್ಯಾದಿ ಮಂತ್ರ ಪಠಿಸುತ್ತಿದ್ದ ರಾಜಕಾರಣಿಗಳೂ ಸಹ ಮತ್ತೊಮ್ಮೆ 'ಒಳ ಬೆಳವಣಿಗೆ'(Inclusive Growth) ಯ ಬಗ್ಗೆ ಮಾತನಾಡತೊಡಗಿದ್ದಾರೆ."[೧೬] ಭಾರತದ ವಿಶೇಷ ಪರಿಸ್ಥಿತಿಯಿಂದಾಗಿ ಯಂತ್ರಗಳನ್ನು ಕಳಚುವ ಆಂದೋಲನಕ್ಕೆ ನಾಯಕತ್ವ ನೀಡುವುದು, ಮುಂಚೂಣಿಯಲ್ಲಿ ನಿಲ್ಲುವುದು ನಮಗೆ ಖಂಡಿತಾ ಸಾಧ್ಯವಿದೆ. ವ್ಯವಸಾಯ ಪ್ರಧಾನ ರಾಷ್ಟ್ರವಾಗಿರುವ ಭಾರತದಲ್ಲಿ ಕೃಷಿಯು ಒಂದು ಋತುಮಾನ ಕಸಬು; ಹೀಗಾಗಿ ಇಲ್ಲಿ ಆರೇಳು ತಿಂಗಳು ಅರೆನಿರುದ್ಯೋಗ ತೀರಾ ಸಾಮಾನ್ಯ. ಇವತ್ತಿಗೂ ನಮ್ಮ ಗ್ರಾಮಗಳ ಈ ಸಮಸ್ಯೆ ಇನ್ನೂ ಬದಲಾಗಿಲ್ಲ. ಗ್ರಾಮಗಳ ಬದುಕು ಬಹುತೇಕ ಕೃಷಿಯೇತರ ಸಮುದಾಯಗಳ ದುಡಿಮೆಯಿಂದಲೇ ಸಾಗಿದೆ. ಇವರಿಲ್ಲದೆ ಕೃಷಿಯೂ ಸಾಗದು; ಉದ್ದಿಮೆಯೂ ಸಾಗದು. ಕೂಲಿಕಾರನಿಲ್ಲದ ಕೃಷಿಯಲ್ಲಿ, ಕೃಷಿ ಚಟುವಟಿಕೆಗಳು ಕಡಿಮೆಯಿರುವ ಋತುಗಳಲ್ಲಿ ದುಡಿಯುವ ಜನರಿಗೆ ಪೂರಕ ಉದ್ಯೋಗ ಒದಗಿಬಲ್ಲವು ಪಾರಂಪರಿಕ ಕಸಬುಗಳು.

ಪಾಶ್ಚಿಮಾತ್ಯ ಮಾದರಿಗಳನ್ನು ಅಂಧಾನುಕರಣೆ ಮಾಡುವ ಬದಲು, ನಮ್ಮ ನಮ್ಮ ನೆಲದ ಸಂಸ್ಕೃತಿಗಳಿಂದ ಪುನಶ್ಚೇತನ ಪಡೆದು ಸಂಸ್ಕೃತಿ–ಸಂಪ್ರದಾಯ, ಆಹಾರ–ಪಾನೀಯ, ಉಡುಗೆ–ತೊಡುಗೆ, ಹಾಸಿಗೆ–ಹೊದಿಕೆ, ತಿನಿಸು–ದಿನಿಸು, ಕಚ್ಚಾವಸ್ತುಗಳು–ಸಿದ್ಧವಸ್ತುಗಳು ಅಭಿರುಚಿಗೆ ತಕ್ಕಂತೆ ಆಧುನೀಕರಣದ ಸೂತ್ರಗಳನ್ನು ಪಳಗಿಸಿ ಅಳವಡಿಕೊಳ್ಳಬೇಕು. ಅಂದಾಗ ಮಾತ್ರ ನಮ್ಮ ಪಾರಂಪರಿಕ ಕಸಬುಗಳಿಗೆ ಒಂದು ನೆಲೆ–ಬೆಲೆ ಸಿಕ್ಕಂತಾಗುತ್ತದೆ.

ಇಲ್ಲಿಯವರೆಗೆ ಸುಖದಿಂದ ಬಾಳು ನೂಕಿದ್ದ ಪಾರಂಪರಿಕ ಅಥವಾ ಕುಲಕಸಬುದಾರರು ಆಧುನೀಕರಣ ಮತ್ತು ಜಾಗತೀಕರಣದಿಂದಾಗಿ ಉದ್ಯೋಗವಿಲ್ಲದೆ ಜೀವನದ ಮೇಲೆ ಜಿಗುಪ್ಸೆಗೊಂಡ ಕಸಬುದಾರರು ಅನ್ಯ ಕೆಲಸದಲ್ಲಿ

ತೊಡಗಿಕೊಂಡಿರುವುದು ಪ್ರತಿಭಾ ಪಲಾಯನವಾದಂತೆ! ಇವರ ಬದುಕಿಗೆ ಉತ್ಸಾಹ ಮೂಡಿಸಬೇಕಾಗಿದೆ. ಕಡಿಮೆ ಬಡ್ಡಿದರದಲ್ಲಿ ಸಾಲ ಸೌಲಭ್ಯ ಒದಗಿಸಿ ಕಚ್ಚಾ ವಸ್ತುವಿನ ಮೇಲೆ ರಿಯಾಯಿತಿ ನೀಡುವ ವ್ಯವಸ್ಥೆ ಮಾಡಿದರೆ ಮಾತ್ರ ಗುಳೆ ಹೋದ ಹಾಗೂ ಅನ್ಯ ಕೆಲಸಕ್ಕೆ ಅಂಟಿಕೊಂಡಿರುವ ಕುಶಲ ಕಸಬುದಾರರು ಮತ್ತೆ ಮರಳುತ್ತಾರೆ, ಅಳಿದು ಹೋಗಲಿರುವ ಪಾರಂಪರಿಕ, ಕುಶಲ ಕಸಬುಗಳು ಜೀವಂತ ಉಳಿಯುತ್ತವೆ.

ಭಾರತದಂತಹ ಬಹುಮುಖಿ ಸಂಸ್ಕೃತಿ-ಸಮುದಾಯಗಳ ಸಂಪ್ರದಾಯಗಳನ್ನು ಹೊಂದಿರುವ ದೇಶದಲ್ಲಿ ಸಿದ್ಧಾಂತಗಳನ್ನು ಪ್ರತಿಪಾದಿಸುವುದು, ಉಪದೇಶಗಳನ್ನು ನೀಡುವುದು ತುಂಬಾ ಸುಲಭ; ಆಚರಣೆಗೆ ತರುವುದು ದೊಡ್ಡ ಸವಾಲಿನ ಕೆಲಸ. ಏಕೆಂದರೆ ನಮ್ಮಲ್ಲಿರುವ ಅತ್ಯಮೂಲ್ಯವಾದ ಹಾಗೂ ಹೇರಳವಾಗಿರುವ ಪ್ರಾಕೃತಿಕ ಸಂಪನ್ಮೂಲವನ್ನು ಸಮರ್ಪಕವಾಗಿ ಬಳಸಿಕೊಳ್ಳುವಲ್ಲಿ ನಾವು ಪದೇ ಪದೇ ವಿಫಲರಾಗುತ್ತಿದ್ದೇವೆ. ನಮ್ಮ ಸಾಮರ್ಥ್ಯದ ಅರಿವು ನಮಗೇ ಇರುವುದಿಲ್ಲ! ಗ್ರಾಮ ಭಾರತ ಅಭಿವೃದ್ಧಿಯಾಗದ ಹೊರತು, ಅನಕ್ಷರತೆ, ಬಡತನ ನಿವಾರಣೆಯಾಗದ ಹೊರತು, ನಮ್ಮ ಜ್ಞಾನ ಪರಂಪರೆಯ ಕಸಬುಗಳನ್ನು ಪುನಶ್ಚೇತನಗೊಳಿಸದ ಹೊರತು ಅಭಿವೃದ್ಧಿ ಎಂಬ ಪದಕ್ಕೆ ಅರ್ಥವೇ ಇರುವುದಿಲ್ಲ.

ವಿಶ್ವ ಸಮುದಾಯದಲ್ಲಿ ಭಾರತದ ಬಗ್ಗೆ ಅನೇಕ ತಪ್ಪು ಕಲ್ಪನೆಗಳಿವೆ. ಭ್ರಷ್ಟಾಚಾರದ ಕೂಪ, ಲಾಭಕೋರತನ ಮತ್ತು ಕಡಿಮೆ ಗುಣಮಟ್ಟದ ವಸ್ತುಗಳ ಉತ್ಪಾದನೆ, ಸಂಕುಚಿತ ಧಾರ್ಮಿಕ ಮನೋಭಾವ, ಕೋಮುವಾದ ಹಾಗೂ ಗಲಭೆ, ಹೊಲಸು ರಾಜಕೀಯ, ಬಡವರಿಂದ ತುಂಬಿದ ಶ್ರೀಮಂತ ರಾಷ್ಟ್ರ, ಅನಕ್ಷರಸ್ಥರ ಬೀಡು, ಮಹಿಳೆಯರೇ ಮಹಿಳಾ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಚಿತ್ರಣ, ಆರ್ಥಿಕ ಅಸಮಾನತೆಯಂತಹ ಅಂಶಗಳನ್ನು ವಿಶ್ವ ಸಮುದಾಯದ ನೆನಪಿನಿಂದ ಅಳಿಸಿಹಾಕುವ ಪ್ರಯತ್ನ ಮಾಡಬೇಕಿದೆ.

"ರಾಮಮನೋಹರ ಲೋಹಿಯಾರವರ ಚಿಂತನೆಯೇ ಇದಕ್ಕೆ ಒಂದಷ್ಟು ಪರಿಹಾರ ನೀಡಬಲ್ಲದು. ಅವರೇ ಹೇಳಿದಂತೆ; 'ವಿಶ್ವಸಾಮಾನ್ಯ ವಾದ' ಎಂಬುದು – ಕೈಗಾರಿಕೀಕರಣವೊಂದೇ ಈ ಸಮಸ್ಯೆಗಳನ್ನು ಪರಿಹರಿಸುತ್ತದೆಂಬ ಅವಿದ್ಯಾವಂತ ಭಾವನೆಯಿಂದ ಹಾಗೂ ಸಮಸ್ಯೆಯನ್ನು ಎದುರಿಸುವ ಶಕ್ತಿಯಿಲ್ಲದೆ, ಕೇವಲ ಪಲಾಯನ ಸೂತ್ರವಾಗಿದೆ. ನಿಜವಾದ ಸಂಗತಿಯೆಂದರೆ, ಜಾತಿ-ಭಾಷೆ-ಧರ್ಮ-ಸ್ಥಳೀಯತೆ ಎಂಬ ಸಮಸ್ಯೆಗಳ ಪರಿಹಾರವನ್ನೂ ಔದ್ಯಮೀಕರಣವನ್ನೂ ಒಟ್ಟೊಟ್ಟಿಗೆ ಸಾಧಿಸಿಕೊಳ್ಳುತ್ತಾ

ಹೋಗಬೇಕಾಗುತ್ತದೆ. ಇನ್ನು ಸರ್ವೋದಯ ಎನ್ನುವುದು ಈ ಸಮಸ್ಯೆಗಳಿಗೆ ಲೋಕಾಭಿರಾಮ ಉಭಯಕುಶಲಗಳ ನಿರರ್ಥಕವಾದ ಲೇಪನವನ್ನಂಟಿಸುತ್ತದೆ, ಅಷ್ಟೇ."[೧೭] ಇದನ್ನು ಗಮನಿಸಿದರೆ ಭಾರತದಂತಹ ಬಹುಮುಖಿ ಸಂಸ್ಕೃತಿಯ ಸಮಾಜದಲ್ಲಿ ಜಾತಿ-ಭಾಷೆ-ಧರ್ಮ-ಸ್ಥಳೀಯತೆಯ ಆಧಾರದಲ್ಲಿ ಸರ್ವ ಸಂಸ್ಕೃತಿಗಳನ್ನು ಗೌರವಿಸುವಂತಹ, ನಮ್ಮ ಸಂಸ್ಕೃತಿಯನ್ನು ಪ್ರೀತಿಸುವಂತಹ ಹೊಸ ಪೀಳಿಗೆಯನ್ನು ಬೆಳೆಸಬೇಕಿದೆ. ಅಂದಾಗ ಮಾತ್ರ ನಮ್ಮ ಗ್ರಾಮೀಣ ಸೊಗಡಿನ ಬಗ್ಗೆ ಅಭಿಮಾನ ಮೂಡಲು ಸಾಧ್ಯ, ಅದನ್ನವರು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲು ಸಾಧ್ಯ.

ನಮ್ಮ ಶಾಲೆಗಳು ಕೇವಲ ಪಾಠ ಬೋಧನೆಗೆ ಸೀಮಿತವಾಗದೇ, ನಮ್ಮ ಪರಂಪರೆ ಹಾಗೂ ಅದರ ಹಿಂದಿರುವ ಪವಿತ್ರ ಜೀವನವನ್ನು ಪ್ರೀತಿಸುವ, ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವ ನಾಗರಿಕರನ್ನು ತಯಾರಿಸುವ ಕೇಂದ್ರಗಳಾಗಬೇಕು. Earn while learn ಜೀವನದ ಪಾಠ ಕಲಿಕೆಗೆ ಪಾರಂಪರಿಕ ವೃತ್ತಿ ಶಿಕ್ಷಣಕ್ಕೂ, ಕ್ರಿಯಾಶೀಲ ವ್ಯಕ್ತಿತ್ವ ನಿರ್ಮಾಣಕ್ಕೂ ಶಾಲಾ-ಕಾಲೇಜುಗಳು ಸಜ್ಜುಗೊಳ್ಳಬೇಕಿದೆ.

"ಮಾನವನನ್ನು ನಿರುದ್ಯೋಗಿ ಮತ್ತು ನಿರಾಹಾರಿಯಾಗಿ ಮಾಡುವ ಯಂತ್ರ ಭಾರತಕ್ಕೊಂದು ಶಾಪ. ಹೆಚ್ಚು ಮಂದಿಗೆ ಕೆಲಸ ಮತ್ತು ಊಟ ದೊರಕಿಸಿಕೊಡುವ ಗುಡಿ ಕೈಗಾರಿಕೆಗಳು ದೇಶಕ್ಕೊಂದು ವರ." ಎಂದು ಹೇಳಿದ್ದ ರಾಷ್ಟ್ರಪಿತ ಮಹಾತ್ಮಾ ಗಾಂಧಿಜೀಯವರ ಉಕ್ತಿ ಇಂದಿನ ಆಧುನೀಕರಣ ಭಾರತಕ್ಕೆ ಹಿಡಿದ ಕೈಗನ್ನಡಿಯಾಗಿದೆ.

"ಅಂಬೇಡ್ಕರ್ – ಗಾಂಧಿ ಭಿನ್ನ ಭಿನ್ನ ಗುಂಪುಗಳಲ್ಲಿದ್ದರು. ಅವರ ನಡುವೆ ಭಿನ್ನಾಭಿಪ್ರಾಯಗಳಿದ್ದವು. ಅಂಬೇಡ್ಕರ್ ಪೂರ್ತಿಯಾಗಿ ಆಧುನಿಕತೆಯತ್ತ ತೊನೆದರೆ, ಗಾಂಧೀಜಿ ಆಧುನಿಕತೆಯೊಳಗೆ ಆಯ್ಕೆಗಳನ್ನು ಮಾಡಿಕೊಂಡರು. ಆಧುನಿಕ ವೈಚಾರಿಕತೆಯನ್ನು ಸ್ವೀಕರಿಸಿದ ಗಾಂಧೀಜಿ ಯಂತ್ರ ನಾಗರಿಕತೆಯನ್ನು ತಿರಸ್ಕರಿಸಿದರು. ಪಾರಂಪರಿಕ ವೃತ್ತಿಗಳನ್ನು ಉಳಿಸಲು ಹೆಣಗಿದರು. ಅಂಬೇಡ್ಕರ್ ಅವರಿಗೆ ಪಾರಂಪರಿಕ ವೃತ್ತಿಗಳನ್ನು ಉಳಿಸುವುದೆಂದರೆ ಪಾರಂಪರಿಕ ಜಾತಿ ಪದ್ಧತಿಯನ್ನು ಉಳಿಸಿದಂತೆ ಎಂಬ ಆತಂಕವಿತ್ತು.

ಈಗ, ನೂರು ವರ್ಷಗಳ ಅಂತರದಲ್ಲಿ, ಗಾಂಧಿ – ಅಂಬೇಡ್ಕರ್ ಒಟ್ಟಾಗುವುದು ಅನಿವಾರ್ಯವಾಗಿದೆ. ಪಾರಂಪರಿಕ ವೃತ್ತಿ ಮತ್ತು ಆಧುನಿಕ ವಿಚಾರಗಳು ಒಟ್ಟಾಗುವುದು

ವೈಜ್ಞಾನಿಕ ಅಗತ್ಯವಾಗಿದೆ. ಪರಿಸರ, ಪ್ರಕೃತಿ ಉಳಿವು ಹಾಗೂ ಬಡತನ ನಿವಾರಣೆ ಇವು ಮೂರೂ ಸಂಗತಿಗಳು ಒಟ್ಟಾಗಿ ನಿಂತರೆ ಮಾತ್ರಮಾನವ ಸಭ್ಯತೆ ಉಳಿಯುತ್ತದೆ. ಹಾಗಾಗಿ, ಪಾರಂಪರಿಕ ವೃತ್ತಿಗಳನ್ನು ಉಳಿಸುತ್ತಲೇ ಜಾತಿವಿನಾಶ ಮಾಡುವ ಬೃಹತ್ ಸಾಮಾಜಿಕ ಚಳುವಳಿಯೊಂದು ಇಂದಿನ ಅಗತ್ಯವಾಗಿದೆ."[೧೮] ಇದಕ್ಕಾಗಿ ನಾವೂ ಸಹ, ದುಡಿಯುವ ಕೈಗಳ ಬಲದಿಂದಲೇ ಯಂತ್ರ ನಾಗರೀಕತೆಯನ್ನು ಕಳಚಬೇಕಾಗಿದೆ ಇಂದು. ಇದು ಅನಿವಾರ್ಯ. ಒಂದು ಶತಮಾನದ ಹಿಂದಷ್ಟೇ ದುಡಿಯುವವರ ದುಡಿಮೆಯನ್ನೇ ಕಸಿದುಕೊಂಡಿದೆ. ಹಾಗಾಗಿ ಯಂತ್ರಗಳನ್ನು ಸೃಷ್ಟಿಸಿದ ಕೈಗಳೇ ಯಂತ್ರಗಳನ್ನು ಕಳಚಬೇಕಾದ್ದು ಅನಿವಾರ್ಯವಾಗಿದೆ.[೧೯]

ಒಟ್ಟಿನಲ್ಲಿ ನಮ್ಮ ಪೂರ್ವಿಕರ ಜ್ಞಾನ ಸೆಲೆಗಳು ಬತ್ತಿ ಹೋಗುವ ಮುನ್ನ ಅವುಗಳನ್ನು ಪುನರುಜ್ಜೀವನಗೊಳಿಸಿ, ಆಧುನೀಕರಣಕ್ಕೆ ಪರ್ಯಾಯವಾಗಿ, ದೇಸಿ ಮಾದರಿಗಳನ್ನು ರ(ರು)ಚಿಸಬೇಕಿದೆ. ನಿರುದ್ಯೋಗಿ, ಅನಕ್ಷರಸ್ಥ ಪಾರಂಪರಿಕ ಕಸಬುದಾರರಿಗೆ ರೂಪಾಂತರಗೊಂಡ ಕಸಬನ್ನು ಅಳವಡಿಸಿಕೊಳ್ಳಲು ಸೂಕ್ತ ತರಬೇತಿ ನೀಡಿ ಕಸಬುದಾರರನ್ನು ಮತ್ತು ಕಸಬುಗಳನ್ನು ಉಳಿಸಿ, ಸಾಂಸ್ಕೃತಿಕ ಕಸಬುಗಳಿಗೆ ಆಧುನಿಕತೆಯ ಸ್ಪರ್ಶ ನೀಡಿ, ಅವರಿಗೆ ತಮ್ಮದೇ ಸಾಂಸ್ಕೃತಿಕ ಬದುಕು ಕಟ್ಟಿಕೊಡಬೇಕು.

- **ಇಲಕಲ್ಲ ಸೀರೆ ನೇಕಾರಿಕೆ : ಸಂಶೋಧನೆಯ ನಿರೀಕ್ಷೆಗಳು :**

'ದೇಸಿ' ಪರಂಪರೆಯ ಸಂಕೇತವಾಗಿರುವ ಇಳಕಲ್ಲ ಸೀರೆ ಉದ್ಯಮ ಕ್ರಮೇಣ ಕ್ಷೀಣಿಸತೊಡಗಿದೆ! ಉಡಲಾಗದಷ್ಟು ಹಳೆಯದಾದ ಹರಿದ ಸೀರೆಯ ನೈಸರ್ಗಿಕ ಬಣ್ಣ ಮಾಸದು. ಈ ಸೀರೆಯು ಒಂದು ಕುಟುಂಬದ ನೆನಪಿನ ಖಜಾನೆಯಾಗಿ ಮನೆಯಲ್ಲಿಯೇ ಮಕ್ಕಳ ತಲೆಯ ರಕ್ಷಣೆಗೆ ಕುಲಾಯಿಯಾಗಿ, ಕುಂಚಿಗೆಯಾಗಿ ಕೊನೆಗೆ ಕೌದಿಯಾಗಿ ಹೊದ್ದುಕೊಂಡವರನ್ನು ಚಳಿಗಾಲದಲ್ಲಿ ಬೆಚ್ಚಗೆ, ಬೇಸಿಗೆಯಲ್ಲಿ ತಂಪಾಗಿಯೂ ಇಡುತ್ತದೆ! ಇಂತಹ 'ದೇಸಿ' ಪಾರಂಪರಿಕ ವೃತ್ತಿಯು ಇಂದು ಆತಂಕದಲ್ಲಿದೆ. ಇದರ ಉಳಿವಿಗಾಗಿ ಸಮಾಜ ಮತ್ತು ಸರಕಾರ ಆತಂಕ ದೂರ ಮಾಡಲು ಸಂಶೋಧನೆಯ ಮೂಲಕ ಹೀಗೆ ಪ್ರಯತ್ನಿಸಬಹುದು. ಸರಕಾರದ ಅನೇಕ ಯೋಜ(ಚ)ನೆಗಳು ಎಲ್ಲರನ್ನೂ ತಲುಪುತ್ತಿಲ್ಲ.

- **ಇಳಕಲ್ಲ ಸೀರೆ ಕೈಗಾರಿಕೆ ನಿಗಮ ಮಂಡಳಿಯನ್ನು** ಸೃಷ್ಟಿಸಿ, ಈ **ಇಳಕಲ್ಲ ಸೀರೆಯ** ತವರೂರು ಎನಿಸಿರುವ ಇಳಕಲ್ಲು, ಕುಷ್ಟಗಿ ತಾಲ್ಲೂಕಿನ ಹನಮಸಾಗರ, ದೋಟಿಹಾಳ,

ತಾವರಗೇರಾ, ಬಾಗಲಕೋಟ ಜಿಲ್ಲೆಯ ಅಮೀನಗಡ, ಕಮತಗಿ, ಗುಳೇದಗುಡ್ಡ, ಬಾದಾಮಿ, ಕಂಕಣಕೊಪ್ಪ, ಕೆರೂರು, ಬೀಳಗಿ, ನಾಗರಾಳ, ಗಿರಿಸಾಗರ, ಹವೇಲಿ, ನಿಡಗುಂದಿ, ವಂದಾಲ, ಗೊಳಸಂಗಿ, ಬೇನಾಳ, ಮುದ್ದೇಬಿಹಾಳ, ನಾಲತ್ವಾಡ ಮುಂತಾದ ಊರುಗಳಲ್ಲಿ ಸರಕಾರವೇ ಕೇವಲ ಇಳಕಲ್ಲ ಸೀರೆ ತಯಾರಿಕಾ ಕಾರ್ಖಾನೆಗಳನ್ನು ನಿರ್ಮಿಸಬೇಕು. ಈಗಾಗಲೇ ರಾಷ್ಟ್ರಮಟ್ಟದಲ್ಲಿ ಮಹಿಳೆಯರ ಮನಸನ್ನು ಸೂರೆಗೊಳ್ಳಲು ಹೊರಟಿರುವ ಇಳಕಲ್ಲ ಸೀರೆಯನ್ನು **ಕರ್ನಾಟಕ ಇಳಕಲ್ಲ ಸೀರೆ ಕೈಗಾರಿಕೆ ನಿಗಮ(KISIC)**ದ ಮೂಲಕ ವಿಶ್ವವಿಖ್ಯಾತಗೊಳಿಸುವುದು. **KISIC**ಯ ಹೆಮ್ಮೆಯ ಉತ್ಪಾದನೆ, ಮಾರಾಟ ಹಾಗೂ ಪ್ರಚಾರದ ಜವಾಬ್ದಾರಿಯನ್ನು ಹೊರುವ ಮೂಲಕ 'ವ್ಯಾಪಾರ ಸ್ವಾಮ್ಯ ಮುದ್ರೆ' (Trade Mark)ಯನ್ನು ಪಡೆಯುವಂತಾಗಬೇಕು.

• **ಕೈಮಗ್ಗ ಅಭಿವೃದ್ಧಿ ನಿಗಮದ ಯೋಜನೆಗಳು** :- ನೇಕಾರನ ಜೀವನಮಟ್ಟ ಸುಧಾರಣೆ, ಶ್ರೀಮಂತ ಉದ್ಯಮದಾರನಿಂದ ಬಡ ನೇಕಾರರನ್ನು ಮುಕ್ತಗೊಳಿಸಿ 'ಧಣಿ' ಸಂಸ್ಕೃತಿಯನ್ನು ನಿರ್ಮೂಲನೆ ಮಾಡುವುದು, ಹೊಸ ವಿನ್ಯಾಸದ ರಚನೆಗೆ ಪ್ರೋತ್ಸಾಹಿಸುವುದು, ರಿಯಾಯಿತಿ ದರದಲ್ಲಿ ಮಗ್ಗದ ಸಲಕರಣೆ ನೀಡುವುದು, ರಾಜ್ಯ ವಲಯ ವಸತಿ ಕಾರ್ಯಾಗಾರ ಯೋಜನೆಯ ಅಡಿಯಲ್ಲಿ ಕಡಿಮೆ ಬಡ್ಡಿದರದಲ್ಲಿ ಹಾಗೂ ದೀರ್ಘ ಕಂತುಗಳಲ್ಲಿ ನೇಕಾರನಿಗೊಂದು ಸೂರು ಒದಗಿಸುವುದು, ಆರೋಗ್ಯ ಬುತ್ತಿ ಯೋಜನೆ, ವರ್ಕ ಶೆಡ್ಡು ಕಟ್ಟಿಸಿಕೊಳ್ಳಲು ಅನುದಾನ, ಶೈಕ್ಷಣಿಕ ಪ್ರವಾಸ ಕೈಗೊಳ್ಳುವುದು ಮುಂತಾದ ಕಾರ್ಯಗಳಲ್ಲಿ ಸಕ್ರೀಯವಾಗಿಸುವುದು.

• **ಕರ್ನಾಟಕ ಸರಕಾರದ ಮಹಾತ್ಮಾಗಾಂಧಿ ಬುನಕರ್ ಭಿಮಾ ಯೋಜನೆ** :- ಇದರಂತೆ ಪ್ರತಿ ವರ್ಷ ೪೦ ರೂಪಾಯಿಗಳ ಕಂತು ತುಂಬುವುದು, ೫೯ ವರ್ಷದಲ್ಲಿ ಸ್ವಾಭಾವಿಕ ಮರಣ ಹೊಂದಿದರೆ ೬೦,೦೦೦ ರೂಪಾಯಿ ಕ್ಲೇಮು, ಶವ ಸಂಸ್ಕಾರಕ್ಕೆ ೧೦೦೦೦ ರೂಪಾಯಿ ಕೊಡುವುದಲ್ಲದೇ ಅವರ ಇಬ್ಬರು ಮಕ್ಕಳಿಗೆ ೮ ರಿಂದ ೧೨ ನೇ ತರಗತಿವರೆಗೆ ೧೨೦೦ ರೂಪಾಯಿಗಳ ವಿದ್ಯಾರ್ಥಿವೇತನ ಕೊಡುವಂತಹ ಯೋಜನೆ ಇದಾಗಿದೆ.

• ನೇಕಾರರ ಕಲ್ಯಾಣ ಯೋಜನೆ, ತಾಳಿಭಾಗ್ಯ ಯೋಜನೆಗಳು ಎಲ್ಲರನ್ನೂ ತಲುಪುವಂತೆ ಬೀದಿ ನಾಟಕ, ಕಿರು ಚಿತ್ರ, ಜಾಹೀರಾತುಗಳ ಮೂಲಕ ಸಮರ್ಪಕವಾಗಿ ಪ್ರಯತ್ನಿಸುವುದು.

• ಇತ್ತೀಚಿಗೆ ಟಿ.ವಿ.ಗಳಲ್ಲಿ, ಸಿನೆಮಾಗಳಲ್ಲಿ, ವೃತ್ತಿ ರಂಗಭೂಮಿ ನಾಟಕಗಳಲ್ಲಿ ಫಿನಿಕ್ಸ್ ಹಕ್ಕಿಯಂತೆ ಈ ಇಳಕಲ್ಲ ಸೀರೆಯುಟ್ಟ ನೀರೆಯರು ಬಂದ್ಹೋಗುವುದನ್ನು ನೋಡುತ್ತಿರುವುದರಿಂದ ಹೆಂಗೆಳೆಯರು ಶುಭ ಸಮಾರಂಭಗಳು, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಮಾತ್ರ ಈ ಸೀರೆಯನ್ನು ಫ್ಯಾಶನ್‌ಗಾಗಿ ಉಟ್ಟುಕೊಳ್ಳುತ್ತಿದ್ದಾರೆ. ಇದರಿಂದ ಕೊಂಚ ಚೇತರಿಕೆ ಕಂಡಂತೆ ಭಾಸವಾಗುತ್ತಿದೆ. ಇಳಕಲ್ ಸೀರೆಗಳಲ್ಲಿಯೇ ಫ್ಯಾಶನ್ ಡಿಸೈನಿಂಗ್‌ಗೆ ಅವಕಾಶ ಕಲ್ಪಿಸುವುದು.

• ಇತ್ತೀಚಿಗೆ ನೇಕಾರಿಕೆ ಸುಧಾರಣೆ ಹೊಂದಿ ಜವಳಿ ಉದ್ದಿಮೆಯಾಗಿ ರೂಪಾಂತರ ಹೊಂದುವ ಮೂಲಕ ಕೈಮಗ್ಗ, ವಿದ್ಯುತ್ ಮಗ್ಗ ಹಾಗೂ ಗಿರಣಿ(ಮಿಲ್)ಗಳೆಂಬ ಮೂರು ವಿಭಾಗಳಾಗಿವೆ. ಸೂಕ್ತ ತರಬೇತಿ ನೀಡುವ ಮೂಲಕ ಈ ಮೂರನ್ನೂ ಸಕ್ರೀಯೆಗೊಳಿಸಬೇಕು.

• ಇದೇ ಹುನಗುಂದ ತಾಲ್ಲೂಕಿನ ಸುಪ್ರಸಿದ್ಧ ಸೂಳೆಬಾವಿ ಗ್ರಾಮದ ಶಾಖಾಂಬರಿ ಸಹಕಾರಿ ಸಂಘವು ನೇಕಾರರ ಬದಕು ಹಸನುಗೊಳಿಸಿ, ಅವರ ಭವಣೆ ನೀಗಿಸುವತ್ತ ದಿಟ್ಟ ಹೆಜ್ಜೆಯಿಟ್ಟು ಸೈ ಎನಿಸಿಕೊಂಡಿದೆ. ಇಂತಹ ಸಂಘಗಳಿಗೆ ಇನ್ನುಳಿದ ನೇಕಾರರ ಸಂಘದ ಸದಸ್ಯರನ್ನು ಅಲ್ಲಿಗೆ ಭೇಟಿ ನೀಡಲು, ಅದನ್ನು ಅನುಸರಿಸಲು ಪ್ರೋತ್ಸಾಹಿಸಬೇಕು.

"ಗಗನ ಸಖಿಯರು ಇಲಕಲ್ಲ ಸೀರೆ ಉಡಲು ಕೇಂದ್ರ ಸರಕಾರ ಒಪ್ಪಿಗೆ ನೀಡಿದೆ!"[೨೦] ಹೀಗೆಯೇ ಶಿಕ್ಷಕಿಯರಿಗೆ, ಅಂಗನವಾಡಿ ಕಾರ್ಯಕರ್ತೆಯರಿಗೆ, ಅಕ್ಷರದಾಸೋಹದ ಸಿಬ್ಬಂದಿಗೆ ಇಲಕಲ್ಲ ಸೀರೆ ಉಡಲು ರಾಜ್ಯ ಸರಕಾರವೂ ಒಪ್ಪಿಗೆ ನೀಡುವಂತೆ ಪ್ರಯತ್ನಿಸುವುದು.

• ದೇಶದಲ್ಲಿ ಉತ್ಪಾದನೆ ಮಾಡುವ ಬಟ್ಟೆಯ ಶೇಕಡಾ ೫೯ರಷ್ಟು ಬಟ್ಟೆ ಯನ್ನು ವಿದ್ಯುತ್ ಮಗ್ಗಗಳು ಉತ್ಪಾದಿಸಿದರೆ ಕೇವಲ ೧೧% ರಷ್ಟು ಬಟ್ಟೆಯನ್ನು ಮಾತ್ರ ಕೈಮಗ್ಗದ ಕ್ಷೇತ್ರದಲ್ಲಿ ಉತ್ಪಾದನೆಯಾಗುತ್ತದೆ! ಈ ಉತ್ಪಾದನಾ ವಸ್ತುಗಳಿಗೆ ಕಾನೂನಿನ ರಕ್ಷಣೆ ಹಾಗೂ ಮೀಸಲಾತಿಯನ್ನು ನೀಡಿ ಕೇಂದ್ರ ಸರಕಾರ ನೇಕಾರರನ್ನು ರಕ್ಷಿಸಲು ಅನುವು ಮಾಡಿಕೊಟ್ಟಿದೆ. ಇದರ ಬಗ್ಗೆ ಸಂಪೂರ್ಣ ಜಾಗೃತಿ ಮೂಡಿಸುವುದು.

• ಇದಕ್ಕೆ ಪೂರಕವೆಂಬಂತೆ ಪ್ರಧಾನಿಯವರು "ಬನ್ನಿ ಭಾರತದಲ್ಲಿ ನಿರ್ಮಾಣ ಮಾಡಿ" (Make in India) ಹಾಗೂ ೧೫ನೇ ಜುಲೈ ೨೦೧೫ರಂದು ಘೋಷಣೆಗೊಂಡ

'ಕೌಶಲಾಭಿವೃದ್ಧಿ ಹಾಗೂ ಉದ್ದಿಮೆ ಕುರಿತ ರಾಷ್ಟ್ರೀಯ ನೀತಿ-೨೦೧೫'ರ "ಕೌಶಲ್ಯ ಭಾರತ" (Skill India)ಗಳ ಮೇಲೇ ನೇಕಾರ ಬೃಹತ್ ನಿರೀಕ್ಷೆಯನ್ನಿರಿಸಿದ್ದಾನೆ. ನೇಕಾರಿಕೆಯ ವಿವಿಧ ಹಂತಗಳಲ್ಲಿ ಕೆಲಸ ಮಾಡುವ ಪ್ರತಿಯೊಬ್ಬರೂ ಮಾನವ ಸಂಪನ್ಮೂಲವಾಗಿದ್ದಾರೆ. ಅವರಲ್ಲಿ ಕೌಶಲ್ಯವಿದೆ. ಅವರನ್ನೇ ಬಳಸಿಕೊಂಡು ಸೀರೆಗಳನ್ನು ಉತ್ಪಾದಿಸಿ ಅವರಿಗೆ ಯೋಗ್ಯವಾದ ಕೂಲಿಯನ್ನು ನಿಗಧಿಪಡಿಸಿದರೆ ನಿರುದ್ಯೋಗ ಸಮಸ್ಯೆ ತೊಲಗಬಹುದು.

- *"ಕೈಮಗ್ಗದ ಬಟ್ಟೆ ನಮ್ಮ ದೇಶದ ಭವಿಷ್ಯದ ಬಟ್ಟೆ"* ಎಂದು ಕರೆ ನೀಡಿರುವ ರಂಗಕರ್ಮಿ ಪ್ರಸನ್ನರವರು ಗದಗ ಜಿಲ್ಲೆ ರೋಣ ತಾಲ್ಲೂಕಿನ ಗಜೇಂದ್ರಗಡದಿಂದ ಅಖಿಲ ಭಾರತ ಕೈಮಗ್ಗ ಒಕ್ಕೂಟದ ಪರ ಆಂಧೋಲನ ಆರಂಭಿಸಿ ಹೀಗೆ ಜಾಗೃತಿ ಮೂಡಿಸಿದರು. ಇದಕ್ಕೆ ಬೆಂಬಲಿಸುವುದೂ ಅಗತ್ಯವಾಗಿದೆ.

"ಯಾಂತ್ರಿಕ ಮಗ್ಗಗಳಲ್ಲಿ ತಯಾರಾಗುವ ಬಟ್ಟೆಗಳಲ್ಲಿ ಬಳಕೆಯಾಗುವ ರಾಸಾಯನಿಕ ಬಣ್ಣಗಳು ನಮ್ಮ ನೆಲ, ಜಲವನ್ನು ಅಗಾಧ ಪ್ರಮಾಣದಲ್ಲಿ ಕಲುಷಿತಗೊಳಿಸುತ್ತಿವೆ. ಕೃತಕವಾಗಿ ತಯಾರಾಗುತ್ತಿರುವ ಈ ಬಣ್ಣಗಳ ಉತ್ಪಾದನೆ ಹಾಗೂ ಬಳಕೆ ನಮ್ಮ ನದಿಗಳನ್ನು, ಅಂತರ್ ಜಲದ ಮೂಲಗಳನ್ನು ಸೇರಿ ಕುಡಿಯುವ ನೀರನ್ನು ವಿಷಪೂರಿತವನ್ನಾಗಿಸಿವೆ. ಹೀಗಿರುವಾಗ ಇವುಗಳಿಂದ ಮುಕ್ತವಾಗಿರುವ ಕೈಮಗ್ಗದ, ನೈಸರ್ಗಿಕ ಬಣ್ಣ ಬಳಸಿರುವ ಬಟ್ಟೆಗಳು ಪರಿಸರಕ್ಕೆ, ಜನರಿಗೂ ಹಿತವಾಗಿರುವ ವಸ್ತುಗಳಲ್ಲಿ ಇಳಕಲ್ಲ ಸೀರೆಯೂ ಒಂದು. ಹೀಗೆ ಯಾವುದೇ ತರಹದ ಮಾಲಿನ್ಯವಿಲ್ಲದೆ ಉದ್ಯೋಗ ಹಾಗೂ ಸಾಮಾಜಿಕ ನ್ಯಾಯ ಒದಗಿಸುತ್ತದೆ. ಪ್ರತಿಯೊಬ್ಬ ಕೈಮಗ್ಗ ನೇಕಾರನೂ ಸ್ವತಂತ್ರವಾಗಿರುವ ಒಬ್ಬ ಕುಶಲಕರ್ಮಿ. ಅವನ ಸೃಜನಶೀಲತೆಗೆ ವಿಫುಲ ಅವಕಾಶವಿದೆ. ಹೀಗೆ ನಮ್ಮ ಗ್ರಾಮೀಣ ಜೀವನದ ಸೃಜನಶೀಲತೆಯನ್ನು ಪುನರ್ಜೀವಗೊಳಿಸಬಲ್ಲ ಕೈಮಗ್ಗ ಕ್ಷೇತ್ರಕ್ಕೆ ರಕ್ಷಣೆ ನೀಡಬೇಕಾಗಿದೆ. ಐಟಿ ಹಾಗೂ ಔದ್ಯಮಿಕ ಕ್ಷೇತ್ರಗಳಿಗೆ ನೀಡುವ ಸಬ್ಸಿಡಿಗಳ ಒಂದು ಅಂಶವನ್ನು ಕೈಮಗ್ಗದ ಉಳಿವಿಗೆ ಬಳಸಿದರೆ ಉತ್ಕೃಷ್ಟ ಬಟ್ಟೆಗಳನ್ನು ನೇಯ್ದು ಪುನಃ ವಿಶ್ವಕ್ಕೆ ಮಾದರಿ ಆಗುವ ಸಾಧ್ಯತೆಗಳಿವೆ."[೨೧] ಪ್ರಶಸ್ತಿ ನೀಡಿ ಪ್ರೋತ್ಸಾಹಿಸಬೇಕು :- ನೇಕಾರನ ಸೃಜನಶೀಲತೆ ಹಾಗೂ ಕಲೆ ಅಳಿಯದಂತೆ ನೋಡಿಕೊಳ್ಳುವುದು ಸಮಾಜದ, ಸರಕಾರದ ಹೊಣೆಯಾಗಿದೆ. ನೇಕಾರರನ್ನು ಗುರುತಿಸಿ, ಗೌರವಿಸಿ ಸಾಧ್ಯವಾದಲ್ಲಿ ಪ್ರಶಸ್ತಿ ನೀಡಿ ಪ್ರೋತ್ಸಾಹಿಸಿದರೆ ಈ ಸೀರೆ ಉದ್ದಿಮೆ ಪ್ರಗತಿಯತ್ತ ದಾಪುಗಾಲು ಹಾಕಬಹುದು!

• **ಪ್ರತಿಭಾ ಪಲಾಯನ ನಿಲ್ಲಿಸಬೇಕು** :- ಇಲ್ಲಿಯವರೆಗೆ ಸುಖ ದಿಂದ ಬಾಳು ನೂಕಿದ್ದ ಈ ಸೀರೆ ನೇಕಾರರಿಗೆ ಉದ್ಯೋಗವಿಲ್ಲದೆ ಈಗ ಜೀವನದ ಮೇಲೆ ಜಿಗುಪ್ಸೆಗೊಂಡ ನೇಕಾರರು ಅನ್ಯ ಕೆಲಸದಲ್ಲಿ ತೊಡಗಿಕೊಂಡಿರುವುದು ಪ್ರತಿಭಾ ಪಲಾಯನವಾದಂತೆ! ಇವರ ಬದುಕಿಗೆ ಉತ್ಸಾಹ ಮೂಡಿಸಬೇಕಾಗಿದೆ. ಕಡಿಮೆ ಬಡ್ಡಿದರದಲ್ಲಿ ಸಾಲ ಸೌಲಭ್ಯ ಒದಗಿಸಿ ಕಚ್ಚಾ ವಸ್ತುವಿನ ಮೇಲೆ ರಿಯಾಯಿತಿ ನೀಡುವ ವ್ಯವಸ್ಥೆ ಮಾಡಿದರೆ ಮಾತ್ರ ಗುಳೆ ಹೋದ ಹಾಗೂ ಅನ್ಯ ಕೆಲಸಕ್ಕೆ ಅಂಟಿಕೊಂಡಿರುವ ಕುಶಲ ನೇಕಾರರು ಮತ್ತೆ ಮರಳುತ್ತಾರೆ, ಅಳಿದು ಹೋಗಲಿರುವ ಮಗ್ಗದ ದುಡಿಮೆಯೂ ಉಳಿಯುತ್ತದೆ.

**ಗುಳೇದಗುಡ್ಡದ ಖಣ ನೇಕಾರಿಕೆ : ಸಂಶೋಧನೆಯ ನಿರೀಕ್ಷೆಗಳು :**

'ದೇಸಿ' ಪರಂಪರೆಯ ಸಂಕೇತವಾಗಿರುವ ಗುಳೇದಗುಡ್ಡದ ಖಣ ಉದ್ಯಮ ಕ್ರಮೇಣ ಕ್ಷೀಣಿಸತೊಡಗಿದೆ! ಉಡಲಾಗದಷ್ಟು ಹಳೆಯದಾದ ಹರಿದ ಇಳಕಲ್ಲ ಸೀರೆ ಹಾಗೂ ಗುಳೇದಗುಡ್ಡದ ಖಣದ ನೈಸರ್ಗಿಕ ಬಣ್ಣ ಮಾಸದು. ಈ ಸೀರೆ ಮತ್ತು ಖಣಗಳು ಒಂದು ಕುಟುಂಬದ ನೆನಪಿನ ಖಜಾನೆಯಾಗಿ ಮನೆಯಲ್ಲಿಯೇ ಮಕ್ಕಳ ತಲೆಯ ರಕ್ಷಣೆಗೆ ಕುಲಾಯಿಯಾಗಿ, ಕುಂಚಿಗೆಯಾಗಿ ಕೊನೆಗೆ ಕೌದಿಯಾಗಿ ಹೊದ್ದುಕೊಂಡವರನ್ನು ಚಳಿಗಾಲದಲ್ಲಿ ಬೆಚ್ಚಗೆ, ಬೇಸಿಗೆಯಲ್ಲಿ ತಂಪಾಗಿಯೂ ಇಡುತ್ತದೆ!

ಇಂತಹ 'ದೇಸಿ' ಪಾರಂಪರಿಕ ವೃತ್ತಿಯು ಇಂದು ಆತಂಕದಲ್ಲಿದೆ. ಇದರ ಉಳಿವಿಗಾಗಿ ಸಮಾಜ ಮತ್ತು ಸರಕಾರಗಳ ಆತಂಕ ದೂರ ಮಾಡಲು ಸಂಶೋಧನೆಯ ಮೂಲಕ ಹೀಗೆ ಪ್ರಯತ್ನಿಸಬಹುದು. ಸರಕಾರದ ಅನೇಕ ಯೋಜ(ಚ)ನೆಗಳು ಎಲ್ಲರನ್ನೂ ತಲುಪುತ್ತಿಲ್ಲ.

• **ಇಳಕಲ್ಲ ಸೀರೆ ಹಾಗೂ ಗುಳೇದಗುಡ್ಡದ ಖಣದ ಕೈಗಾರಿಕೆ ನಿಗಮ ಮಂಡಳಿಯನ್ನು** ಸೃಷ್ಟಿಸಿ, ಈ ಇಳಕಲ್ಲ ಸೀರೆಯ ಜೊತೆಗೆ ಗುಳೇದಗುಡ್ಡದ ಖಣಗಳನ್ನು ಜಂಟಿಯಾಗಿ ತಯಾರಿಸುವ ಉದ್ದೇಶದೊಂದಿಗೆ ಗುಡಿ ಕೈಗಾರಿಕೆ ಇಲ್ಲವೇ ಸಣ್ಣ ಪ್ರಮಾಣದ ಕೈಗಾರಿಕೆಗಳ ಸಮುಚ್ಚಯವನ್ನು ಇಳಕಲ್ಲ ಸೀರೆ ಹಾಗೂ ಗುಳೇದಗುಡ್ಡದ ಖಣಗಳ ತವರೂರು ಎನಿಸಿರುವ ಇಳಕಲ್ಲು, ಗುಳೇದಗುಡ್ಡ, ಕುಷ್ಟಗಿ ತಾಲ್ಲೂಕಿನ ಹನಮಸಾಗರ, ದೋಟಿಹಾಳ, ತಾವರಗೇರಾ, ಬಾಗಲಕೋಟ ಜಿಲ್ಲೆಯ ಅಮೀನಗಡ, ಕಮತಗಿ, ಬಾದಾಮಿ, ಕಂಕಣಕೊಪ್ಪ, ಕೆರೂರು, ಬೀಳಗಿ, ನಾಗರಾಳ, ಗಿರಿಸಾಗರ, ಹವೇಲಿ, ನಿಡಗುಂದಿ, ವಂದಾಲ, ಗೊಳಸಂಗಿ,

ಬೇನಾಳ, ಮುದ್ದೇಬಿಹಾಳ, ನಾಲತ್ವಾಡ ಮುಂತಾದ ಊರುಗಳಲ್ಲಿ ಸರಕಾರವೇ ತಯಾರಿಕಾ ಸಣ್ಣಕೈಗಾರಿಕೆಗಳ ಘಟಕಗಳನ್ನು ನಿರ್ಮಿಸಬೇಕು. ಈಗಾಗಲೇ ರಾಷ್ಟ್ರಮಟ್ಟದಲ್ಲಿ ಮಹಿಳೆಯರ ಮನಸನ್ನು ಸೂರೆಗೊಳ್ಳಲು ಹೊರಟಿರುವ ಇಳಕಲ್ಲ ಸೀರೆಯ ಜೊತೆಗಾತಿಯಂತಿರುವ ಗುಳೇದಗುಡ್ಡದ ಖಣವನ್ನು ಕರ್ನಾಟಕ ಇಳಕಲ್ಲ ಸೀರೆ ಕೈಗಾರಿಕೆ ನಿಗಮ(KISIC)ದ ಮೂಲಕ ವಿಶ್ವವಿಖ್ಯಾತಗೊಳಿಸುವುದು. KISICಯ ಹೆಮ್ಮೆಯ ಉತ್ಪಾದನೆ, ಮಾರಾಟ ಹಾಗೂ ಪ್ರಚಾರದ ಜವಾಬ್ದಾರಿಯನ್ನು ಹೊರುವ ಮೂಲಕ 'ವ್ಯಾಪಾರ ಸ್ವಾಮ್ಯ ಮುದ್ರೆ' (Trade Mark)ಯನ್ನು ಪಡೆಯುವಂತಾಗಬೇಕು.

- ಇತ್ತೀಚಿಗೆ ಟಿ.ವಿ.ಗಳಲ್ಲಿ, ಸಿನೆಮಾಗಳಲ್ಲಿ, ವೃತ್ತಿ ರಂಗಭೂಮಿ ನಾಟಕಗಳಲ್ಲಿ ಫಿನಿಕ್ಸ್ ಹಕ್ಕಿಯಂತೆ ಈ ಇಳಕಲ್ಲ ಸೀರೆಯುಟ್ಟ ನೀರೆಯರು ಕಾಣಸಿಕ್ಕುತ್ತಾರೆ. ಆದರೆ ಗುಳೇದಗುಡ್ಡದ ಖಣದ ಕುಪ್ಪಸ ತೊಟ್ಟು ಬರುವವರು ತುಂಬಾ ವಿರಳವಾಗಿದ್ದು, ಹೆಂಗೆಳೆಯರು ಶುಭ ಸಮಾರಂಭಗಳು ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಮಾತ್ರ ಈ ಸೀರೆ ಕುಪ್ಪಸವನ್ನು ಫ್ಯಾಶನ್‌ಗಾಗಿ ಉಟ್ಟುಕೊಳ್ಳುತ್ತಿದ್ದಾರೆ. ಇದರಿಂದ ಕೊಂಚ ಚೇತರಿಕೆ ಕಂಡಂತೆ ಭಾಸವಾಗುತ್ತಿದೆ. ಇಳಕಲ್ ಸೀರೆ ಮತ್ತು ಗುಳೇದಗುಡ್ಡದ ಖಣದ ಕುಪ್ಪಸಗಳಲ್ಲಿಯೇ ಫ್ಯಾಶನ್ ಡಿಸೈನಿಂಗ್‌ಗೆ ಅವಕಾಶ ಕಲ್ಪಿಸುವುದು.

- ಇದಕ್ಕೆ ಪೂರಕವೆಂಬಂತೆ ಪ್ರಧಾನಿಯವರು "ಬನ್ನಿ ಭಾರತದಲ್ಲಿ ನಿರ್ಮಾಣ ಮಾಡಿ" (Make in India) ಹಾಗೂ ೧೫ನೇ ಜುಲೈ ೨೦೧೫ರಂದು ಘೋಷಣೆಗೊಂಡ 'ಕೌಶಲಾಭಿವೃದ್ಧಿ ಹಾಗೂ ಉದ್ದಿಮೆ ಕುರಿತ ರಾಷ್ಟ್ರೀಯ ನೀತಿ-೨೦೧೫'ರ "ಕೌಶಲ್ಯ ಭಾರತ" (Skill India)ಗಳ ಮೇಲೇ ನೇಕಾರ ಬೃಹತ್ ನಿರೀಕ್ಷೆಯನ್ನಿರಿಸಿದ್ದಾನೆ. ನೇಕಾರಿಕೆಯ ವಿವಿಧ ಹಂತಗಳಲ್ಲಿ ಕೆಲಸ ಮಾಡುವ ಪ್ರತಿಯೊಬ್ಬರೂ ಮಾನವ ಸಂಪನ್ಮೂಲವಾಗಿದ್ದಾರೆ. ಅವರಲ್ಲಿ ಕೌಶಲ್ಯವಿದೆ. ಅವರನ್ನೇ ಬಳಸಿಕೊಂಡು ಗುಳೇದಗುಡ್ಡದ ಖಣಗಳನ್ನು ಉತ್ಪಾದಿಸಿ ಅವರಿಗೆ ಯೋಗ್ಯವಾದ ಕೂಲಿಯನ್ನು ನಿಗಧಿಪಡಿಸಿದರೆ ನಿರುದ್ಯೋಗ ಸಮಸ್ಯೆ ತೊಲಗಬಹುದು.

• **ನಾವೇಕೆ ಕೈಮಗ್ಗದ ಬಟ್ಟೆಯನು ಧರಿಸಬೇಕು? ರಾಸಾಯಿಕ ಬಣ್ಣಗಳನ್ನು ತಿರಸ್ಕರಿಸಬೇಕು?** :

೧) ಹತ್ತಿ ಕೈಮಗ್ಗದ ಬಟ್ಟೆ ಮೃದುವಾಗಿರುತ್ತದೆ. ದೇಹಕ್ಕೆ ಹಿತಕರವಾಗಿರುತ್ತದೆ. ೨) ಹತ್ತಿ ಬಟ್ಟೆಯು ದೇಹದ ಬೆವರನ್ನು ಚೆನ್ನಾಗಿ ಹೀರಿಕೊಳ್ಳಬಲ್ಲದು. ೩) ರಾಸಾಯನಿಕ ಬಣ್ಣಗಳು ಆರೋಗ್ಯಕ್ಕೆ ಹಾನಿಕಾರಕ. ೪) ನೈಸರ್ಗಿಕ ಬಣ್ಣಗಳು ಔಷಧೀಯ ಗುಣ ಹೊಂದಿದ ಸಸ್ಯಗಳು. ೫) ಕೈಮಗ್ಗದ ತಯಾರಿಕಾ ವಿಧಾನವು ಪರಿಸರಕ್ಕೆ ಹಾನಿಕಾರಕವಲ್ಲ. ೬) ಕೈಮಗ್ಗ ಗ್ರಾಮೀಣ ಉದ್ಯೋಗ ಕಲ್ಪಿಸುತ್ತದೆ. ೭) ಬಡವರು ಪೇಟೆಗೆ ಗುಳೆ ಹೋಗುವುದನ್ನು ತಡೆಯುತ್ತದೆ. ೮) ಕೈಮಗ್ಗವು ರಾಷ್ಟ್ರೀಯತೆಯ ಹೆಮ್ಮೆಯ ಸಂಕೇತ. ೯) ಕೈಮಗ್ಗದ ಪ್ರತಿಯೊಂದು ತುಂಡು ಬಟ್ಟೆಯೂ ಭಿನ್ನವಾಗಿರುತ್ತದೆ. ತನ್ನದೇ ಸ್ವಂತಿಕೆ ಹೊಂದಿರುತ್ತದೆ. ೧೦) ವಿದ್ಯುತ್‌ಚಾಲಿತ ಯಂತ್ರಗಳು ಜಾಗತಿಕ ತಾಪಮಾನವನ್ನುಂಟು ಮಾಡುತ್ತವೆ.

• ಒಟ್ಟಿನಲ್ಲಿ ಭಾರತದಂಥ ದೇಶದ ರಾಷ್ಟ್ರೀಯ ಆರ್ಥಿಕ ಸ್ಥಿತಿಯಲ್ಲಿ, ಗ್ರಾಮೋದ್ಯೋಗ ಅತ್ಯಂತ ಮುಖ್ಯವಾದ ಪಾತ್ರವಹಿಸುತ್ತದೆ. "ಅಧಿಕೋತ್ಪತ್ತಿಯಿಂದ ವಿಶ್ವದ ಬಡವರಿಗೆ ಸಹಾಯವಾಗುವುದಿಲ್ಲ. ಆದರೆ ಜನ ಸಮೂಹಗಳೆಲ್ಲರ ಉತ್ಪತ್ತಿಯಿಂದ ಸಹಾಯ ದೊರಕುತ್ತದೆ."[೨] ಎಂಬ ಗಾಂಧೀಜಿಯವರ ಸಲಹೆ ಇಂದಿಗೂ ಸ್ವೀಕಾರ್ಹವಾಗಿದೆ. ೨೦೦೦ನೇ ನವೆಂಬರ್ ೨ ರಂದು ಸರ್ಕಾರದ ಪ್ರಗತಿಯ ಕನಸಿನ ಕೂಸಾಗಿ ಹುಟ್ಟಿದ್ದು 'ಹೊಸ ಜವಳಿ ನೀತಿ'. ಜವಳಿ ಸರಕುಗಳಿಗೆ ಜಾಗತಿಕ ಮಾರುಕಟ್ಟೆ, ಜವಳಿ ಉದ್ಯಮದಲ್ಲಿ ತಾಂತ್ರಿಕ ಕ್ರಾಂತಿ, ಮಗ್ಗಗಳನ್ನು ಮೇಲ್ದರ್ಜೆಗೇರಿಸುವುದು, ನೇಕಾರರಿಗೆ ಹೆಚ್ಚಿನ ಉದ್ಯೋಗಾವಕಾಶ, ಜೀವನ ಮಟ್ಟದಲ್ಲಿ ವೃದ್ಧಿ, ಇದು ಹೊಸ ನೀತಿಯ ಧ್ಯೇಯಗಳಾಗಿದ್ದರೂ, ನೇಕಾರರ ಬದುಕು ನೆಮ್ಮದಿಯನ್ನು ಕಾಣದೇ 'ಮಾನ ಮುಚ್ಚುವವರ ಬದುಕು ಬೆತ್ತಲೆ' ಎಂಬಂತಾಗಿದ್ದು ವಿಪರ್ಯಾಸ!

• ಇತ್ತೀಚಿಗೆ ಕೈಮಗ್ಗ ವಲಯಕ್ಕೆ ಕೇಂದ್ರ ಸರ್ಕಾರವು NIFT- National Institute of Fashion Technology ಯಂತಹ ಖಾಸಗಿ ಸಂಸ್ಥೆಗಳನ್ನು ಕೈಮಗ್ಗ ವಲಯದ ಜೊತೆ ಸೇರಿ ಕೆಲಸ ಮಾಡಲು ಕೇಂದ್ರ ಜವಳಿ ಇಲಾಖೆಯು ಕೇಳಿಕೊಂಡು, ಕೈಮಗ್ಗವನ್ನು ಅತ್ಯಾಧುನಿಕತೆಯತ್ತ ಹೊತ್ತೊಯ್ಯುತ್ತಿರುವುದು ನೇಕಾರರ ಬದುಕನ್ನು ನೆಮ್ಮದಿಯ ನೆರಳಿನತ್ತ ಸೆಳೆಯಲು ಮಾಡುತ್ತಿರುವ ಪ್ರಯತ್ನವಾಗಿದೆ.

**ಕಮತಗಿ ಪಟಗ ಮತ್ತು ರುಮಾಲು ನೇಕಾರಿಕೆ : ಸಂಶೋಧನೆಯ ನಿರೀಕ್ಷೆಗಳು :**

- 'ದೇಸಿ' ಪರಂಪರೆಯ ಸಂಕೇತವಾಗಿರುವ ಕಮತಗಿಯ ಪಟಗಗಳ ಉದ್ಯಮ ಕ್ರಮೇಣ ಕ್ಷೀಣಿಸತೊಡಗಿದೆ! ಆರಿ ಅಂಚಿನ ರುಮಾಲುಗಳು ಕೊನೆಯಂಚಿಗೆ ಬಂದಿವೆ! ಕಮತಗಿಯ ಮಗ್ಗಗಳು ಮುಗ್ಗು ಹಿಡಿಯುತ್ತಲಿವೆ! ಇವುಗಳ ಉಳಿವಿಗಾಗಿ ಸಂಶೋಧನೆಯ ಮೂಲಕ ಈ ಕೆಳಕಂಡಂತೆ ಪ್ರಯತ್ನಿಸುವುದು.

- **ಕೈಗಾರಿಕೆ ನಿಗಮ ಮಂಡಳಿಯ** ಮೂಲಕ ಕಮತಗಿಯ ಹೆಮ್ಮೆಯ ಉತ್ಪಾದನೆ, ಮಾರಾಟ ಹಾಗೂ ಪ್ರಚಾರದ ಜವಾಬ್ದಾರಿಯನ್ನು ಹೊರುವ ಮೂಲಕ **'ವ್ಯಾಪಾರ ಸ್ವಾಮ್ಯ ಮುದ್ರೆ'** (Trade Mark)ಯನ್ನು ಪಡೆಯುವಂತಾಗಬೇಕು.

- ಇತ್ತೀಚಿಗೆ ಟಿ.ವಿ.ಗಳಲ್ಲಿ, ಸಿನೆಮಾಗಳಲ್ಲಿ, ವೃತ್ತಿ ರಂಗಭೂಮಿ ನಾಟಕಗಳಲ್ಲಿ ಈ ಕಮತಗಿ ಪಟಗ ಧರಿಸಿದ ಪುರುಷರು ಬಂದ್ಹೋಗುವುದನ್ನು ನೋಡುತ್ತಿರುವುದರಿಂದ ಯುವ ಸಮುದಾಯ ಶುಭ ಸಮಾರಂಭಗಳು, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಮಾತ್ರ ಈ ಪಟಗಗಳನ್ನು ಫ್ಯಾಶನ್‌ಗಾಗಿ ಸುತ್ತಿಕೊಳ್ಳುತ್ತಿದ್ದಾರೆ. ಇದರಿಂದ ಕೊಂಚ ಚೇತರಿಕೆ ಕಂಡಂತೆ ಭಾಸವಾಗುತ್ತಿದೆ. ಕಮತಗಿ ಪಟಗಗಳಲ್ಲಿಯೇ ಫ್ಯಾಶನ್ ಡಿಸೈನಿಂಗ್‌ಗೆ ಅವಕಾಶ ಕಲ್ಪಿಸುವುದು.

- ಸರಕಾರದ ಅನೇಕ ಯೋಜ(ಚ)ನೆಗಳು ಎಲ್ಲರನ್ನೂ ತಲುಪುತ್ತಿಲ್ಲ ಎಂಬುದನ್ನು ಮನವರಿಕೆ ಮಾಡುವುದು.

- ಗೌರವಯುತವಾದ ನೇಕಾರಿಕೆ ಕಸಬನ್ನು ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಎನ್.ಎಮ್.ಆರ್.ಇ.ಜಿ. ಅಡಿಯಲ್ಲಿ ಕಾರ್ಮಿಕರಿಗೆ ನೀಡುವ ಮಾದರಿಯಲ್ಲಿಯೇ ನೇಕಾರರಿಗೂ ಕನಿಷ್ಠ ಕೂಲಿ ನೀಡಲು ಪ್ರಯತ್ನಿಸುವುದು.

- ಸಿಲ್ಕ್ ಮಂಡಳಿಯನ್ನು ಸ್ಥಾಪಿಸಿ ಆಸಕ್ತ ಯುಕರನ್ನು ತರಬೇತಿಗೊಳಿಸಿ ಕೈಮಗ್ಗ ಜವಳಿ ಕ್ಷೇತ್ರದಲ್ಲಿ ಕ್ರಾಂತಿ ಮಾಡುವಂತೆ ಕೇಂದ್ರ ಜವಳಿ ಇಲಾಖೆಯ ಗಮನಕ್ಕೆ ತರಬಯಸುವುದು.

• ಮ್ಯಾಂಚೆಸ್ಟರ್ ಖ್ಯಾತಿಯನ್ನು ಪಡೆದಿದ್ದು ಇದೀಗ ನೇಕಾರಿಕೆಯಿಂದ ವಿಮುಖಗೊಂಡ ಗ್ರಾಮ, ಪಟ್ಟಣ ಮತ್ತು ನಗರಗಳಿಗೆ ಕಾಯಕಲ್ಪ ನೀಡುವುದು.

ಇಂತಹ 'ದೇಸಿ' ಪಾರಂಪರಿಕ ವೃತ್ತಿಯು ಇಂದು ಆತಂಕದಲ್ಲಿದೆ. ಇದರ ಉಳಿವಿಗಾಗಿ ಸಮಾಜ ಮತ್ತು ಸರಕಾರ ಆತಂಕ ದೂರ ಮಾಡಲು ಸಂಶೋಧನೆಯ ಮೂಲಕ ಹೀಗೆ ಪ್ರಯತ್ನಿಸಬಹುದು.

**ರಾಜೂರ ಸುಣ್ಣ ತಯಾರಿಕೆ : ಸಂಶೋಧನೆಯ ನಿರೀಕ್ಷೆಗಳು**

- ಸುಣ್ಣಗಾರಿಕೆಯನ್ನು ಕೇಂದ್ರ ಸರಕಾರದ ಸಣ್ಣ ಮತ್ತು ಮಧ್ಯ ಪ್ರಮಾಣದ ಕೈಗಾರಿಕೆ ಇಲಾಖೆ ಗುರುತಿಸುಂತಾಗಬೇಕು.
- ಸುಣ್ಣವು ಬೆಳಕನ್ನು ಹೆಚ್ಚು ಪ್ರತಿಫಲನ ಹೊಂದುವಂತೆ ಮಾಡುವ ಮೂಲಕ ಆರೋಗ್ಯಯುತವಾದ ಪರಿಣಾಮ ಬೀರುತ್ತದೆ. ಇದನ್ನು ಜನರಲ್ಲಿ ವೈಜ್ಞಾನಿಕವಾಗಿ ಬಿಂಬಿಸಬೇಕಿದೆ.
- ಸುಣ್ಣವನ್ನೂ ಈಗಿನ ಮಾರುಕಟ್ಟೆಗೆ ತಕ್ಕಂತೆ ಹೊಂದಿಸಿಕೊಳ್ಳಬೇಕು. ಇದಕ್ಕೆ ಬ್ಯಾಂಕುಗಳು, ಸರಕಾರ ಸಹಕಾರ, ಸಹಾಯ ನೀಡಬೇಕು.
- ಇದೇ ಸುಣ್ಣದಿಂದ ಸಮ್ ಕೂಡಾ ತಯಾರಿ ಮಾಡಬಹುದು, ಆದರೆ.. ಇದಕ್ಕೆ ಬಂಡವಾಳ ಹಾಗೂ ಪುನಃಶ್ಚೇತನಾ ತರಬೇತಿಯ ಕೊರತೆಯನ್ನು ನೀಗಿಸಬೇಕು. ಇದು ಉನ್ನತ ಮಟ್ಟದಿಂದಲೇ ಬದಲಾವಣೆಯಾಗಬೇಕು.
- ಬಹಳಷ್ಟು ಜನರು ಅವಲಂಬಿಸಿರುವ ಈ ಕಸಬನ್ನು ಪುನರುಜ್ಜೀವನಗೊಳಿಸಲು ಸಂಶೋಧನೆ ಕೈಗೊಂಡು, ಅವರ ಜೀವನಾಶ್ಯಕಗಳನ್ನೂ ಪೂರೈಸಲು ಸಣ್ಣ ಮತ್ತು ಮಧ್ಯ ಪ್ರಮಾಣದ ಕೈಗಾರಿಕೆ ಇಲಾಖೆ ಶ್ರಮಿಸಬೇಕು.
- ಆಧುನಿಕ ಶೈಲಿಗೆ ತಕ್ಕಂತೆ ಯುವ ಜನಾಂಗವನ್ನು ತರಬೇತುಗೊಳಿಸಿ, ಇಲ್ಲಿ ಸಿಕ್ಕುವ ಸುಣ್ಣದ ಕಲ್ಲನ್ನೇ ಕಪ್ಪೆಚಿಪ್ಪಿನ ಬದಲಾಗಿ ಬಳಕೆ ಮಾಡಿಕೊಂಡು ಬಲಿಷ್ಠವಾಗಿರುವ ಈ ಸುಣ್ಣವನ್ನು ತಯಾರಿಸುವ ಬಗ್ಗೆ ಯೋಚಿಸಬೇಕಿದೆ.
- ಹೊಸ ಆವಿಷ್ಕಾರಕ್ಕೆ ಇದೇ ಜನಾಂಗದ ನಿರುದ್ಯೋಗಿ ಜ್ಞಾನವಂತರನ್ನು ಸಂಶೋಧಕರೊಂದಿಗೆ ಜೊತೆಯಾಗಿಸಬೇಕು. ಇವರಿಂದಲೇ ಈ ಸುಣ್ಣಗಾರಿಕೆ ನಾವಿನ್ಯತೆ ಮೂಡಿಸಿ, ಇದರಲ್ಲಿರುವ ನೈಜ ಹಾಗೂ ವೈಜ್ಞಾನಿಕ ಸತ್ಪರಿಣಾಮವನ್ನು

ಜನರಿಗೆ ತಲುಪಿಸಿ, ಸೂಕ್ತ ಮಾರುಕಟ್ಟೆ ಒದಗಿಸಿದರೆ ಸುಣ್ಣಗಾರರ ಬದುಕು ಉಜ್ವಲವಾದೀತು.

**ಕಿನ್ನಾಳ ಕಿಟ್ಟದ ಗೊಂಬೆ ತಯಾರಿಕೆ : ಆತಂಕಕಾರಿ ಸವಾಲುಗಳು**

- ಸಂಶೋಧನೆ ಮತ್ತು ಅಭಿವೃದ್ಧಿಗೆ ಹೆಚ್ಚು ಒತ್ತು ನೀಡುವುದು.
- ೧ ಲಕ್ಷ ರೂಪಾಯಿ ಸಾಲವನ್ನು ಇನ್ನೂ ಹೆಚ್ಚಿಸುವುದು ಮತ್ತು ೫೦%ರಷ್ಟು ಸಬ್ಸಿಡಿ ನೀಡುವುದು.
- ವಿವಿಧೆಡೆ ನಡೆಯುವ ಎಲ್ಲಾ ಕರಕುಶಲ ಪ್ರದರ್ಶನವನ್ನು ಸರ್ಕಾರವೇ ಪ್ರಾಯೋಜಕತ್ವ ವಹಿಸುವುದು.
- ಕೌಶಲ ವೃದ್ಧಿಗೆ ತರಬೇತಿಯನ್ನು ಆಕರ್ಷಕಗೊಳಿಸಿ, ಎಲ್ಲರನ್ನೂ ತೊಡಗಿಸುವುದು.
- ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮದಿಂದ 'ಕಿನ್ನಾಳ ಕಲೆ'ಗೆಂದೇ ಪ್ರಶಸ್ತಿಯನ್ನು ನೀಡುವುದು.
- ಆಧುನಿಕತೆಗೆ ತಕ್ಕಂತೆ ಉತ್ಪನ್ನಗಳನ್ನು ತಯಾರಿಸಲು ಪ್ರೋತ್ಸಾಹಿಸುವುದು.
- ಬ್ರ್ಯಾಂಡ್ ವರ್ಚಸ್ಸು ಹೆಚ್ಚಿಸುವುದು.
- ಕಲಾಕೃತಿಗಳ ರೋಡ್ ಷೋ ನಡೆಸುವುದು. ಯುವಕರನ್ನು ಸೆಳೆಯಬೇಕು.
- ಆಕರ್ಷಕ ಪ್ಯಾಕಿಂಗ್ ಮತ್ತು ಪ್ರಚಾರಕ್ಕೆ ಹೆಚ್ಚು ಒತ್ತು ನೀಡುವುದು.
- ಆಯ್ದ ದೇಶಗಳಲ್ಲಿ ವಿಶೇಷ ಷೋ ರೂಮ್‌ಗಳನ್ನು ಆರಂಭಿಸುವುದು.
- ಜಾಗತಿಕ ಮಾರುಕಟ್ಟೆಯಲ್ಲಿ ವ್ಯಾಪಾರ ವಹಿವಾಟು ನಡೆಸಲು ಅವಕಾಶ ಕಲ್ಪಿಸುವುದು.
- ತಯಾರಿಕೆ ಮತ್ತು ರಫ್ತು ವಹಿವಾಟಿಗೆ ಸರ್ಕಾರದ ನೆರವು ಅಧಿಕಗೊಳಿಸುವುದು.
- ಮುಚ್ಚಿ ಹೋಗಿರುವ ಕರ್ನಾಟಕ ಕರಕುಶಲ ಅಭಿವೃದ್ಧಿ ನಿಗಮದ ತರಬೇತಿ ಕೇಂದ್ರ ಹಾಗೂ ಖರೀದಿ ಕೇಂದ್ರವನ್ನು ಪುನಃ ಪ್ರಾರಂಭಿಸುವುದು.
- ಕಲಾವಿದರೆಲ್ಲರೂ ಒಗ್ಗಟ್ಟಾಗಬೇಕು.
- ಗುಣಮಟ್ಟದ ಕಲಾಕೃತಿಗಳನ್ನು ಕಲಾಕಾರರ ಕೊಡಲು ಶ್ರಮಿಸಬೇಕು.

## ಹನಮಸಾಗರ ಕೌದಿ ಹೊಲಿಗಾರಿಕೆ : ಸಂಶೋಧನೆಯ ನಿರೀಕ್ಷೆಗಳು

**ಕೌದಿಯನ್ನು ಮತ್ತೆ ಜನಪ್ರಿಯಗೊಳಿಸಲು ಪಣ :** ಮಮತಾ ಸತ್ತೂರ ಎಂಬ ಧಾರವಾಡದ ಮಹಿಳೆಗೆ ನಮ್ಮ ದೇಸಿ ಸಂಸ್ಕೃತಿ ಎಂದರೆ ತುಂಬಾನೇ ಇಷ್ಟ! ಅದರಲ್ಲೂ ಕೌದಿ ಪಂಚಪ್ರಾಣ! ಜನಪದರ ರತ್ನಗಂಬಳಿಯಾಗಿದ್ದ ಕೌದಿಗೆ ಮಾಡರ್ನ್ ಟಚ್ ನೀಡಿ, ಆಧುನಿಕ ಜನರ ಮನಸ್ಸಿನಿಂದ ಮರೆಯಾಗಿರುವ ಕೌದಿಯನ್ನು ಪುನಃ ಜನಪ್ರಿಯಗೊಳಿಸಲು ಪಣ ತೊಟ್ಟಿದ್ದಾರೆ! ಆಧುನಿಕ ಯುಗದಲ್ಲೂ ಕೌದಿ ತಯಾರಿಕೆಯನ್ನೇ ತಮ್ಮ ಸ್ವಯಂ ಉದ್ಯೋಗವನ್ನಾಗಿಸಿಕೊಂಡಿದ್ದು ಶ್ರೀಮಂತರು, ಬಡವರೆನ್ನದೇ ಸದಾ ಬಳಸುವಂತೆ ಮಾಡಲು ಪ್ರಯತ್ನಿಸುತ್ತಿದ್ದಾರೆ. ಹತ್ತಾರು ಮಹಿಳೆಯರಿಗೆ ಕೌದಿ ತಯಾರಿಸುವ ಉದ್ಯೋಗವನ್ನೂ ನೀಡಿರುವ ಮಮತಾರವರಿಗೆ ತಮಗೆ ಲಾಭ ಮುಖ್ಯವಲ್ಲ ಕೌದಿ ಜನಪ್ರಿಯಗೊಳ್ಳುವುದೇ ಮುಖ್ಯವಂತೆ!!

ಸುಮಾರು ೧೦ ರಿಂದ ೧೮ ಮೀಟರ್ ಶುದ್ಧ ಹೊಸ ಹತ್ತಿ ಬಟ್ಟೆಯಿಂದ ತಯಾರಾಗುತ್ತಿವ ಕೌದಿಯು ಸೂಜಿಗಲ್ಲಿನಂತೆ ಜನರನ್ನು ಸೆಳೆಯಲು ಬಣ್ಣ ಬಣ್ಣದ ಬಟ್ಟೆಯನ್ನೇ ಬಳಕೆ ಮಾಡುತ್ತಿದ್ದಾರೆ. ಹತ್ತಾರು ನವ ನವೀನ ವಿನ್ಯಾಸಗಳಲ್ಲಿ ಕೈ ಹೊಲಿಗೆಯಿಂದಲೇ ತಯಾರಾಗುವ ರಂಗು ರಂಗಿನ ಕೌದಿಯನ್ನು ನೋಡಿದರೆ ಎಂಥವರಿಗೂ ಕೊಂಡುಕೊಳ್ಳುವ ಆಸೆ ಹುಟ್ಟಿಸುತ್ತವೆ.

ಧಾರವಾಡದ ಸಿರಿವಿಲೇಜ್ ಆರ್ಟ್ಸ್, ಕ್ರಾಸ್‌ಸ್ಟಿಚ್ ಡಿಸೈನರ್ ಮತ್ತು ಕೌದೀಸ್ ಸಂಸ್ಥೆ ಇದೀಗ 'ಮೇಕ್ ಇನ್ ಇಂಡಿಯಾ'ದಿಂದ ಪ್ರೇರಿತಗೊಂಡ ತಾಣವಾಗಿದ್ದು, ಸದ್ದಿಲ್ಲದೇ ಸಾಮಾಜಿಕ ಜಾಲತಾಣಗಳ ಮೂಲಕ ಸುದ್ದಿಯಾಗಿದೆ! ಅಂತರ್ಜಾಲದ ಮೂಲಕ ಫೇಸ್‌ಬುಕ್ ಮತ್ತು ಸಿರಿವಿಲೇಜ್ ಆರ್ಟ್ಸ್ ಹೊಕ್ಕಾಗ ದಿಕ್ಕೇ ಬದಲಾದಂತಾಯಿತು! ರೀ ಕನೆಕ್ಟ್, ವಾಲ್ ಮಾರ್ಟ್ ಮತ್ತು ರಿಯಾಜ್ ಕಂಪನಿಗಳು ಕೌದಿಗಳ ಸ್ಯಾಂಪಲ್ ಪಡೆದಿದ್ದು ಉತ್ತಮ ಮಾರುಕಟ್ಟೆಯನ್ನು ಸೃಷ್ಟಿಸಿಕೊಂಡಿದೆ! ಸಿಂಗಲ್, ಡಬಲ್ ಹಾಗೂ ಮೀಡಿಯಂ ಅಳತೆಗಳಲ್ಲಿ ಕೌದಿಗಳು ಈಗಾಗಲೇ ರಾಜ್ಯಾದ್ಯಂತ ಅನೇಕ ವಸ್ತು ಪ್ರದರ್ಶನಗಳಲ್ಲಿ ಪ್ರದರ್ಶನಗೊಂಡು ಭಾರೀ ಬೇಡಿಕೆ ಗಿಟ್ಟಿಸಿಕೊಂಡಿವೆ! ಮಮತಾ ಸತ್ತೂರರಂತೆ ಎಲ್ಲರೂ ಜನಪದರ ಪಾರಂಪರಿಕ ಕಸಬನ್ನು ಜನಪ್ರಿಯಗೊಳಿಸಲು ಪಣ ತೊಟ್ಟರೆ... ಪಾರಂಪರಿಕ ಕಸಬುಗಳು ಪುನಃ ತಮ್ಮ ವೈಭವವವನ್ನು ಮರಳಿ ಪಡೆದಾವು.

ನಮ್ಮ ಕುಪ್ಪಗಿ ಪರಿಸರದ ಕೌದಿಗಳು ಆಧುನಿಕ ಕೌದಿಗಳಿಗಿಂತ ಒಂದು ಹಜ್ಜೆ ಮುಂದಿವೆ! ಅಜ್ಜನ ಧೋತ್ರ, ಅಜ್ಜಿಯ ಸೀರೆ, ಅವ್ವನ ಕುಪ್ಪಸ, ಅಪ್ಪನ ಲುಂಗಿ, ತಂಗಿಯ ಲಂಗ, ತಮ್ಮನ ಅಂಗಿ, ಅಕ್ಕನ ದುಪ್ಪಟ್ಟಾ, ಅಣ್ಣನ ಬಣ್ಣದ ಕರವಸ್ತ್ರ... ಹೀಗೆ ಉಟ್ಟು ಬಿಟ್ಟ ಹಳೆಯ ಬಟ್ಟೆಗಳಿಂದ ತಯಾರಾದ ನೆನಪಿನ ಖಜಾನೆಯಂತಹ ಕೌದಿಯನ್ನು ಹಾಸಿ, ಹೊದ್ದುಕೊಳ್ಳುವುದೇ ಅಪ್ಯಾಯಮಾನ. ಆದರೂ ಹಳೆ ಬಟ್ಟೆಯಿಂದ ಕೌದಿ ಹೊಲಿಯುವವರ ಬದುಕು ಮೂರಾಬಟ್ಟೆಯಾಗುತ್ತಿರುವುದನ್ನು ತಪ್ಪಿಸಿ, ನಮ್ಮ ಸಂಶೋಧನೆಯು ಕೌದಿಯನ್ನು ಮತ್ತೆ ಜನಪ್ರಿಯಗೊಳಿಸಲು ಪ್ರಯತ್ನಿಸಲಿದೆ.

- ಕೌದಿ ಹೊಲಿಯುವ ಪಾರಂಪರಿಕ ವೃತ್ತಿಯನ್ನು ಗುಡಿ ಕೈಗಾರಿಕೆಗೆ ಒಳಪಡಿಸಬೇಕು. ಅಲ್ಲದೇ ಸೂಕ್ತ ಅನುದಾನವನ್ನೂ ನೀಡಬೇಕು.

- ಕೌದಿ ಹೊಲಿಯುವ ಕುಟುಂಬವು ಸಾಮಾನ್ಯವಾಗಿ ಬಡತನ, ಅನಕ್ಷರತೆಯಿಂದಾಗಿ ಅಭಿವೃದ್ಧಿ ಹೊಂದಿಲ್ಲದಿರುವುದರಿಂದ ಶಿಕ್ಷಣ, ಸೂಕ್ತನೆಲೆ, ಸರಕಾರದ ಸೌಲಭ್ಯಗಳನ್ನು ದಕ್ಕಿಸಿಕೊಳ್ಳಬೇಕಿದೆ.

- ನಮ್ಮ ಸರಕಾರವು ಆಧುನಿಕ ಶೈಲಿಯ ಕೌದಿ ತಯಾರಿಕೆಗೆ ಸೂಕ್ತ ಸಂಪನ್ಮೂಲ ವ್ಯಕ್ತಿಗಳಿಂದ ತರಬೇತಿ ನೀಡಬೇಕು.

- ಈ ಪಾರಂಪರಿಕ ಕಸಬು ಜನರಿಂದ ಮರೆಯಾಗದೇ ಮುಂದುವರಿಯುವಂತಾಗಲು ಸಾರ್ವಜನಿಕರ ಪ್ರೋತ್ಸಾಹ, ಜನಪದರ ಮನಸ್ಸು, ಹೊಲಿಸುವ ಹುಮ್ಮಸ್ಸು ಬೇಕಿದೆ.

- ಈ ಸಮುದಾಯದ ವೃದ್ಧ ಮಹಿಳೆಯರಿಗೆ ಜೀವನ ಭದ್ರತೆಗಾಗಿ ಪಿಂಚಣಿ ಸೌಲಭ್ಯ ಕಲ್ಪಿಸಬೇಕು.

- ಕೌದಿ ಹೊಲಿಯುವವರಿಗೆ ಸರಕಾರವೇ ಸೇವಾ ಭದ್ರತೆ ಒದಗಿಸಬೇಕು.

- ಕೋಲ್ಯಾಜ್ ಆರ್ಟ್‌ಗಳಂತಹ ಆಧುನಿಕ ಶೈಲಿಯ ಚಿತ್ರಕಲೆಳಿಗೆ ಕೌದಿಯೇ ಪ್ರೇರಣೆ! ಇಂತಹ ಕೌದಿ ಕಲೆಯನ್ನು ಚಿತ್ರಕಲೆಯ ಮೂಲಕ ಜನಪ್ರಿಯಗೊಳಿಸುವುದು.

- ಅನಂತ ಶ್ರಾಂದೇಯರವರ 'ಕೌದಿ' ಕಾದಂಬರಿಯು ಇತ್ತೀಚಿಗೆ ಚಲನಚಿತ್ರವಾಗಿ ಕೌದಿಯ ಮಹತ್ವ ಸಾರಿತು. ಅದರಂತೆಯೇ ಕೌದಿಯ ಬಗ್ಗೆ ಕಿರುಚಿತ್ರಗಳನ್ನು ಮಾಡುವುದು.

- ಗೋರವಿ ಆಲ್ದೂರುರವರು ತಮ್ಮ ಕವನ ಸಂಕಲನ 'ಮಡಿಲ ನೂಲಿನ ಕೌದಿ' ರಚಿಸಿ ಕೌದಿಯನ್ನು ಜನಪ್ರಿಯಗೊಳಿಸಿದಂತೆ ಸಾಹಿತ್ಯ ಕ್ಷೇತ್ರದ ದಿಗ್ಗಜರಿಂದ ಕೌದಿ ಜನಪ್ರಿಯಗೊಳ್ಳಬೇಕಾಗಿದೆ.

- ಕೌದಿ ಉದ್ಯಮವನ್ನು ಕೇಂದ್ರ ಸರಕಾರದ ಸಣ್ಣ ಮತ್ತು ಮಧ್ಯ ಪ್ರಮಾಣದ ಕೈಗಾರಿಕೆ ಇಲಾಖೆ ಗುರುತಿಸುಂತಾಗಬೇಕು.

- ಕೌದಿಯು ಮಳೆಗಾಲ, ಚಳಿಗಾಲ, ಬೇಸಿಗೆ ಕಾಲ ಹಾಗೂ ಬರಗಾಲಗಳಿಗೂ ಹೊಂದಾಣಿಕೆಯಾಗುವ ಮೂಲಕ ಆರೋಗ್ಯಯುತವಾದ ಪರಿಣಾಮ ಬೀರುತ್ತದೆ. ಇದನ್ನು ಜನರಲ್ಲಿ ವೈಜ್ಞಾನಿಕವಾಗಿ ಬಿಂಬಿಸಬೇಕಿದೆ.

- ಕೌದಿ ಉದ್ಯಮವು ಈಗಿನ ಮಾರುಕಟ್ಟೆಗೆ ತಕ್ಕಂತೆ ಹೊಂದಿಸಿಕೊಳ್ಳಬೇಕು. ಇದಕ್ಕೆ ಬ್ಯಾಂಕುಗಳು, ಸರಕಾರ ಸಹಕಾರ, ಸಹಾಯ ನೀಡಬೇಕು.

- ಬಹಳಷ್ಟು ಜನರು ಅವಲಂಬಿಸಿರುವ ಈ ಕಸಬನ್ನು ಪುನರುಜ್ಜೀವನಗೊಳಿಸಲು ಸಂಶೋಧನೆ ಕೈಗೊಂಡು, ಅವರ ಜೀವನಾಶ್ಯಕಗಳನ್ನೂ ಪೂರೈಸಲು ಸಣ್ಣ ಮತ್ತು ಮಧ್ಯ ಪ್ರಮಾಣದ ಕೈಗಾರಿಕೆ ಇಲಾಖೆ ಶ್ರಮಿಸಬೇಕು.

- ಆಧುನಿಕ ಶೈಲಿಗೆ ತಕ್ಕಂತೆ ಯುವ ಜನಾಂಗವನ್ನು ತರಬೇತುಗೊಳಿಸಿ, ವಿಭಿನ್ನ ಶೈಲಿಯ ಕೌದಿಗಳನ್ನು ತಯಾರಿಸುವ ಬಗ್ಗೆ ಯೋಚಿಸಬೇಕಿದೆ.

- ಹೊಸ ಆವಿಷ್ಕಾರಕ್ಕೆ ಇದೇ ಜನಾಂಗದ ನಿರುದ್ಯೋಗಿ ಜ್ಞಾನವಂತರನ್ನು ಸಂಶೋಧಕರೊಂದಿಗೆ ಜೊತೆಯಾಗಿಸಬೇಕು. ಇವರಿಂದಲೇ ಈ ಕೌದಿ ಉದ್ಯಮಕ್ಕೆ ನಾವಿನ್ಯತೆ ಮೂಡಿಸಿ, ಇದರಲ್ಲಿರುವ ನೈಜ ಹಾಗೂ ವೈಜ್ಞಾನಿಕ ಸತ್ಪರಿಣಾಮವನ್ನು ಜನರಿಗೆ ತಲುಪಿಸಿ, ಸೂಕ್ತ ಮಾರುಕಟ್ಟೆ ಒದಗಿಸಿದರೆ ಕೌದಿ ಹೊಲಿಯುವವರ ಬದುಕು ಉಜ್ವಲವಾದೀತು.

**ಕೊಪ್ಪಳ ಮಂಡಾಳು ತಯಾರಿಕೆ : ಸಂಶೋಧನೆಯ ನಿರೀಕ್ಷೆಗಳು :**

ನಮ್ಮ ದೇಶದ 'ದೇಸಿ' ಹಾಗೂ 'ಮಾರ್ಗ' ಪರಂಪರೆಯ ಉಪಹಾರದ ಸಂಕೇತವಾಗಿರುವ ಕೊಪ್ಪಳ ಮಂಡಾಳು ಬಟ್ಟಿಗಳು ಕ್ರಮೇಣ ಕ್ಷೀಣಿಸತೊಡಗಿದೆ! ಈ ಪಾರಂಪರಿಕ ವೃತ್ತಿಯು ಇಂದು ಆತಂಕದಲ್ಲಿದೆ. ಇದರ ಉಳಿವಿಗಾಗಿ ಸಮಾಜ ಮತ್ತು ಸರಕಾರ ಆತಂಕ ದೂರ ಮಾಡಲು ಸಂಶೋಧನೆಯ ಮೂಲಕ ಹೀಗೆ ಪ್ರಯತ್ನಿಸಬಹುದು. ಸರಕಾರದ ಅನೇಕ ಯೋಜ(ಚ)ನೆಗಳು ಎಲ್ಲರನ್ನೂ ತಲುಪುತ್ತಿಲ್ಲ.

- ಮಂಡಾಳು ಅಭಿವೃದ್ಧಿ ನಿಗಮವನ್ನು ಸ್ಥಾಪಿಸಬೇಕು. ವಿಶೇಷ ಯೋಜನೆಯ ಅಡಿಯಲ್ಲಿ ಕೊಪ್ಪಳದ ಹೆಮ್ಮೆಯ ಮಂಡಾಳು ಉತ್ಪಾದನೆ, ಮಾರಾಟ ಹಾಗೂ ಪ್ರಚಾರದ ಜವಾಬ್ದಾರಿಯನ್ನು ಹೊರುವ ಮೂಲಕ 'ವ್ಯಾಪಾರ ಸ್ವಾಮ್ಯ ಮುದ್ರೆ' (Trade Mark)ಯನ್ನು ಪಡೆಯುವಂತಾಗಬೇಕು.

- ಮಂಡಾಳು ತಯಾರಕನ ಜೀವನಮಟ್ಟ ಸುಧಾರಣೆ ಮಾಡುವುದು, ರಿಯಾಯಿತಿ ದರದಲ್ಲಿ ಮಂಡಾಳು ಬಟ್ಟಿಯ ಸಲಕರಣೆ ನೀಡುವುದು, ರಾಜ್ಯ ವಲಯ ವಸತಿ ಕಾರ್ಯಾಗಾರ ಯೋಜನೆಯ ಅಡಿಯಲ್ಲಿ ಕಡಿಮೆ ಬಡ್ಡಿದರದಲ್ಲಿ ಹಾಗೂ ದೀರ್ಘ ಕಂತುಗಳಲ್ಲಿ ಮಂಡಾಳು ತಯಾರಕನಿಗೊಂದು ಸೂರು ಒದಗಿಸುವುದು, ಆರೋಗ್ಯ ಬುತ್ತಿ ಯೋಜನೆ, ವರ್ಕ ಶೆಡ್ಡು ಕಟ್ಟಿಸಿಕೊಳ್ಳಲು ಅನುದಾನ ನೀಡಬೇಕು.

- ಮಂಡಾಳು ತಯಾರಕರಿಗೆ ಕಾರ್ಮಿಕರ ಎಲ್ಲ ಯೋಜನೆಗಳೂ ಎಲ್ಲರನ್ನೂ ತಲುಪುವಂತೆ ಬೀದಿ ನಾಟಕ, ಕಿರು ಚಿತ್ರ, ಜಾಹೀರಾತುಗಳ ಮೂಲಕ ಸಮರ್ಪಕವಾಗಿ ಪ್ರಯತ್ನಿಸುವುದು.

- ಇತ್ತೀಚಿಗೆ ಟಿ.ವಿ.ಗಳಲ್ಲಿ, ಸಿನೆಮಾಗಳಲ್ಲಿ ಕೊಪ್ಪಳ ಮಂಡಾಳಿನ ಪಾಕ ಪ್ರದರ್ಶನಕ್ಕೆ ಅವಕಾಶ ಕಲ್ಪಿಸುವುದು.

- ಮಂಡಾಳು ತಯಾರಕರ ಸಹಕಾರಿ ಸಂಘವನ್ನು ರಚಿಸಿ, ಅವರ ಬದಕು ಹಸನುಗೊಳಿಸಿ, ಅವರ ಭವಣೆ ನೀಗಿಸುವತ್ತ ದಿಟ್ಟ ಹೆಜ್ಜೆಯಿಡಬೇಕು. ಪ್ರೋತ್ಸಾಹಿಸಬೇಕು.

- ವಾರಕ್ಕೊಮ್ಮೆ ಅಂಗನವಾಡಿಯಲ್ಲಿ, ಅಕ್ಷರದಾಸೋಹದಲ್ಲಿ ಕೊಪ್ಪಳದ ಮಂಡಾಳಿನಿಂದ ಉಪಹಾರ ತಯಾರಿಸಲು ರಾಜ್ಯ ಸರಕಾರವೂ ಒಪ್ಪಿಗೆ ನೀಡುವಂತೆ ಪ್ರಯತ್ನಿಸುವುದು.

- ಇದಕ್ಕೆ ಪೂರಕವೆಂಬಂತೆ ಪ್ರಧಾನಿಯವರು 'ಬನ್ನಿ ಭಾರತದಲ್ಲಿ ನಿರ್ಮಾಣ ಮಾಡಿ' (Make in India) ಮಂಡಾಳು ತಯಾರಿಕೆಯ ವಿವಿಧ ಹಂತಗಳಲ್ಲಿ ಕೆಲಸ ಮಾಡುವ ಪ್ರತಿಯೊಬ್ಬರೂ ಮಾನವ ಸಂಪನ್ಮೂಲವಾಗಿದ್ದಾರೆ. ಅವರಲ್ಲಿ ಕೌಶಲ್ಯವಿದೆ. ಅವರನ್ನೇ ಬಳಸಿಕೊಂಡು ಮಂಡಾಳನ್ನು ಉತ್ಪಾದಿಸಿ ಅವರಿಗೆ ಯೋಗ್ಯವಾದ ಕೂಲಿಯನ್ನು ನಿಗಧಿಪಡಿಸಿದರೆ ನಿರುದ್ಯೋಗ ಸಮಸ್ಯೆ ತೊಲಗಬಹುದು.

- ಮಂಡಾಳು ತಯಾರಕರ ಬದುಕಿಗೆ ಉತ್ಸಾಹ ಮೂಡಿಸಬೇಕಾಗಿದೆ. ಕಡಿಮೆ ಬಡ್ಡಿದರದಲ್ಲಿ ಸಾಲ ಸೌಲಭ್ಯ ಒದಗಿಸಿ ಭತ್ತದ ಮೇಲೆ ರಿಯಾಯಿತಿ ನೀಡುವ ವ್ಯವಸ್ಥೆ ಮಾಡಿದರೆ ಮಾತ್ರ ಗುಳೆ ಹೋದ ಹಾಗೂ ಅನ್ಯ ಕೆಲಸಕ್ಕೆ ಅಂಟಿಕೊಂಡಿರುವ ಮಂಡಾಳು ತಯಾರಕರು ಮತ್ತೆ ಮರಳುತ್ತಾರೆ, ಅಳಿದು ಹೋಗಲಿರುವ ಕೊಪ್ಪಳ ಮಂಡಾಳು ದುಡಿಮೆಯೂ ಉಳಿಯುತ್ತದೆ.

- ಮಂಡಾಳು ತಯಾರಿಕಾ ಕಸಬನ್ನು ಕೇಂದ್ರ ಸರಕಾರದ ಸಣ್ಣ ಮತ್ತು ಮಧ್ಯ ಪ್ರಮಾಣದ ಕೈಗಾರಿಕೆ ಇಲಾಖೆ ಗುರುತಿಸುಂತಾಗಬೇಕು.

- ಮಂಡಾಳನ್ನು ಈಗಿನ ಮಾರುಕಟ್ಟೆಗೆ ತಕ್ಕಂತೆ ಹೊಂದಿಸಿಕೊಳ್ಳಬೇಕು. ಇದಕ್ಕೆ ಬ್ಯಾಂಕುಗಳು, ಸರಕಾರ ಸಹಕಾರ, ಸಹಾಯ ನೀಡಬೇಕು.

- ಬಹಳಷ್ಟು ಜನರು ಅವಲಂಬಿಸಿರುವ ಈ ಕಸಬನ್ನು ಪುನರುಜ್ಜೀವನಗೊಳಿಸಲು ಸಂಶೋಧನೆ ಕೈಗೊಂಡು, ಅವರ ಜೀವನಾಶ್ಯಕಗಳನ್ನೂ ಪೂರೈಸಲು ಸಣ್ಣ ಮತ್ತು ಮಧ್ಯ ಪ್ರಮಾಣದ ಕೈಗಾರಿಕೆ ಇಲಾಖೆ ಶ್ರಮಿಸಬೇಕು.

- ಹೊಸ ಆವಿಷ್ಕಾರಕ್ಕೆ ಇದೇ ಜನಾಂಗದ ನಿರುದ್ಯೋಗಿ ಜ್ಞಾನವಂತರನ್ನು ಸಂಶೋಧಕರೊಂದಿಗೆ ಜೊತೆಯಾಗಿಸಬೇಕು. ಇವರಿಂದಲೇ ಈ ಮಂಡಾಳು ತಯಾರಿಕೆಗೆ ನಾವಿನ್ಯತೆ ಮೂಡಿಸಿ, ಸೂಕ್ತ ಮಾರುಕಟ್ಟೆ ಒದಗಿಸಿದರೆ ಮಂಡಾಳು ತಯಾರಕರ ಬದುಕು ಉಜ್ವಲವಾದೀತು.

ಜಾಗತಿಕ ಮಾರುಕಟ್ಟೆ ಎನ್ನುವ ಹೆಸರಿನಲ್ಲಿ ನಮ್ಮ ನೆಲಮೂಲದ ಕಚ್ಚಾ ಸಾಮಗ್ರಿಗಳಿಂದಲೇ ಸಿದ್ಧಗೊಂಡ ದೈನಂದಿನ ವಸ್ತುಗಳಿಗೆ ಭಾರತದ ಹಳ್ಳಿ, ನಗರ, ಪಟ್ಟಣಗಳೇ ಮಾರುಕಟ್ಟೆಗಳಾಗಿವೆ. ಜಗತ್ತಿನಲ್ಲಿಯೇ ದ್ವಿತಿಯ ಸ್ಥಾನದಲ್ಲಿರುವ ನಮ್ಮ ಜನಸಮೂಹಕ್ಕಿಂತ ಬೇರೆ ಬಳಕೆದಾರರು ಬೇಕಿಲ್ಲ. ಆಧುನೀಕರಣ ಹಾಗೂ ಜಾಗತೀಕರಣದ ಹೆಸರಿನಲ್ಲಿ ನಡೆಯುತ್ತಿರುವ ಈ 'ಸಾಂಸ್ಕೃತಿಕ ದಂಗೆ' ನಿಲ್ಲಬೇಕು. ಪಾರಂಪರಿಕ ಕಸಬುದಾರ ದೇಸಿ ತಂತ್ರಜ್ಞರ ಮೇಲೆ ಆಗುತ್ತಿರುವ 'ಔದ್ಯೋಗಿಕ ದಾಳಿ'ಯನ್ನು ತಡೆಯಬೇಕಿದೆ. ನಮಗೆ ಹೊರಗಿನ ಜ್ಞಾನದ ಬೆಳಕು ಬೇಕಾಗಬಹುದು, ಆದರೆ ಆ ಬೆಳಕೇ ಬೆಂಕಿಯಾಗಿ ನಮ್ಮ ಸಂಸ್ಕೃತಿಯನ್ನು, ಅವುಗಳಿಗೆ ಪೂರಕವಾದ ಕಸಬುಗಳನ್ನೂ ಸುಟ್ಟು ಹಾಕಬಾರದು.

ನಮ್ಮವರು ಡಾಕ್ಟ್ರ, ಇಂಜನೀಯರ್, ಪ್ರೊಫೆಸರ್, ಕಮೀಷನರ್, ಟೀಚರ್, ಟೆಕ್ನಿಷೀಯನ್ ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ ಈ ಆಧುನಿಕ ಯುಗದಲ್ಲಿ ನಮ್ಮ ಕಸಬುದಾರರೂ ನಾನು ಕಾರ್ಪೆಂಟರ್, ಗೋಲ್ಡ್‌ಸ್ಮಿತ್, ಬ್ಲ್ಯಾಕ್‌ಸ್ಮಿತ್, ಸ್ಟೋನ್ ಕಟ್ಟರ್, ಸ್ಕಲ್ಪಚರ್, ಪಾಟರೀ ಎಕ್ಸ್‌ಪರ್ಟ್, ವೀವರ್, ಬ್ಲ್ಯಾಂಕೆಟ್ ಟೆಯ್ಲರ್ ಎಂದು ಹೆಮ್ಮೆಯಿಂದ ಹೇಳಿಕೊಳ್ಳುವಂತಾಗಬೇಕು. ನಮ್ಮ ನೆಲವೇ ನಮ್ಮ ಮಾರುಕಟ್ಟೆ, ನಮ್ಮ ಜನರೇ ನಮ್ಮ ಅನುಭೋಗಿಗಳು, ನಮ್ಮ ಪಾರಂಪರಿಕ ಕಸಬುದಾರರೇ ನಮ್ಮ ಉತ್ಪಾದಕರನ್ನಾಗಿಸುವ ಹಾಗೂ ಪಾರಂಪರಿಕ ತಂತ್ರಜ್ಞಾನವನ್ನು ಬೆಳೆಸಿ, ಉಳಿಸಬೇಕಾದ ಇಚ್ಛಾಸ(ಶ)ಕ್ತಿಯನ್ನು ಇಂದಿನ ಸರ್ಕಾರಗಳು ಹೊಂದಬೇಕಿದೆ. ಇದುವೇ ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

### ೪.೩ ನೇಪಥ್ಯಕ್ಕೆ ಸರಿಯುತ್ತಿರುವ ಪಾರಂಪರಿಕ ಕಸಬುಗಳು :

"'ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಪಂಪನ ಪ್ರಖ್ಯಾತ ನುಡಿಯಲ್ಲಿ ನಮ್ಮ ಸಮಕಾಲೀನ ಅರ್ಥಗಳನ್ನು ಬೆಸೆಯಲಿಕ್ಕೆ ಅವಕಾಶವಿದೆ. 'ದೇಶಿ ಮತ್ತು ಮಾರ್ಗಗಳ ಸಂಕಥನವನ್ನು ನಾವು ವೈರುದ್ಧ ದಿಕ್ಕಿನಿಂದ ಆಲೋಚಿಸದೆ ಇವೆರಡರ ಬೌದ್ಧಿಕ ಸಂಯೋಗವು ಅವುಗಳ ಅನನ್ಯತೆಯ ಅಂತರದಲ್ಲೂ ಹೇಗೆ ಸಾಧ್ಯ ಎಂಬುದರ ಕಡೆಗೆ ಆಸಕ್ತಿ ವಹಿಸಬೇಕಾಗುತ್ತದೆ. ಇವುಗಳ ಸಂಯೋಗ ಶಕ್ತಿಯಿಂದಲೇ ಆಧುನಿಕ ಜಗತ್ತಿನ ವಿವೇಕ ಮಾನವೀಯವಾಗಿ ಬೆಳೆಯಬೇಕಾಗಿದೆ ಎಂದು ನಂಬುವುದರಿಂದ ಮಾರ್ಗವನ್ನು ನಾವಿಲ್ಲಿನ ದೇಶಿಯ ಸಂಕಥನಕ್ಕೆ ಬೇಕಾದ ಇನ್ನೊಂದು ಆಯಾಮವೆಂದೇ ತಿಳಿಬೇಕು. ದೇಶಿ ಮತ್ತು ಮಾರ್ಗ ಸಂವೇದನೆಗಳೆರಡರ ನಿರಂತರ

ಆಕರ್ಷಣೆಯಿಂದಲೇ ನಮಗೆ ಆಧುನಿಕ ಜಗತ್ತಿನ ಪ್ರವೇಶ ಸಾಧ್ಯವಾಗಿದೆ."[೨೩] ಹೀಗಾಗಿ ನಾವಿಂದು ಆಧುನೀಕರಣ, ಜಾಗತೀಕರಣ, ಪಾಶ್ಚಾತ್ಯೀಕರಣ, ನಗರೀಕರಣ, ಸಾಂಸ್ಕೃತೀಕರಣ, ಔದ್ಯೋಗಿಕರಣ ಹಾಗೂ ಕೈಗಾರಿಕೀಕರಣಗಳಿಗೆ ಒಳಗಾಗಿದ್ದೇವೆ.

ಆಧುನೀಕರಣ ಹಾಗೂ ಜಾಗತೀಕರಣದ ಸುಳಿಗೆ ಸಿಲುಕಿ ಜಾನಪದ ಕಣ್ಮರೆಯಾಗುತ್ತಿದೆ, ಅದು ತುಂಬಾ ಅಪಾಯದಲ್ಲಿದೆ! ಹೀಗೊಂದು ಅಭಿಪ್ರಾಯದ ಅಪಾಯದ ಅಲೆ ಮನಸ್ಸಿಗೆ ಅಪ್ಪಳಿಸುತ್ತಿದ್ದಂತೆ ಜಾನಪದ ಹಿತೈಷಿಗಳು, ಜಾನಪದ ತಜ್ಞರು ಜಾಗೃತರಾಗಿ ಅದರ ಉಳಿವಿಗಾಗಿ ಆಸಕ್ತಿ ತೋರಿಸಲು ಆರಂಭಿಸಿದರು; ಕೇವಲ ಮೌಖಿಕ ಜಾನಪದ ಸಾಹಿತ್ಯ ಲೋಕದಲ್ಲಿ ಹುಡುಕಾಟ ಪ್ರಾರಂಭಿಸಿದರು. ಅದನ್ನು ಲಿಖಿತ ರೂಪಕ್ಕಿಳಿಸಲೂ ಕಂಕಣಬದ್ಧರಾದರು. ಜಾನಪದ ವಸ್ತು ಸಂಸ್ಕೃತಿಯೂ ಆಧುನೀಕರಣದ ಸುಳಿಗೆ ಸಿಲುಕಿ ಪಾತಾಳ ಸೇರುತ್ತದೆ ಎಂಬುದನ್ನು ಕಿಂಚಿತ್ತೂ ಗಮನಿಸಲಿಲ್ಲ! ಹಾಗಿದ್ದರೆ, ಅದನ್ನು ಜಾನಪದದ ಪಟ್ಟಿಯಲ್ಲಿ ಸೇರಿಸಿರಲಿಲ್ಲವೇ? ಹಾಗೊಂದು ಅನುಮಾನ ಸುಳಿದರೂ ತಪ್ಪೇನಿಲ್ಲ! ತಡವಾಗಿಯಾದರೂ ವಸ್ತು ಸಂಸ್ಕೃತಿ ಜಾನಪದ ಬಳಗಕ್ಕೆ ಸೇರಿಸಿಕೊಂಡಿದೆ! ಇದರಲ್ಲಿಯೂ ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದ ಮೌಖಿಕ ಸಾಹಿತ್ಯದಂತೆಯೇ ಪರಂಪರೆಯ ಪ್ರಭಾವ, ಪ್ರಾದೇಶಿಕ ಹಾಗೂ ಪ್ರತ್ಯೇಕತೆಯ ಪ್ರಭಾವದಿಂದಾಗಿ ತೀವ್ರ ಬದಲಾವಣೆಗೂ ಈಡಾಗುತ್ತದೆ. ಇಲ್ಲಿಯೂ ದೇಸಿ ಜ್ಞಾನ, ಸಿದ್ಧ ಸೂತ್ರಗಳು, ತಾಂತ್ರಿಕತೆ, ಕೌಶಲ್ಯತೆ ಇತ್ಯಾದಿಗಳಿವೆ. ಕೃಷಿ, ಪಶುಪಾಲನೆ ಹಾಗೂ ಕರಕುಶಲತೆಗಳು ತುಂಬಾ ಪ್ರಾಚೀನತೆಯನ್ನು ಹೊಂದಿದ ವೃತ್ತಿಗಳಾಗಿದ್ದು, ಇವುಗಳೂ ವಸ್ತು ಸಂಸ್ಕೃತಿಯ ವ್ಯಾಪ್ತಿಗೆ ಬರುತ್ತವೆ. ಪಾರಂಪರಿಕ ಕಸಬುಗಳೂ ಇದೇ ವ್ಯಾಪ್ತಿಗೆ ಬರುತ್ತವೆ. ಆದರೆ ಈ ಬಗ್ಗೆ ವಸ್ತು ಸಂಸ್ಕೃತಿಯ ಅಧ್ಯಯನಕಾರರು ಗಮನ ಹರಿಸಿಲ್ಲ ಎಂದು ಹೇಳುತ್ತಿಲ್ಲ; ಗಮನ ಹರಿಸಿದವರು ತುಂಬಾ ವಿರಳವೆಂದೇ ಹೇಳಬೇಕಿದೆ!

ಆಧುನೀಕರಣ, ಜಾಗತೀಕರಣ ಪ್ರಕ್ರಿಯೆಯ ವೇಗ ಅಪರಿಮಿತವಾದಷ್ಟೂ ಅಪಾಯವೂ ತಪ್ಪಿದ್ದಲ್ಲ. ಆಧುನಿಕ ಕೈಗಾರಿಕೆಗಳಿಗೆ ವ್ಯಾವಹಾರಿಕ ಭಾಷೆ ಹಾಗೂ ಆ ಮೂಲಕ ಲಾಭ ನಷ್ಟಗಳೇ ಪ್ರಮುಖವಾಗುತ್ತವೆ. ಆದರೆ ಸಾಂಪ್ರದಾಯಿಕ ಕಸಬುಗಳನ್ನು ಅವಲಂಬಿಸಿ ಬದುಕುವ ಸಮುದಾಯಗಳಿಗೆ ವ್ಯವಹಾರಕ್ಕಿಂತಲೂ ಸಾಂಸ್ಕೃತಿಕ ಬದುಕು ಮುಖ್ಯವಾಗುತ್ತದೆ. ಆಧುನೀಕರಣ, ಜಾಗತೀಕರಣಗಳ ದಾಳಿಯಲ್ಲಿ ಏಕಸಂಸ್ಕೃತಿ, ಏಕ ಜೀವನಶೈಲಿ, ಏಕಭಾಷಾಧಿಪತ್ಯಕ್ಕೆ ಜಗತ್ತನ್ನು ಹೊತ್ತೊಯ್ಯಲು ಸಜ್ಜಾಗಿವೆ. ಇದರ

ದುಷ್ಪರಿಣಾಮವೇ ವೈವಿಧ್ಯತೆಯ ಬಹುಮುಖೀ ಸಂಸ್ಕೃತಿಗಳ ಸಾವು. ಆ ಸಾವಿನಲ್ಲಿ ಪಾರಂಪರಿಕ ಕಸಬುಗಳೂ ಇವೆ ಎಂಬುದು ಆಘಾತಕಾರಿ ಅಂಶ.

ಚಲನಶೀಲ ಸಮಾಜದಲ್ಲಿ ಹಿಂದಿನ ನಂಬಿಕೆಗಳು, ಪದ್ಧತಿಗಳು, ಆಚರಣೆಗಳು, ಅಭಿರುಚಿಗಳು ಬದಲಾವಣೆಗೊಂಡು ಕುಲಕಸಬುಗಳು ಇಂದು ಪರ್ಯಾಯ ಕಸಬುಗಳನ್ನು ಹುಡುಕಿಕೊಂಡಿವೆ ಇಲ್ಲವೇ ಅವುಗಳನ್ನು ಕೈಬಿಟ್ಟಿವೆ! ಹಬ್ಬಹರಿದಿನಗಳ ಸಾಂಸ್ಕೃತಿಕ ಲಕ್ಷಣಗಳನ್ನೂ ಆಧುನಿಕ ಮಾರುಕಟ್ಟೆಗಳು ಪ್ರತಿಬಿಂಬಿಸುತ್ತವೆ. ಪಾರಂಪರಿಕ ಅಗತ್ಯಗಳನ್ನು ಪೂರೈಸುವ ಮಾರುಕಟ್ಟೆಗಳಲ್ಲಿ ಆಯಾ ಪರಂಪರೆಗೆ ಸಂಬಂಧಿಸಿದ ವಸ್ತು ವಿಶೇಷಗಳು ಮಾರಾಟವಾಗುತ್ತಿವೆ. ಅವು ಮಣ್ಣಿನ ಮೂರ್ತಿಗಳಾಗಿರಬಹುದು, ಸಕ್ಕರೆ ಗೊಂಬೆಗಳಾಗಿರಬಹುದು, ಹಣತೆಗಳಾಗಿರಬಹುದು. ಒಟ್ಟಾರೆ ಇಂದು ಆಧುನಿಕ ಜನರ ಆಸೆ-ಅಭಿಲಾಷೆಗಳಿಗಾಗಿ ಮಾರುಕಟ್ಟೆಗಳು ಜನಪದರ ಸಾಂಸ್ಕೃತಿಕ ಅಂಶಗಳನ್ನು ಹೇಗೆ ಪ್ರತಿಬಿಂಬಿಸುತ್ತಿವೆ ಎಂಬುದನ್ನು ತಿಳಿಯುವುದು, ಅವುಗಳಿಂದಲೇ ಪಾರಂಪರಿಕ ಕಸಬುಗಳು ಅನಾಥಸ್ಥಿತಿಗೆ ಹೇಗೆ ತಲುಪಿವೆ ಎಂಬುದನ್ನು ಅರಿಯುವುದು ಮುಖ್ಯವಾಗಿದೆ. ಆರ್ಥಿಕ ಸ್ವಾವಲಂಬನೆಗಾಗಿ ಕಸಬುದಾರರಲ್ಲದವರೂ ಈ ಕಸಬುಗಳನ್ನು ಕೈಗೊಂಡು ಮೂಲ ಕಸಬುದಾರರಿಗೆ ಸಾಕಷ್ಟು ಪೈಪೋಟಿ ನೀಡುತ್ತಿರುವುದರಿಂದಲೂ ಕೆಲವು ಮೂಲ ಕಸಬುದಾರರ ಸ್ಥಿತಿ ಅಧೋಗತಿಗಿಳಿದಿದೆ!

ಪಾರಂಪರಿಕ ವೃತ್ತಿಗಳನ್ನು ಗಮನಿಸಿದಾಗ ಕೆಲವು ಅಂಶಗಳು ಗಮನಕ್ಕೆ ಬರುತ್ತವೆ. ಈ ದೇಶದಲ್ಲಿ ಬುದ್ಧಿಶಕ್ತಿಗೆ ಕೊಟ್ಟ ಪ್ರಾಮುಖ್ಯತೆಯನ್ನು ದೈಹಿಕಶಕ್ತಿಗೆ ಕೊಡಲಿಲ್ಲ. ಜೊತೆಗೆ ದೈಹಿಕ ಶಕ್ತಿಯ ಕೆಲವು ಕೆಲಸಗಳನ್ನು ಸಹ ಕೀಳು ಮನೋಭಾವದಲ್ಲಿ ಕಾಣುವ ಪರಂಪರೆ ಮೊದಲಿನಿಂದಲೂ ಬೆಳೆದು ಬಂದಿದೆ. ಹಾಗಾಗಿ ಕೆಲವೊಂದು ಬುಡಕಟ್ಟುಗಳು ತಮ್ಮ ಮೂಲ ಕಸಬುಗಳನ್ನು ಬಿಡುತ್ತಿವೆ. ಹಾಗಾಗಿ ಅವರಿಗೆ ಇಷ್ಟವಿಲ್ಲದವುಗಳು ಆ ಕಸಬುಗಳಾಗಿವೆ. ಇಂತಹ ಸಂದರ್ಭದಲ್ಲಿ ಸಮುದಾಯವೊಂದು ಕಸಬನ್ನು ಬಿಟ್ಟು ಬೇರೆ ಕಸಬನ್ನು ಮಾಡಲು ನಿರ್ಧರಿಸಿದರೆ ಅದನ್ನು ಗೌರವಿಸಬೇಕು. ಏಕೆಂದರೆ ಆ ಕಸಬು ಅವನಿಗೆ ಸಂಭವಿಸಲಿರುವ ನೋವು, ಹಿಂಸೆ, ಹಸಿವು, ದಾರಿದ್ರ್ಯ ಮುಂತಾದವುಗಳಿಂದ ಅವನನ್ನು ರಕ್ಷಿಸುತ್ತದೆ. "ನಾಗರಿಕ ಜಗತ್ತಿನ ಜನರು ಹೊಸದಾಗಿ ಆವಿಷ್ಕಾರಗೊಂಡ ತಂತ್ರಜ್ಞಾನಕ್ಕೆ ಹೋದರೆ ನಾವು ಅವರಿಗೆ ಮನ್ನಣೆ ನೀಡುತ್ತೇವೆ. ಸಮಾಜದಲ್ಲಿ ಅವರಿಗೆ ಉನ್ನತ ಸ್ಥಾನಮಾನ ನೀಡುತ್ತೇವೆ. ಹಾಗೆಯೇ ಬುಡಕಟ್ಟು ಸಮುದಾಯಗಳೂ ಸಹ ಹೊಸ ಕಸಬನ್ನು ಮಾಡಲು ನಿರ್ಧರಿಸಿದರೆ ಅವರಿಗೆ ಅವಕಾಶ ಕಲ್ಪಿಸಿಕೊಡುವ ಮುಖಾಂತರ

ಮಾನವೀಯತೆಯನ್ನು ಮರೆಯಬೇಕು. ಸಾಂಸ್ಕೃತಿಕ ಅನನ್ಯತೆಯ ಹೆಸರಿನಲ್ಲಿ ಹಾಗೇ ಇರುವಂತೆ ಹೇಳುವುದು ಅವರಿಗೆ ಅನ್ಯಾಯ ಮಾಡಿದಂತಾಗುತ್ತದೆ."[೨೪]

ಇದೇ ಸಂದರ್ಭದಲ್ಲಿ "ಕೈಗಾರಿಕೀಕರಣ ಇಲ್ಲವೇ ನಾಶ" ಎಂದು ಸರ್. ಎಮ್. ವಿಶ್ವೇಶ್ವರಯ್ಯನವರು ಕರೆ ನೀಡಿದ್ದು ಒಂದೆಡೆಯಾದರೆ; ಬೃಹತ್ ಕೈಗಾರಿಕೆಗಳನ್ನು "ಆಧುನಿಕ ಭಾರತದ ದೇಗುಲಗಳು" ಎಂದು ಜವಾಹರಲಾಲ ನೆಹರೂರವರು ಕರೆ ನೀಡಿದ್ದು ಮತ್ತೊಂದೆಡೆ; ನಮ್ಮ ದೇಶದ ಗ್ರಾಮಗಳಿಗೆ, ಗೃಹ(ಗುಡಿ)ಕೈಗಾರಿಕೆಗಳಿಗೆ ಮಾರಕವಾಗಿ ಪರಿಣಮಿಸಿತು ಎಂದು ಹೇಳಬಹುದು. ಆಧುನಿಕರಣ, ಕೈಗಾರಿಕೀಕರಣ, ಜಾಗತೀಕರಣ, ನಗರೀಕರಣಗಳ ಸ್ಪರ್ಶಪ್ರಭಾವ ಇಂದು ಜಾನಪದೀಯ ಸಂಸ್ಕೃತಿಯ ಬೇರುಗಳನ್ನು ಕತ್ತರಿಸಿ ಹಾಕುತ್ತಿರುವಂತೆ ಭಾಸವಾಗುತ್ತದೆ. ಕೈಗಾರಿಕೀಕರಣವು ಗ್ರಾಮ ಗುಡಿಕೈಗಾರಿಕೆ ಮತ್ತು ವಂಶಪಾರಂಪರ್ಯ ಕಸಬುಗಳನ್ನು ಶಿಥಿಲಗೊಳಿಸಿತು. ಹಳೆಯ ಕುಲಕಸಬುಗಳು ಕಣ್ಮರೆಯಾಗಿ ನವೀನ ವೃತ್ತಿಗಳು ಪ್ರಾರಂಭವಾದವು. ಅಲ್ಲದೇ ಬ್ರಾಹ್ಮಣ ಮತ್ತು ಶೂದ್ರ ಒಟ್ಟಿಗೆ ಸೇರಿ ಕೆಲಸ ಮಾಡುವಂತಾಗಲು ನಗರೀಕರಣ, ಆಧುನೀಕರಣ, ಜಾಗತೀಕರಣ ಹಾಗೂ ಕೈಗಾರಿಕೀಕರಣಗಳೇ ಕಾರಣಗಳಾಗಿವೆ.

ಉತ್ತಮ ಸಂಸ್ಕೃತಿಗೆ, ಸಾಂಸ್ಕೃತಿಕ ಬದುಕಿಗೆ ಜಗತ್ತಿಗೇ ಮಾದರಿಯಾಗಿರುವ ಭಾರತದ ಜನಪದರ ಬದುಕು ಆಧುನಿಕತೆಯ ಸೋಗಿನಲ್ಲಿ ಸದ್ದಡಗುತ್ತಿರುವುದು ನಮ್ಮ ದೇಶದ ಭವ್ಯ ಪರಂಪರೆ ಅಧಃಪತನಕ್ಕೆ ನಾಂದಿಯಾಗಲಿರುವುದು ವಿಪರ್ಯಾಸವೇ ಸರಿ! ಈ ಭವ್ಯ ಪರಂಪರೆಯನ್ನು ಉಳಿಸಿ–ಬೆಳೆಸಿಕೊಂಡು ಹೋಗಲು ನಮ್ಮ ಪರಂಪರೆ ಹಾಗೂ ಪಾರಂಪರಿಕ ಕಸಬುಗಳನ್ನು ಪುನಃಶ್ಚೇತನಗೊಳಿಸುವುದೂ ತೀರಾ ಮುಖ್ಯವಾಗಿದೆ.

**ಬತ್ತಿ ಹೋಗುತ್ತಿರವ ದೇಸಿ ಜ್ಞಾನಧಾರೆ :** "ಐದು ಪ್ರಮುಖ ಕಾರಣಗಳಿಂದಾಗಿ ಇಂದು ನಮ್ಮ ಸ್ಥಳೀಯರ ಜ್ಞಾನ ಪರಂಪರೆ ಅತಿ ಶೀಘ್ರವಾಗಿ ಶಿಥಿಲವಾಗುತ್ತಿದೆ. ಕಣ್ಮರೆಯಾಗುತ್ತಿದೆ. ೧) ಅರಣ್ಯ ಮತ್ತು ಪರಿಸರ ನಾಶ. ೨) ಆಧುನಿಕ ಕೃಷಿ ವಿಧಾನ. ೩) ಶಿಕ್ಷಣ ಮಾಲಿನ್ಯ ಮತ್ತು ಸಾಂಸ್ಕೃತಿಕ ಮಾಲಿನ್ಯ. ೪) ಪರಿಸರ ನಿರಾಶ್ರಿತರಾಗಿ ನಗರಗಳ ಕಡೆ ವಲಸೆ. ೫) ಪರಭಾರೆಯಾಗುತ್ತಿರುವ ಪರಂಪರಾಗತ ಜ್ಞಾನ."[೨೫]

ಈ ನಿಟ್ಟಿನಲ್ಲಿ ಯೋಚಿಸಿದಾಗ ಪರಿಸರ ನಿರಾಶ್ರಿತರಾಗಿ ನಗರೀಕರಣದ ಸಮ್ಮೋಹಿನಿಗೆ ಒಳಗಾಗುತ್ತಿರುವ ಅನೇಕ ಪರಂಪರಾಗತ ಜ್ಞಾನ ಹೊಂದಿದ್ದ ಕಸಬುದಾರರ ನೆಲಮೂಲ ಜ್ಞಾನವನ್ನೆಲ ತ್ಯಜಿಸಬೇಕಾಗುತ್ತದೆ. ಆ ಒಂದು ಪೀಳಿಗೆಯ ನಂತರ ಅವೆಲ್ಲ ಪಾರಂಪರಿಕ

ಜ್ಞಾನವೂ ಕಣ್ಮರೆಯಾಗುತ್ತದೆ. ಜನಪದರ ಅಭಿಲಾಷೆಗಳು ಹಿಂದಿನ ಸಂಸ್ಕೃತಿಗೆ ಅನುಗುಣವಾಗಿದ್ದಾಗ ಪಾರಂಪರಿಕ ಕಸುಬುದಾರರ ಸಾಮಾಜಿಕ ಜೀವನಮಟ್ಟ ಉತ್ತಮವಾಗಿಯೇ ಇತ್ತು. ಸಾಮಾಜಿಕ ಜೀವನದಲ್ಲಿ ಕಸುಬುದಾರರಿಗೆ 'ಉತ್ತಮ'ವಾದ ಹಾಗೂ ಅವರಿಗೆಂದೇ 'ಮೀಸಲಾದ ಸ್ಥಾನ'ವಿತ್ತು. ಆ ಸ್ಥಾನವು ಪವಿತ್ರ ಮನೋಭಾವನೆಯನ್ನೂ ಹೊಂದಿದ್ದನ್ನು ಜನಪದರ ಚಾರಿತ್ರಿಕ ಅಧ್ಯಯನದಿಂದ ತಿಳಿದುಕೊಳ್ಳಬಹುದಾಗಿದೆ. ಆಯಗಾರಿಕೆ, ವಸ್ತುವಿನಿಮಯ ಪದ್ಧತಿಯ ಸಂದರ್ಭದಲ್ಲಿ ಅವರ ಆರ್ಥಿಕಸ್ಥಿತಿ ಕೂಡಾ ಉತ್ತಮವಾಗಿತ್ತು.

ಆದರೆ..... ಈಗೀಗ ಇಲ್ಲಿ ಉತ್ಪಾದನೆಯಾದ ವಸ್ತುಗಳು ಅನುಭೋಗಿಗಳನ್ನು ಹುಡುಕಿಕೊಂಡು ಹೋಗಲೇ ಬೇಕಿದೆ. ಕಸಬುದಾರರು ಉತ್ಪಾದಿಸಿದ ವಸ್ತುಗಳು ಗ್ರಾಹಕರಿಗೆ ಆಕರ್ಷಣೀಯವಾಗಿ ಮಾತುಗಾರಿಕೆಯ ಮೋಡಿಯ ಮೂಲಕ ಸರಕು ಮಾರಾಟ ಮಾಡಬೇಕಾಗಿದೆ. ಕಸಬುದಾರರ ವಸ್ತುಗಳ ಉತ್ಪಾದನೆಯಲ್ಲಿ ಹಣರೂಪಿ ವೆಚ್ಚಕ್ಕಿಂತ ನೈಜ ವೆಚ್ಚ ಅಧಿಕವಾಗಿರುತ್ತದೆ. ಆಧುನಿಕ ಜಗತ್ತಿನ ತಾಂತ್ರೀಕೃತ ಜ್ಞಾನವು ನಮ್ಮ ಮೇಲೆ ದಾಳಿ ಮಾಡುತ್ತಿರುವುದರಿಂದ ಇದೀಗ ದೇಸಿ ಚಿಂತನೆಯ ಪುನರುಜ್ಜೀವನ ಅನಿವಾರ್ಯವಾಗಿದೆ.

*

**ಅಡಿ ಟಿಪ್ಪಣಿಗಳು :**

೧ Amartya Sen, 2015, ON ETHICS AND ECONOMICS, Oxford University Press, New Delhi.
Page-3

೨ ಜಗದೀಶಕೊಪ್ಪ. ಎನ್., ೨೦೦೮, ಜಾಗತೀಕರಣ ಮತ್ತು ಗ್ರಾಮ ಭಾರತ, ಸಿಂಚನ ಗ್ರಂಥಮಾಲೆ, ಹಾವೇರಿ.
ಪುಟ–೧೫೪

೩ ನೀಲತ್ತಹಳ್ಳಿ ಕಸ್ತೂರಿ, ೨೦೧೪, ಗಾಂಧೀ ತತ್ವ ಚಿಂತನೆ, ಪ್ರಸಾರಾಂಗ, ಕನ್ನಡ ವಿವಿ, ಹಂಪಿ. ಪುಟ–೪೭

೪ ಮೊಗಳ್ಳಿ ಗಣೇಶ್,೨೦೦೮, ನಡುಗಾಲದ ಕನ್ನಡನಾಡು,ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ,ಹಂಪಿ, ವಿದ್ಯಾರಣ್ಯ. ಪುಟ–೧೬೬

೫ ವಿಠ್ಠಪ್ಪ ಗೋರಂಟ್ಲ, ೨೦೧೪, ನೇಕಾರ ವೃತ್ತಿಯಲ್ಲಿ ಯಜಮಾನ ಮತ್ತು ನೇಕಾರರು, (ಇದರಲ್ಲಿ ; **‘ನೇಕಾರ ಸಮಾಜ ಸಂಸ್ಕೃತಿ ಆರ್ಥಿಕ ಸ್ಥಿತಿಗತಿ’**. ಸಂಪಾದಕ–ಡಾ. ಸಿ. ಮಹದೇವ.), ಪ್ರಸಾರಾಂಗ, ಕನ್ನಡ ವಿವಿ ಹಂಪಿ. ಪುಟ–೩೪

೬ ಮಂಜುಳಾ ಸಿ.ಜೆ., ೨೦೧೬, **ಕೈಮಗ್ಗ ವಲಯದ ಕಾಯಕಲ್ಪಕ್ಕೆ ಕಸುವು**, ಪ್ರಜಾವಾಣಿ (ಮಂಗಳವಾರ, ಆಗಸ್ಟ್ ೯, ೨೦೧೬, ಕಡೆಗೋಲು ಅಂಕಣ) ಬೆಂಗಳೂರು. ಪುಟ–೬

೭ ಮಲ್ಲಿಕಾರ್ಜುನ ಬನ್ನಿ, ೨೦೧೦, **ಗುಳೇದಗುಡ್ಡದ ಖಣಗಳು**, ಪ್ರಸಾರಾಂಗ, ಕನ್ನಡ ವಿವಿ ಹಂಪಿ, ಪುಟ–೨

೮ ಕೆ. ಶರಣಪ್ಪ ನಿಡಶೇಸಿ, ೨೦೦೨, ‘ಮಾನ ಮುಚ್ಚುವವರ ಬದುಕು ಬೆತ್ತಲೆ’, (ಬುಧವಾರ, ೮ನೇ ಮೇ ೨೦೦೨ರ ಪ್ರಜಾವಾಣಿ ಪತ್ರಿಕೆಯ, ವಾಣಿಜ್ಯ ಪುರವಣಿ), ಪ್ರಜಾವಾಣಿ, ಬೆಂಗಳೂರು.

೯ ಶರತ್ ಹೆಗ್ಡೆ, ೨೦೧೫, ಕೇಶ ಉದ್ಯಮದ ಕ್ಲೇಷ (ಬುಧವಾರ, ೧೦ ಮೇ ೨೦೧೫ರ ಪ್ರಜಾವಾಣಿಯ ವಾಣಿಜ್ಯ ಪುರವಣಿ), **ಪ್ರಜಾವಾಣಿ**, ಬೆಂಗಳೂರು. ಪುಟ–೪

೧೦ ನೀಲತ್ತಹಳ್ಳಿ ಕಸ್ತೂರಿ, ೨೦೧೪, ಗಾಂಧೀ ತತ್ವ ಚಿಂತನೆ, ಪ್ರಸಾರಾಂಗ, ಕನ್ನಡ ವಿವಿ, ಹಂಪಿ. ಪುಟ–೪೭

೧೧ ಅದೇ ಪುಟ–೭೬

೧೨ ನಿಂಗಣ್ಣ ಚಿ.ಸಿ., ೨೦೧೨, **ಜಾಗತೀಕರಣ ಮತ್ತು ಜಾನಪದ,** ಬಸವ ಪ್ರಕಾಶನ, ಗುಲಬರ್ಗಾ. ಪುಟ-೪೩

೧೩ ಶ್ರೀಧರ. ಬಿ.ಎ., ೨೦೦೮, **ಬಾಪು ಚಿಂತನೆ,** ಮುದ್ದುಶ್ರೀ ಗ್ರಂಥಮಾಲೆ ೫೫. ಬೆಂಗಳೂರು. ಪುಟ-೧೭೬ & ೧೭೭

೧೪ ವಿಠ್ಠಪ್ಪ ಗೋರಂಟ್ಲಿ, ೧೯೯೩, ಈ ನೆಲದೊಡಲಲ್ಲಿ, ಸತ್ಯಾನ್ವೇಷಿ ಪ್ರಕಾಶನ, ಭಾಗ್ಯನಗರ-ಕೊಪ್ಪಳ. ಪುಟ-೫೮.

೧೫ ಬಸಪ್ಪ ಬಂಗಾರಿ, ೨೦೧೪, ಪಾರಂಪರಿಕ ಸಂವಹನ ಮತ್ತು ಸರ್ಕಾರ, ಬಂಗಾರಿ ಪಬ್ಲಿಕೇಶನ್ಸ್, ಗೊಟಗೋಡಿ. ಪುಟ-೩೯

೧೬ ಪ್ರಸನ್ನ, ೨೦೦೯, **ಯಂತ್ರಗಳನ್ನು ಕಳಚೋಣ ಬನ್ನಿ,** ಒಂಟಿದನಿ ಪ್ರಕಾಶನ, ಹೆಗ್ಗೋಡು. ಪುಟ-೨೭

೧೭ ರಾಮ ಮನೋಹರ ಲೋಹಿಯಾ, ಕೆ.ವಿ.ಸುಬ್ಬಣ್ಣ (ಅನು), ನಟರಾಜ ಹುಳಿಯಾರ್.(ಸಂ), ೨೦೧೧, **‘ರಾಮಮನೋಹರ ಲೋಹಿಯಾರವರ ಚಿಂತನೆ’,** ಪ್ರಸಾರಾಂಗ, ಕನ್ನಡ ವಿವಿ ಹಂಪಿ. ಪುಟ-೨೯೫

೧೮ ಪ್ರಸನ್ನ, ಎಸ್ಕೆ. ಕೊನೆಸಾಗರ(ಸಂ) ಮತ್ತು ಸಂಗಮೇಶ ಕೋಟಿ(ಸಂ)೨೦೧೬, **ಸಂಗಮ ಸೊಗಸು,** ಸಂಗಮ ಪ್ರಕಾಶನ, ಹುನಗುಂದ. ಪುಟ-೧೭.

೧೯ ಪ್ರಸನ್ನ, ೨೦೦೯, **ಯಂತ್ರಗಳನ್ನು ಕಳಚೋಣ ಬನ್ನಿ,** ಒಂಟಿದನಿ ಪ್ರಕಾಶನ, ಹೆಗ್ಗೋಡು. ಪುಟ-VII.

೨೦ ಮಹೇಶ ತಿಪ್ಪಶೆಟ್ಟಿ, ೨೦೦೦, **ಇಳಕಲ್ಲ ಸೀರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ-೨೫

೨೧ ಪಾಂಡುರಂಗ ಹೆಗಡೆ, ೨೦೧೫, **ಸ್ವಕುಳಸಾಳಿ ವಾರ್ತೆ,** ಸ್ವಕುಳಸಾಳಿ ವಾರ್ತೆ, (೧೫.೧.೨೦೧೫ರ ಮಾಸ ಪತ್ರಿಕೆ.) ಹುಬ್ಬಳ್ಳಿ. ಪುಟ-೬೫

೨೨ ಶೈಲೇಂದ್ರಕುಮಾರ ಗಾಂಗುಲಿ, ಗಿರಿಜಾ ಶಾಸ್ತ್ರಿ (ಅನು), ೨೦೧೩, **ಆಧುನಿಕ ಭಾರತಕ್ಕೆ ನಮ್ಮ ಪರಂಪರೆಯ ಅಗತ್ಯ,** ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು. ಪುಟ-೫

೨೩ ಮೊಗಳ್ಳಿ ಗಣೇಶ್, ಡಾ. ಮಂಜುನಾಥ ಬೇವಿನಕಟ್ಟಿ(ಸಂ), ಜೂನ್-೨೦೦೨, **ಜಾನಪದ ಕರ್ನಾಟಕ,** ಪ್ರಸಾರಾಂಗ, ಕನ್ನಡ ವಿವಿ ಹಂಪಿ. ಪುಟ-೧೧

೨೪ ಮಂಜುನಾಥ ಬೇವಿನಕಟ್ಟಿ, ೨೦೧೬, **ತಳಾದಿ,** ಅರುಣ್ ಪ್ರಕಾಶನ, ಬೆಂಗಳೂರು. ಪುಟ-೫೧ & ೫೨

೨೫ ನಾಗೇಶ ಹೆಗಡೆ, ೨೦೧೩, ಘಟಕೋತ್ಸವ ಭಾಷಣ (**ನುಡಿ ಹಬ್ಬ ೨೨ರ ಘಟಕೋತ್ಸವ ಭಾಷಣ**, ದಿನಾಂಕ – ೨೧. ೧೨. ೨೦೧೩), ಕನ್ನಡ ವಿಶ್ವ ವಿದ್ಯಾಲಯ, ಹಂಪಿ. ವಿದ್ಯಾರಣ್ಯ. ಪುಟ–೧೬ & ೧೭

*

ಅಧ್ಯಾಯ ಐದು

# ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳು ಮತ್ತು ಆಧುನೀಕರಣ

ಸುಮಾರು ೫೫೦೦ ವರ್ಷಗಳಷ್ಟು ಲಿಖಿತ ಪ್ರಾಚೀನ ಪರಂಪರೆ ಭಾರತೀಯ ಸಮಾಜಕ್ಕಿದೆ. ತನ್ನದೇ ಆದ ಸಾಂಸ್ಕೃತಿಕ ಚೌಕಟ್ಟಿಗೆ ಅಂಟಿಕೊಂಡಂತೆ ಕಂಡರೂ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ, ಔದ್ಯೋಗಿಕ ಅವತರಣಿಕೆಗಳು ಅತಿ ಸನಾತನವಾದ ಮತ್ತು ಭಿನ್ನವಾದ ರೂಪದಲ್ಲಿ ಇಂದಿಗೂ ಜೀವಂತವಾಗಿದೆ. ಹಾಗೆಯೇ ಜಾನಪದವೂ ಕೂಡ! "ಡಂಡೆಸ್‌ರ ಪ್ರಕಾರ ಜನಪದರು ಎಂದರೆ ಕಸಬು, ಭಾಷೆ, ಧರ್ಮ ಹೀಗೆ ಯಾವುದೇ ಸಾಮಾನ್ಯ ಅಂಶವನ್ನು ಒಳಗೊಂಡಂತಹ ನಿರ್ದಿಷ್ಟ ಪರಂಪರೆಯುಳ್ಳ ಗುಂಪು. ಇಂತಹ ಗುಂಪುಗಳು ನಿರ್ದಿಷ್ಟ ಭೌಗೋಳಿಕ ಪರಿಸರದಲ್ಲಿ ವಾಸಿಸುತ್ತಿದ್ದಿರಬಹುದು. ಈ ದೃಷ್ಟಿಯಿಂದ ನಗರದಲ್ಲಿ ವಾಸಿಸುವ ಜನಸಮುದಾಯಗಳೂ ಸಹ ಜನಪದರು ಎನಿಸಿಕೊಳ್ಳುತ್ತವೆ. ಇಂತಹ ಗುಂಪುಗಳ ಉತ್ಪತ್ತಿಯೇ ಜಾನಪದ."[೧] ಇವುಗಳಲ್ಲಿ ಕ್ಷಿಪ್ರ ಬದಲಾವಣೆಗಳನ್ನು ಕಾಣಲು ತನ್ನದೇ ಆದ ಪಾರಂಪರಿಕ ಸಮಾಜದ ಚೌಕಟ್ಟಿಗೆ ಅಂಟಿಕೊಳ್ಳಬಾರದು. ಇದನ್ನೇ ಡಾರ್ಸನ್‌ರು ಹೀಗೆ ಹೇಳಿದ್ದಾರೆ – "ಜಾನಪದ ಎಂಬುದು ಗ್ರಾಮೀಣ ಜನಪದರಿಗಷ್ಟೇ ಸೀಮಿತವಾಗಬೇಕಿಲ್ಲ. ಅದು ಪರಂಪರೆಯತ್ತ ಮುಖ ಮಾಡಿದ ಅನಾಮಧೇಯ ಜನ ಸಮೂಹಗಳನ್ನು ಸೂಚಿಸುತ್ತದೆ."[೨]

'ಬದಲಾವಣೆ ಜಗದ ನಿಯಮ' ಎಂದು ಭಗವದ್ಗೀತೆಯಲ್ಲಿ ಹೇಳಿದ್ದರೂ, ಅದಕ್ಕೆ ತುಂಬಾ ಗೌರವ ಕೊಡುವ ಭಾರತದಲ್ಲಿ ಬದಲಾವಣೆ ಬಯಸುವುದು ತೀರಾ ವಿರಳ! 'ಭಾರತೀಯ ಸಮಾಜದಲ್ಲಿ ಬದಲಾವಣೆ ಅಸಾಧ್ಯದ ಮಾತು ; ಅದೊಂದು ಕಲ್ಲು ಬಂಡೆ!' ಎಂದು ಪಾಶ್ಚಾತ್ಯ ಭಾರತೀಯ ಸಮಾಜಶಾಸ್ತ್ರಜ್ಞರು (Indologists) ಅಚಲವಾಗಿ ನಂಬಿದ್ದರು. ಯಂತ್ರಗಳನ್ನು ತನ್ನ ಉತ್ಪಾದನೆಗೆ ತೊಡಗಿಸಿದ ಮೊದಲ ಉದ್ಯಮವೇ ಮಗ್ಗದ ಅಥವಾ ಬಟ್ಟೆಗಿರಣಿಗಳ ಉದ್ಯಮ. ಇಂಗ್ಲೆಂಡಿನ ಈ ಉದ್ಯಮವು ತನ್ನ ವಿಕಾಸಕ್ಕೆ ಬೇಕಾದ ಚೈತನ್ಯ ಶಕ್ತಿಯನ್ನು ತನ್ನ ದೇಶದ ಹೊರಗಿನಿಂದ ಪಡೆದುಕೊಂಡಿತು. ಈ ಹೊರ ದೇಶವೇ ಭಾರತ! ಆದರೆ... ಇಂದು ನಮ್ಮ ಸಮಾಜವೂ ಸಾಕಷ್ಟು ಬದಲಾವಣೆಯನ್ನು ಕಂಡಿದೆ, ಕಾಣುತ್ತಿದೆ, ಕಾಣಲೂ ಬಯಸುತ್ತಿದೆ.

ಆದರೂ ಆಧುನಿಕ ಸಂದರ್ಭದಲ್ಲಿ ಜಾನಪದ ಚಲನೆಯ ಅಳಿವು ಉಳಿವುಗಳ ಬಗ್ಗೆ ಸಾಕಷ್ಟು ಚಿಂತನೆಗಳು ನಡೆದಿವೆ. ಆಧುನೀಕರಣ ಹಾಗೂ ಕೈಗಾರಿಕೀಕರಣಗಳ ಪ್ರಭಾವ, ತ್ವರಿತ ಜಾಗತೀಕರಣ ಹಾಗೂ ನಗರೀಕರಣದ ಪ್ರಭಾವಗಳಿಂದಾಗಿ ಜಾನಪದವು ಬಹು ಬೇಗನೇ ಅಳಿಸಿ ಹೋಗುತ್ತದೆ ಎನ್ನುವ ಆತಂಕ ಒಂದೆಡೆಯಾದರೆ; ಜಾನಪದಕ್ಕೆ ನಿರಂತರ ಚಲನೆಯಿದ್ದು, ಅದು ಭೂತದಲ್ಲಿ ಸೃಷ್ಟಿಯಾಗಿದ್ದರೂ ವರ್ತಮಾನ ಹಾಗೂ ಭವಿಷ್ಯತ್ಕಾಲದಲ್ಲಿಯೂ ಕೂಡ ಜೀವಂತವಾಗಿ ಮುಂದುವರೆಯುತ್ತದೆ ಎನ್ನುವ ವಾದ ಇನ್ನೊಂದೆಡೆ ಇದೆ.

ಇಂದು ಜಾನಪದವು ಗ್ರಾಮೀಣ ಮತ್ತು ನಗರ ಸಂಸ್ಕೃತಿಗಳ ಸಮ್ಮಿಲನಕ್ಕೆ ಕಾರಣವಾಗಿದೆ. ಅಲ್ಲದೆ ಬದಲಾದ ರೂಪದಲ್ಲಿ ಇಂದಿಗೂ ಜನತ ಸಂಸ್ಕೃತೀಕರಣದ ಭಾಗವಾಗಿ ನಿರಂತರ ಚಲನೆಯಲ್ಲಿದೆ! ಏಕೆಂದರೆ ಗ್ರಾಮೀಣ ಜನರು ಉದ್ಯೋಗ ಅರಸಿಕೊಂಡು ನಗರಕ್ಕೆ ಬಂದು ನೆಲೆಸಿದ್ದರಿಂದ ನಗರದಲ್ಲಿಯೂ ಗ್ರಾಮೀಣ ಜಾನಪದ ಸೊಗಡಿದೆ. ಹಾಗೆಯೇ ನಗರಗಳು ಬೆಳೆಯುತ್ತಾ ಅಕ್ಕಪಕ್ಕದಲ್ಲಿರುವ ಹಳ್ಳಿಗಳನ್ನು ತನ್ನ ಗರ್ಭದಲ್ಲಿರಿಸಿಕೊಳ್ಳುತ್ತಿರುವುದರಿಂದ ಅಲ್ಲಿಯೂ ಗ್ರಾಮೀಣ ಜಾನಪದ ಸೊಗಡು ಸಮ್ಮಿಲನಗೊಂಡು ಹೊಸತೊಂದು ಜಾನಪದ ಹುಟ್ಟುತ್ತಿರುವಂತೆ ಭಾಸವಾಗುತ್ತಿದೆ.

"'ಕಾರ್ಖಾನೆ ಜಾನಪದ – ನಗರದಲ್ಲಿ ಆಧುನಿಕ ಅರ್ಥದ 'ವೃತ್ತಿ ಸಮುದಾಯಗಳು' 'ಜನಪದ'ಗಳಾಗಿ ಕಾರ್ಯನಿರ್ವಹಿಸುತ್ತಿವೆ. ಜಾನಪದ ಎನ್ನುವುದು ಮನುಷ್ಯನ ದೈಹಿಕ ಮತ್ತು ಮಾನಸಿಕ ಚಟುವಟಿಕೆಗಳಿಗೆ ಸಂಬಂಧಿಸಿದ ನಿರ್ದಿಷ್ಟ ಜನಪದದ ಆಶೋತ್ತರಗಳನ್ನು ಈಡೇರಿಸಿ, ಅದರ ಸೃಜನಶೀಲತೆಯ ಅಭಿವ್ಯಕ್ತಿಗಳಾಗಿ ಸಾಂಸ್ಕೃತಿಕ ಒದುಕನ್ನು ತುಂಬಿಕೊಡುವಂಥದ್ದು."[೩]

ಕುಲಕಸಬುಗಳೆಂಬ ಕೂಸುಗಳು ಗ್ರಾಮಗಳೆಂಬ ತೊಟ್ಟಿಲಲ್ಲಿ ಬೆಳೆದು, ಆಧುನೀಕರಣವೆಂಬ ಪಾಕೆಟ್ ಹಾಲನ್ನು ಕುಡಿದು ಯಂತ್ರ ಸಾಮ್ರಾಜ್ಯವನ್ನು ಕಟ್ಟಕೊಂಡು ಆಳರಸರಂತೆ ವರ್ತಿಸುತ್ತಿವೆ! ಇದಲ್ಲವೇ ಬದಲಾವಣೆ? ಅಷ್ಟಕ್ಕೂ ಆಧುನಿಕತೆಯ ಪ್ರಭಾವ ಎಂದರೆ ಸರಕು ಮತ್ತು ಸಂಸ್ಕೃತಿ ಸಾಮಗ್ರಿಗಳ ಬಳಕೆಯಲ್ಲಿ ಆಗಿರುವ ಸ್ಥಿತ್ಯಂತರವಷ್ಟೆ. ಉಪಭೋಗ ಬೆಳೆದಿದೆಯೇ ಹೊರತು ವ್ಯಕ್ತಿಯ ಆಂತರ್ಯದಲ್ಲಿ ಹೆಚ್ಚಿನ ಬದಲಾವಣೆಗಳಾಗಿಲ್ಲ. ಬಾಗಿಲಿಗೆ ಮಾವಿನ ತೋರಣದ ಬದಲು ಪ್ಲಾಸ್ಟಿಕ್ ಮಾವಿನ

ತೋರಣಗಳಿವೆ, ಮಣ್ಣಿನ ಗಣೇಶನ ಬದಲು ಪ್ಲಾಸ್ಟರ್ ಆಫ್ ಪ್ಯಾರೀಸ್ ಗಣೇಶ ಬಂದಿದ್ದಾನೆ, ಅಷ್ಟೇ!

ಹೀಗೆ ಆಧುನೀಕರಣ ಪ್ರಕ್ರಿಯೆಯಿಂದಾಗಿ ನಾವಿಂದು ಸಂಕ್ರಮಣ ಕಾಲದಲ್ಲಿದ್ದೇವೆ. ಉತ್ಪಾದನಾ ಕ್ಷೇತ್ರದಲ್ಲಿ ಹಳೆಯ ವ್ಯವಸ್ಥೆಗೆ ಹೊಸ ವ್ಯವಸ್ಥೆ ಜನ್ಮ ನೀಡುತ್ತಿದೆ! ಇದರಿಂದ ಹಲವಾರು ಪಾರಂಪರಿಕ ಕಸಬುದಾರರಿಗೆ ಹಲವು ರೀತಿಯ ತೊಂದರೆಗಳಾಗುವುದು ಸ್ವಾಭಾವಿಕ. ಏಕೆಂದರೆ ಈ ಕಸಬುಗಳಿಗೆ ಒಂದು ಪರಂಪರೆಯಿದೆಯೇ ಹೊರತು ಯಾವುದೇ ವಿಧವಾದ ತರಬೇತಿಯಿಲ್ಲ. ಅಲ್ಲದೇ ಜನಸಮುದಾಯವೂ ಪಾರಂಪರಿಕ ಕಸಬುಗಳಲ್ಲಾದ ಬದಲಾವಣೆಯನ್ನೇ ವಿರೋಧಿಸುತ್ತಿದ್ದಾರೆ! ಅದರ ಬದಲಾಗಿ 'ಆ ತೊಂದರೆಗಳ ತೀವ್ರತೆ ಹಾಗೂ ತೀಕ್ಷ್ಣತೆಗಳನ್ನು ಕಡಿಮೆ ಮಾಡುವ ಬಗ್ಗೆ ಯೋಚಿಸಬೇಕೇ ಹೊರತು ಸಮಗ್ರ ಬದಲಾವಣೆಯನ್ನಲ್ಲ' ಎಂಬುದರ ಬಗ್ಗೆ ಕಿಂಚಿತ್ತೂ ಯೋಚಿಸಿದಂತೆ ಕಾಣುತ್ತಿಲ್ಲ! ಯಾಂತ್ರೀಕರಣದಂತಹ ಬದಲಾವಣೆಯ ಪ್ರಕ್ರಿಯೆಯಲ್ಲಿ ಬಹಳಷ್ಟು ಜನ ತಮ್ಮ ಪಾರಂಪರಿಕ ಕಸಬುಗಳನ್ನು ಕಳೆದುಕೊಳ್ಳುತ್ತಿದ್ದಾರೆಂಬ ಆಘಾತದಲ್ಲಿ, ಪ್ರಗತಿಪರರು ಬದಲಾವಣೆಯನ್ನೇ ವಿ'ರೋಧಿಸು'ವ ಬದಲು, ಅದೇ ಕ್ಷೇತ್ರದ ಅರ್ಥವ್ಯವಸ್ಥೆಯಲ್ಲಿ ಬೇರೆ ಬೇರೆ ಉದ್ಯೋಗ ಸೃಷ್ಟಿಸುವ ಬಗ್ಗೆ ಆಲೋಚಿಸಬೇಕೇ ವಿನಃ ಅವರ ಯಂತ್ರರಹಿತ ಕೆಲಸಗಳನ್ನು ಅವರಿಗೆ ಹಿಂದಿರುಗಿಸುವುದಲ್ಲ! ಇದಕ್ಕೆ ಕುಷ್ಟಗಿ ಪರಿಸರದಲ್ಲಿರುವ ಪಾರಂಪರಿಕ ಕಸಬುಗಳೂ ಹೊರತಾಗಿಲ್ಲ! 'ಮೇಕ್ ಇನ್ ಇಂಡಿಯಾ'ಕ್ಕೆ ಪುಷ್ಠಿ ಕೊಡುವಂತೆ ಆಧುನಿಕತೆಯ ಸ್ಪರ್ಶ ನೀಡಿ ಪಾರಂಪರಿಕ ಕಸಬುದಾರರನ್ನು ಪರಿವರ್ತಿಸುವ ಮೂಲಕ ಅವರ ಕಸಬುಗಳನ್ನು ಪುನಃಶ್ಚೇತನಗೊಳಿಸಿ ಉಳಿಸಿ, ಸಾಂಸ್ಕೃತಿಕ ವೈಶಿಷ್ಟ್ಯತೆಯನ್ನು ಕಾಪಾಡುವುದು ಅನಿವಾರ್ಯವಾಗಲಿದೆ.

ಆಧುನೀಕರಣ, ಕೈಗಾರಿಕೀಕರಣ, ಜಾಗತೀಕರಣ, ಖಾಸಗೀಕರಣ, ನಗರೀಕರಣಗಳ ಸ್ಪರ್ಶಪ್ರಭಾವ ಇಂದು ಜಾನಪದೀಯ ಸಂಸ್ಕೃತಿಯ ಬೇರುಗಳನ್ನು ಕತ್ತರಿಸಿ ಹಾಕುತ್ತಿರುವಂತೆ ಭಾಸವಾಗುತ್ತದೆ. ಚಲನಶೀಲ ಸಮಾಜದಲ್ಲಿ ಹಿಂದಿನ ನಂಬಿಕೆಗಳು, ಪದ್ಧತಿಗಳು, ಆಚರಣೆಗಳು, ಅಭಿರುಚಿಗಳು ಬದಲಾವಣೆಗೊಂಡು ಕುಲಕಸಬುಗಳು ಇಂದು ಪರ್ಯಾಯ ಕಸಬುಗಳನ್ನು ಹುಡುಕಿಕೊಂಡಿವೆ ಇಲ್ಲವೇ ಅವುಗಳನ್ನು ಕೈಬಿಟ್ಟಿವೆ! ಹಬ್ಬಹರಿದಿನಗಳ ಸಾಂಸ್ಕೃತಿಕ ಲಕ್ಷಣಗಳನ್ನೂ ಆಧುನಿಕ ಮಾರುಕಟ್ಟೆಗಳು ಪ್ರತಿಬಿಂಬಿಸುತ್ತವೆ. ಪಾರಂಪರಿಕ ಅಗತ್ಯಗಳನ್ನು ಪೂರೈಸುವ ಮಾರುಕಟ್ಟೆಗಳಲ್ಲಿ ಆಯಾ ಪರಂಪರೆಗೆ ಸಂಬಂಧಿಸಿದ ವಸ್ತು ವಿಶೇಷಗಳು ಮಾರಾಟವಾಗುತ್ತಿವೆ. ಅವು ಮಣ್ಣಿನ ಮೂರ್ತಿಗಳಾದ

ಬಸವಣ್ಣ, ಗಣೇಶ, ಗೌರಿ, ಶೀಗವ್ವ, ಹುತ್ತದ ಮಣ್ಣಿನ ನಾಗರಗಳಾಗಿರಬಹುದು, ಗೌರಿ ಹುಣ್ಣಿಮೆ ಹಾಗೂ ಶೀಗಿ ಹುಣ್ಣಿಮೆಗೆ ಹೆಂಗೆಳೆಯರು ಬೆಳಗುವ ಸಕ್ಕರೆ ಆರತಿ ಗೊಂಬೆಗಳಾಗಿರಬಹುದು, ದೀಪಾವಳಿ ಹಾಗೂ ಇತರೆ ಧಾರ್ಮಿಕ ಕಾರ್ಯದಲ್ಲಿ ಅತ್ಯಾವಶ್ಯಕವಾಗಿ ಉಪಯೋಗಿಸುವ ಹಣತೆಗಳಾಗಿರಬಹುದು.

ಒಟ್ಟಾರೆ ಇಂದು ಆಧುನಿಕ ಜನರ ಆಸೆ–ಅಭಿಲಾಷೆಗಳಿಗಾಗಿ ಮಾರುಕಟ್ಟೆಗಳು ಜನಪದರ ಸಾಂಸ್ಕೃತಿಕ ಅಂಶಗಳನ್ನು ಹೇಗೆ ಪ್ರತಿಬಿಂಬಿಸುತ್ತಿವೆ ಎಂಬುದನ್ನು ತಿಳಿಯುವುದು, ಅವುಗಳಿಂದಲೇ ಪಾರಂಪರಿಕ ಕಸಬುಗಳು ಅನಾಥಸ್ಥಿತಿಗೆ ಹೇಗೆ ತಲುಪಿವೆ ಎಂಬುದನ್ನು ಅರಿಯುವುದು ಮುಖ್ಯವಾಗಿದೆ. ಆರ್ಥಿಕ ಸ್ವಾವಲಂಬನೆಗಾಗಿ ಕಸಬುದಾರರಲ್ಲದವರೂ ಈ ಕಸಬುಗಳನ್ನು ಕೈಗೊಂಡು ಮೂಲ ಕಸಬುದಾರರಿಗೆ ಸಾಕಷ್ಟು ಪೈಪೋಟಿ ನೀಡುತ್ತಿರುವುದರಿಂದಲೂ ಕೆಲವು ಕಸಬುದಾರರ ಸ್ಥಿತಿ ಅಧೋಗತಿಗಿಳಿದಿದೆ!

ಮೂಲ ಜನಪದರ ಕಸಬುಗಳು ಆಧುನೀಕರಣಗೊಂಡು ಪುನಃ ಮಾರುಕಟ್ಟೆಯನ್ನು ಪ್ರವೇಶಿಸುತ್ತಿವೆ. ಜಾಗತೀಕರಣದ ಮುಖ್ಯ ಉದ್ದೇಶವೇ ಆಯಾ ದೇಶದ ಸಂಸ್ಕೃತಿಯನ್ನು ಅಧ್ಯಯನ ಮಾಡುವ ಮೂಲಕ ಅಲ್ಲಿನ ಜನಪದರ ಜೀವನಕ್ಕೆ ಅವಶ್ಯಕವಾದ ವಸ್ತುಗಳನ್ನು ಉತ್ಪಾದಿಸುವುದಾಗಿದೆ. ಅಂದಾಗ ಮಾತ್ರ ಯಾವುದೇ ಬಹುರಾಷ್ಟ್ರೀಯ ಕಂಪನಿಗಳು ಆ ದೇಶದಲ್ಲಿ ಜನಮನ್ನಣೆ ಗಳಿಸಿ, ಜನರ ದೈನಂದಿನ ಜೀವನದಲ್ಲಿ ಪವಿತ್ರ ಸ್ಥಾನ ಗಳಿಸಲು ಸಾಧ್ಯ. ಈ ನಿಟ್ಟಿನಲ್ಲಿ ಕೈಗಾರಿಕಾ ಜಾನಪದ ಅತ್ಯಂತ ಅವಶ್ಯಕವಾಗಿದೆ. ಅಂದರೆ ಉತ್ಪಾದನಾ ವಿಧಾನ ಬದಲಾದಾಗ ಜಾನಪದದ ಸ್ವರೂಪವೂ ಬದಲಾಗುತ್ತದೆ. ದೇಸಿ ಜೀವನ ಪದ್ಧತಿ ಎಂದಾಕ್ಷಣ ಮಾನವ ಚರಿತ್ರೆಗೆ ಹಿಮ್ಮುಖ ನಡಿಗೆ ಸಾಧ್ಯವಿಲ್ಲ! ಆದರೆ ಅದಕ್ಕೆ ಆಧುನಿಕತೆಯ ಸ್ಪರ್ಶ ನೀಡಿ ಪುನರುಜ್ಜೀವನಗೊಳಿಸಬೇಕಿದೆ. ಕಸಬುಗಳು ಪುನಃ ಹಿಂದಿನಂತೆಯೇ ಪುನರ್ಜನ್ಮ ಪಡೆಯಲಿ ಎಂಬ ಉದ್ದೇಶ ಇಲ್ಲಿಲ್ಲ. ಅನಕ್ಷರಸ್ಥರು ಹಾಗೂ ನಿರುದ್ಯೋಗಿಗಳಿಗೆ ಅವರ ಪಾರಂಪರಿಕ ಕಸಬನ್ನೇ ತರಬೇತಿ ನೀಡಿ; ಪರಂಪರೆ ಹಾಗೂ ಆಧುನಿಕತೆಗಳ ನಡುವಿನ ಬಿಕ್ಕಟ್ಟಿಗೆ ಶಾಂತವಾದ, ಪರಿಸರಸ್ನೇಹಿಯಾದ ಪರಿಹಾರ ಖಂಡಿತಾ ಸಾಧ್ಯವಿದೆ!

ಮಹಾತ್ಮಾ ಗಾಂಧೀಜಿ ಮೊದಲ್ಗೊಂಡು ಲಿಯೋ ಟಾಲ್‌ಸ್ಟಾಯ್, ಬಾಬಾ ಸಾಹೇಬ ಅಂಬೇಡ್ಕರ್, ರಾಮಮನೋಹರ ಲೋಹಿಯಾ, ಹೆಗ್ಗೋಡು ಪ್ರಸನ್ನ ಮುಂತಾದವರು ಸಲಹೆಯಿತ್ತ ಪಾರಂಪರಿಕ ಕಸಬುಗಳು ಪರಿಸರ ಸ್ನೇಹಿಯಾದ ಹಾಗೂ ಸ್ಥಳೀಯವಾಗಬಲ್ಲ

ಜೀವನ ಪದ್ಧತಿಯೊಂದನ್ನು 'ಅಭಿವೃದ್ಧಿ' ಪರಿಕಲ್ಪನೆಯ ಮೂಲಕ ಪುನರ್ ವಿಮರ್ಶೆಗೆ ಒಳಗಾಗಿಸುವುದು ಈ ಅಧ್ಯಯನದ ಉದ್ದೇಶ.

**ಆಧುನೀಕರಣ : ಅರ್ಥ ಮತ್ತು ವ್ಯಾಖ್ಯಾನಗಳು :**

ಬದಲಾವಣೆ ಪ್ರಕ್ರಿಯೆಯೇ ಆಧುನೀಕರಣದ ಪರಿಕಲ್ಪನೆಯಾಗಿದೆ. ಆಧುನೀಕರಣ ಹಾಗೂ ಪಾಶ್ಚಾತ್ಯೀಕರಣ ಇವೆರಡೂ ಅವಳಿ ಪ್ರಕ್ರಿಯೆಗಳು, ಒಟ್ಟಿಗೆ ಜಾರಿಯಲ್ಲಿದ್ದವು. ಆಧುನೀಕರಣ ಪ್ರಕ್ರಿಯೆಯು ಬಹುತೇಕ ದೇಶಗಳಲ್ಲಿ ವಸಹತುಶಾಹಿ ಹಾಗೂ ಬಂಡವಾಳಶಾಹಿಯೊಂದಿಗೇ ಆರಂಭಗೊಂಡರೂ ೧೯೫೦ರ ಸಂದರ್ಭವು ಅಭಿವೃದ್ಧಿ ಹಾಗೂ ಆಧುನೀಕರಣ ಒಟ್ಟೊಟ್ಟಿಗೇ ತಳುಕು ಹಾಕಿಕೊಂಡ ಒಂದು ವಿಶಿಷ್ಟ ಕಾಲ ಎನಿಸಿದೆ. ಇದಕ್ಕೆ ಮುಖ್ಯ ಸೂತ್ರದಾರನೇ ಹ್ಯಾರಿ ಟ್ರೂಮನ್. ಏಕೆಂದರೆ ಈತನೇ ಆಗ ತಾನೆ ಸ್ವತಂತ್ರಗೊಂಡ ದೇಶಗಳಿಗೆ ಆಧುನಿಕತೆಯನ್ನು ಅನುಸರಿಸಲು, ಅಳವಡಿಸಿಕೊಳ್ಳಲು ಹೀಗೆ ಕರೆ ನೀಡಿದನು –"ಪ್ರಜಾಸತ್ತಾತ್ಮಕ ನ್ಯಾ ಬದ್ಧ ವ್ಯವಾಹರದ ಒಂದು ಅಭಿವೃದ್ಧಿ ಆಧಾರಿತ ಯೋಜನೆಯು ಪರಿಕಲ್ಪನೆಯನ್ನು ಏನು ನಾವು ಪ್ರತಿಪಾದಿಸುತ್ತೇವೆ; ಶಾಂತಿ ಮತ್ತು ಸಮೃದ್ಧಿಗೆ ಹೆಚ್ಚಿನ ಉತ್ಪಾದನೆಯೇ ಕೀಲಿಗೈ ಮತ್ತು ಆಧುನಿಕ ವೈಜ್ಞಾನಿಕ ಮತ್ತು ತಾಂತ್ರಿಕ ಜ್ಞಾನದ ವ್ಯಾಪಕವಾದ ಮತ್ತು ತೀವ್ರತರವಾದ ಅನ್ವಯಿಕತೆಯೇ ಹೆಚ್ಚಿನ ಉತ್ಪಾದನೆಗೆ ಕೀಲಿಗೈಯಾಗಿದೆ.ಆದರೆ ಇತ್ತೀಚೆಗೆ ಜಾಗತೀಕರಣದ ಆಗಮನದೊಂದಿಗೆ ಆಧುನೀಕರಣ ಪ್ರಕ್ರಿಯೆ ಮೂರ್ತಗೊಂಡಿದೆ. ಆಧುನಿಕ ಜೀವನ ಶೈಲಿ ಹಾಗೂ ಕ್ರಮಗಳ ಜೊತೆಗೆ ಮೌಲ್ಯಗಳನ್ನು ರೂಢಿಸಿಕೊಳ್ಳುವ ಪ್ರಕ್ರಿಯೆ ಇದಾಗಿದೆ. ಹೀಗಾಗಿ ಸಾರ್ವತ್ರಿಕವೂ ಆಗಿದೆ. ಜ'ಗತ್ತಿನ' ಎಲ್ಲಾ ಸಮಾಜಗಳೂ ತಮ್ಮನ್ನು ಆಧುನೀಕರಣಕ್ಕೆ ಅಣಿಗೊಳಿಸಿಕೊಂಡಂತಿವೆ! ಪ್ರಗತಿಪರ ಸಮಾಜಗಳು ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ಬದಲಾವಣೆಯನ್ನು ಬಯಸುವುದರ ಜೊತೆಗೆ ನವೀನತೆಯನ್ನು ರೂಢಿಸಿಕೊಳ್ಳುವ ಪ್ರಕ್ರಿಯೆಯೇ ಆಧುನೀಕರಣವಾಗಿದೆ"[೨] ಎಂದು ಪ್ರಬಲವಾಗಿ ಪ್ರಚೋದಿಸಿದನು. ಹೀಗಾಗಿ ಹ್ಯಾರಿ ಟ್ರೂಮನ್‌ರನ್ನು ಆಧುನಿಕತೆಯ ಪ್ರಚೋದಕ ಎನ್ನಬಹುದು.

ಇದಕ್ಕೆ ನಮ್ಮ ದೇಶವೂ ಹಿಂದೆ ಬಿದ್ದಿಲ್ಲ! ನಮ್ಮ ದೇಶದ ಪ್ರಥಮ ಪ್ರಧಾನಿ ಜವಾಹರಲಾಲ ನೆಹರೂರವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದ್ದರು– "ಇಂಥ ಹಲವಾರು ಸಾಂಪ್ರದಾಯಿಕ ಚಿಂತನಾ ವಿಧಾನದಿಂದ ನಾವು ಹೊರ ಬರಬೇಕಿದೆ;

ಸಾಂಪ್ರದಾಯಿಕ ವರ್ತನಾ ವಿಧಾನ, ಸಾಂಪ್ರದಾಯಿಕ ಉತ್ಪಾದನಾ ವಿಧಾನ, ಸಾಂಪ್ರದಾಯಿಕ ವಿತರಣಾ ವಿಧಾನ, ಮತ್ತು ಸಾಂಪ್ರದಾಯಿಕ ಅನುಭೋಗ್ಯ ವಿಧಾನ ಇವೆಲ್ಲವನ್ನು ಹೆಚ್ಚು ಆಧುನಿಕ ವಿಧಾನದಲ್ಲಿ ಮಾಡಬೇಕು ಎಂಬುದಾಗಿ ಏನು ಕರೆಯುತ್ತೇವೆಯೋ ಇದಕ್ಕಾಗಿ ಇವೆಲ್ಲವುಗಳಿಂದ ಹೊರಬರಬೇಕಿದೆ. ಒಂದು ದೇಶದ ಮುಂದುವರಿಕೆಯ (ಪ್ರತಿ, ಅಭಿವೃದ್ಧಿ) ಪರೀಕ್ಷೆ ಆಧುನಿಕ ತಾಂತ್ರಿಕತೆಯನ್ನು ಹೇಗೆ ಉಪಯೋಗಿಸಿಕೊಳ್ಳುತ್ತೇವೆ ಎಂಬುದರ ಮೇಲಿದೆ. ಆಧುನಿಕ ತಾಂತ್ರಿಕತೆ ಎಂದರೆ ಕೇವಲ ಒಂದು ಸಾಧನದ ದೊರೆಯುವಿಕೆ ಮತ್ತದರ ಉಪಯೋಗದ ವಿಷಯ ಮಾತ್ರವಲ್ಲ. ಆಧುನಿಕ ತಾಂತ್ರಿಕತೆ ಜೊತೆಗೆ ಆಧುನಿಕ ಚಿಂತನೆ ಬೇಖಿದೆ. ನೀವು ಒಂದು ಆಧುನಿಕ ಸಾಧನ (ಸಲಕರಣೆ) ಜೊತೆಗೆ ಒಂದು ಸಾಂಪ್ರದಾಯಿಕ ಮನಸ್ಸನ್ನು ಹೊಂದುವ ಹಾಗಿಲ್ಲ. ಇದು ಕೆಲಸ ಮಾಡದು."[೩] ಎಂದು ಕರೆ ನೀಡಿದ್ದರು! ಅತ್ತ ಗಾಂಧೀಜಿಯವರು ಗ್ರಾಮ ಸ್ವರಾಜ್ಯದ ಕನಸು ಕಂಡು ನನಸಾಗಿಸಲು ಹೆಣಗುತ್ತಿದ್ದಾಗ, ಇತ್ತ ಆಧುನಿಕ ಭಾರತದ ನಿರ್ಮಾತೃಗಳಲ್ಲಿ ಒಬ್ಬರಾಗಿದ್ದ ಅಂದಿನ ಪ್ರಧಾನಿ ನೆಹರೂರವರು ಆಧುನೀಕರಣವು ಸಂಪ್ರದಾಯವನ್ನು ಹೇಗೆ ಬದಿಗೊತ್ತಬೇಕೆನ್ನುವುದನ್ನು ತಿಳಿಸಿದ್ದರು!

ಸಾಮಾಜಿಕ ಚಲನೆ ಎಂಬುದು ಎಲ್ಲ ಪ್ರಗತಿಪರ ಸಮಾಜಗಳ ಲಕ್ಷಣ. ಹೀಗಾಗಿ ಆಧುನೀಕರಣದ ಪ್ರಾರಂಭ ಎಲ್ಲಿಂದಾಯಿತು ಎಂದು ಹೇಳುವುದು ಅಸಾಧ್ಯದ ಮಾತು. ಸಾಂಸ್ಕೃತೀಕರಣ ಹಾಗೂ ರಾಜಕೀಯ ರಂಗದಲ್ಲಾದ ಆರ್ಥಿಕ ಹೊಸತನದ ರೂಢೀಯೇ ಆಧುನೀಕರಣಕ್ಕೆ ಕಾರಣ ಎನ್ನಬಹುದು. ಭಾರತೀಯ ಸಮಾಜದಲ್ಲಿ ವೈಯಕ್ತಿಕ ಚಲನೆಗೆ ವರೋಧವಿತ್ತಾದರೂ ಸಮಾಜದ ಯಾವುದೋ ಒಂದು ಸಮುದಾಯದ ಮೇಲ್ಮುಖ ಚಲನೆಗೆ ಅಡ್ಡಿ, ಆತಂಕಗಳಿರಲಿಲ್ಲ ಎಂಬುದನ್ನು ಭಾರತೀಯ ಸಮಾಜಶಾಸ್ತ್ರಜ್ಞರು ಹೇಳಿದ್ದನ್ನಿಲ್ಲಿ ಸ್ಮರಿಸಬಹುದು. ಸಂಸ್ಕೃತವು ಸ್ತ್ರೀಯರಿಂದ ಹಾಗೂ ಬ್ರಾಹ್ಮಣ್ಯೇತರರಿಂದ ದೂರವಿತ್ತು. ಸತಿಸಹಗಮನ ಪದ್ಧತಿ ಇಂದು ಇಲ್ಲವಾಗಿದೆ. ತ್ರೇತಾಯುಗ, ದ್ವಾಪರ ಯುಗಗಳಲ್ಲಿ ರಾಜಕೀಯ ಹೋರಾಟ ಮತ್ತು ಪ್ರಜೆಗಳ ರಕ್ಷಣೆ ಕ್ಷತ್ರಿಯರಿಗೇ ಮೀಸಲಾಗಿತ್ತು. ನಂತರ ಇಸ್ಲಾಂ ಧರ್ಮ, ಕ್ರೈಸ್ತ, ಬೌದ್ಧ, ಜೈನ, ಸಿಖ್ ಧರ್ಮದವರೂ ಆ ಸ್ಥಾನವನ್ನು ಪಡೆದುಕೊಂಡಿದ್ದನ್ನಿಲ್ಲಿ ಸ್ಮರಿಸಬಹುದು. ಹಾಗೆಯೇ ಕಲೆ ಮತ್ತು ವಾಸ್ತುಶಿಲ್ಪಗಳ ಶೈಲಿಗೂ ಆಧುನಿಕತೆಗೆ ತೆರೆದುಕೊಳ್ಳಲಿಲ್ಲವೇ? ಹೀಗೆ ಭಾರತೀಯ ಸಮಾಜದ ಮೇಲೆ ಅನ್ಯ ಸಂಸ್ಕೃತಿಗಳ ಅದರಲ್ಲೂ ಪಾಶ್ಚಿಮಾತ್ಯೀಕರಣದ ಪ್ರಭಾವ ಆಗಲಿಲ್ಲವೇ? ಭಾರತೀಯ ಸಮಾಜ ಸಂಸ್ಕೃತಿ, ಸಂಪ್ರದಾಯದೊಂದಿಗೆ ಆಹಾರ-ವಿಹಾರ, ಉಡುಗೆ-ತೊಡುಗೆ,

ಮಾತು–ಮೌನ, ಚಿಂತನ–ಮಂಥನ, ಆಚಾರ–ವಿಚಾರ, ಅಭಿರುಚಿ–ಆಯ್ಕೆ, ವಿಜ್ಞಾನ–ತಂತ್ರಜ್ಞಾನ, ಮನೋರಂಜನೆಯಂತಹ ಜೀವನಕ್ರಮ ಹಾಗೂ ಶೈಲಿಯಲ್ಲೂ ತೀವ್ರ ಬದಲಾವಣೆ ಹೊಂದಿದೆ.

ವಸಹಾತುಶಾಹಿ ಹಾಗೂ ಬಂಡವಾಳಶಾಹಿ ಆಡಳಿತದ ತೆಕ್ಕೆಗೆ ಸಿಕ್ಕು ಆಧುನೀಕರಣ ತಂತಾನೇ ಆವಿರ್ಭವಿಸಿತು. ೨೦ನೇ ಶತಮಾನದ ನಂತರದ ಎಲ್ಲ ರಾಷ್ಟ್ರಗಳನ್ನೂ 'ಆಧುನೀಕರಣದ ರೂಪ'ಗಳೆಂದು ಕರೆಯಬಹುದು!

ಡೇನಿಯಲ್ ಲರ್ನರ್ "ಆಧುನೀಕರಣವು ಒಂದು ಸಾಮಾಜಿಕ ಬದಲಾವಣೆಗಳ ಪ್ರಕ್ರಿಯೆಯಾಗಿದ್ದು ಕಡಿಮೆ ಅಭಿವೃದ್ಧಿ ಹೊಂದಿದ ದೇಶಗಳು ಹೆಚ್ಚು ಅಭಿವೃದ್ಧಿ ಹೊಂದಿದ ದೇಶಗಳ ಗುಣಲಕ್ಷಣಗಳನ್ನು ತಮ್ಮಲ್ಲಿ ಬೆಳೆಸಿಕೊಳ್ಳುವುದು ಎಂದಿದ್ದಾರೆ."[೬]

ಎಸ್.ಜೆ. ಸ್ಮೆಲ್ಸರ್ "ಆಧುನೀಕರಣವು ಒಂದು ಸಮಾಜ ಔದ್ಯೋಗಿಕರಣಗೊಂಡಂತೆ ತನ್ನ ಎಲ್ಲ ಆಯಾಮಗಳಲ್ಲಿ ಬದಲಾವಣೆ ರೂಢಿಸಿಕೊಳ್ಳುವ ಪ್ರಕ್ರಿಯೆ ಎಂದಿದ್ದಾರೆ."[೭]

ಯೋಗೇಂದ್ರಸಿಂಗ್ "ಆಧುನೀಕರಣ ಯಾವುದೇ ಅಂಶಗಳಿಗೆ ಸಂಬಂಧಿಸಿದಂತೆ ವಿಚಾರಾತ್ಮಕ ಭಾವನೆಗಳನ್ನು ರೂಢಿಸಿಕೊಳ್ಳುವುದಾಗಿದೆ."[೮]

ಹೀಗೆ ಆಧುನೀಕರಣವು ಎಲ್ಲ ಪರಿಸರದಲ್ಲೂ ತಂತ್ರಜ್ಞಾನ ಮತ್ತು ಆರ್ಥಿಕ ರಂಗದಲ್ಲಿ ಆದ ಬದಲಾವಣೆಗಳ ನಿಖರತೆಯನ್ನು ನೀಡುತ್ತವೆ. ಪಾರಂಪರಿಕ ಕಸಬುಗಳಲ್ಲೂ ಉತ್ಪಾದನಾ ತಂತ್ರಗಳಲ್ಲಿ ಬದಲಾವಣೆಗಳಾಗಿವೆ. ಕಸಬುದಾರರ ಧಾರ್ಮಿಕ, ಸಾಂಪ್ರದಾಯಿಕ, ಕೌಟುಂಬಿಕ, ಸಂಘಟನೆ ವ್ಯವಸ್ಥೆಯಲ್ಲಿ ಭೌತಿಕ, ಭಾವನಾತ್ಮಕ ಹಾಗೂ ಮಾನಸಿಕ ಬದಲಾವಣೆಗಳಾಗಿರುವುದು ಆಧುನೀಕರಣದ ಪ್ರಭಾವವೇ ಆಗಿದೆ. ಒಟ್ಟಿನಲ್ಲಿ ಆಧುನೀಕರಣ ಎಂದರೆ ಒಂದು ಸಮಾಜದ ಆರ್ಥಿಕತೆಯ ಸಾಮರ್ಥ್ಯವನ್ನು ಕೈಗಾರಿಕೀಕರಣದಿಂದಲೂ ಹಾಗೂ ರಾಜಕೀಯ ಸಾಮರ್ಥ್ಯವನ್ನು ಆಡಳಿತಶಾಹಿಯ ಮೂಲಕವೂ ಹೆಚ್ಚಿಸುವ ಪ್ರಕ್ರಿಯೆ ಎನ್ನಬಹುದು.

ಆಧುನೀಕರಣದ ಜೊತೆಗೆ ಜಾಗತೀಕರಣ, ಪಾಶ್ಚಾತ್ಯೀಕರಣ ಮುಂತಾದವುಗಳೆಲ್ಲವೂ ಜನರಲ್ಲಿ ಹೊಸ ಆಸಕ್ತಿಗಳನ್ನುಹುಟ್ಟಿಸಿ ಆ ಮುಖಾಂತರ ಪಾರಂಪರಿಕವಾಗಿ ಬಂದ ಜನಪದರ ಆಚರಣೆಗಳೂ ಮಂಕಾಗಿವೆ. ಜೊತೆಗೆ ಪಾರಂಪರಿಕ ಕಸಬುಗಳು ಕಡಿಮೆಯಾದಂತೆ ಅದಕ್ಕೆ ಸಂಬಂಧಿಸಿದ ಜನಪದ ಕಲೆ, ಸಾಹಿತ್ಯ, ಆಚರಣೆಗಳೆಲ್ಲವೂ

ಮರೆಯಾಗಲ್ಪಡುತ್ತಿವೆ. ಆಧುನೀಕರಣ ವಿಕೃತ ರೂಪವೇ ಜಾಗತೀಕರಣ. ಇದು ಜನಪದರ ಜೀವನದ ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕ ಜೀವನದ ಮೇಲೂ ತನ್ನ ಕಬಂಧಬಾಹುವನ್ನು ಚಾಚಿದೆ. ಇದಕ್ಕೆ ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳೂ ಹೊರತಾಗಿಲ್ಲ ಎಂಬುದು ನಿರ್ವಿವಾದ.

**ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳು : ಆಧುನೀಕರಣ ಪ್ರಕ್ರಿಯೆಗೆ ಕಾರಣಗಳು :**

ಸಾಮಾನ್ಯವಾಗಿ ಸಮೂಹ ಮಾಧ್ಯಮ, ಔದ್ಯಮೀಕರಣದ ಉತ್ಪಾದನಾ ಹಾಗೂ ಮಾರಾಟ ಕ್ಷೇತ್ರ, ಸರಕಾರದ ಯೋಜ(ಚ)ನೆಗಳು ಹಾಗೂ ಸವಲತ್ತುಗಳು, ಔಪಚಾರಿಕ ಶಿಕ್ಷಣ, ನಗರೀಕರಣ, ಖಾಸಗೀಕರಣ ಹಾಗೂ ಸಾಂಸ್ಕೃತೀಕರಣದ ಪರಿಣಾಮಗಳೇ ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳ ಆಧುನೀಕರಣಕ್ಕೆ ಕಾರಣಗಳಾಗಿವೆ ಎನ್ನಬಹುದು.

ಪಾರಂಪರಿಕ ಕಸಬುಗಳಲ್ಲಿ ಆಧುನೀಕರಣದ ಪ್ರವೇಶವಾಗುತ್ತಿದ್ದಂತೆಯೇ ಆದ ಕೆಲವೊಂದು ಬದಲಾವಣೆಗಳನ್ನೇ ಸಮಕಾಲೀನ ಅವಾಂತರಗಳೆಂಬಂತೆಯೂ, ಸಾಂಸ್ಕೃತಿಕ ವಿನಾಶವೆಂಬಂತೆಯೂ ಚಿತ್ರಿಸಲಾಗುತ್ತಿದೆ!

ಬಹುಶಃ ೧೨ನೇ ಶತಮಾನದಲ್ಲಾದ ವಚನ ಅಥವಾ ಕಾಯಕ ಚಳುವಳಿ; ೧೫-೧೮ನೇ ಶತಮಾನದಲ್ಲಿ ಭಾರತಕ್ಕೆ ಆಗಮಿಸಿದ ಫ್ರೆಂಚರು, ಡಚ್ಚರು, ಪೋರ್ಚುಗೀಸರು ಹಾಗೂ ಬ್ರಿಟೀಷರ ಸಂಘಟಿತ ಗುಂಪುಗಳ ಪಾಶ್ಚಾತ್ಯೀಕರಣದ ಪ್ರಭಾವ; ೨೦ನೇ ಶತಮಾನದ ಪ್ರಪಂಚದ ಮಹಾ ಯುದ್ಧಗಳ ನಂತರದ ಜಾಗತೀಕರಣ, ಪ್ರಾಂತೀಕರಣ, ಕೈಗಾರಿಕೀಕರಣಗಳ ಪ್ರಭಾವವೇ ಕಾರಣಗಾಳಾಗಿ ಕಾಣುತ್ತವೆ.

ಈ ಪರಿಸರದಲ್ಲಿ ಸಂಬಂಧಗಳ ಸಮಾನತೆ, ಮತ ನಿರಪೇಕ್ಷತೆ, ಔದ್ಯೋಗಿಕ ಸಾಮಾಜಿಕ ಚಲನೆ, ಜಾತ್ಯತೀತತೆ, ಅಸ್ಪೃಶ್ಯತೆ ನಿವಾರಣೆ, ಮಹಿಳೆಯರ ಸಬಲೀಕರಣ, ನಗರೀಕರಣ, ಸರಕಾರದ ಅಭಿವೃದ್ಧಿ ಧೋರಣೆಗಳು, ಹೊಸ ಹೊಸ ಆರ್ಥಿಕ ಸಂಸ್ಥೆಗಳು, ನೀತಿಗಳು ಹಾಗೂ ರೂಢಿಗಳು, ಉದಾರವಾದ ಹಾಗೂ ಸಾಮಾಜಿಕ ಮೌಲ್ಯಗಳು ಮುಂತಾದ ಅಂಶಗಳು ಚಾಲ್ತಿಯಲ್ಲಿದ್ದು ತನ್ನ ಪ್ರಭಾವವನ್ನು ಬೀರಿವೆ.

ಆಧುನೀಕರಣವು ಬ್ರಿಟೀಷರ ಆಳ್ವಿಕೆಯಲ್ಲಿ ಆಯ್ಕೆ ಆಧಾರಿತವಾಗಿದ್ದಿತು. ಆದರೆ ಸ್ವತಂತ್ರ ಭಾರತದಲ್ಲಿ ಸಮಾಜದ ಎಲ್ಲಾ ರಂಗಗಳಲ್ಲಿಯೂ ಆಧುನಿಕತೆ ಸಾಧಿಸಲು

ಪ್ರಯತ್ನಿಸಲಾಗಿದೆ. ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳಲ್ಲಿ ಆಧುನಿಕತೆ ಹಾಗೂ ಸಂಪ್ರದಾಯ ಎರಡನ್ನೂ ಒಟ್ಟೊಟ್ಟಿಗೇ ಆಧರಿಸಿ ಪ್ರೋತ್ಸಾಹಿಸಲಾಗುತ್ತಿದೆ. ಈ ಪರಿಸರದ ವಿಶಿಷ್ಟ ಪಾರಂಪರಿಕ ಕಸಬುಗಳಾದ ಇಳಕಲ್ಲ ಸೀರೆ, ಗುಳೇದಗುಡ್ಡದ ಖಣ, ಕಮತಗಿ ಪಟಗ ಮತ್ತು ರುಮಾಲು, ಅಮೀನಗಡದ ಕರದಂಟು, ರಾಜೂರ ಸುಣ್ಣ, ಭಾಗ್ಯನಗರದ ಕೇಶೋದ್ಯಮ, ಕಿನ್ನಾಳ ಕಿಟ್ಟದ ಗೊಂಬೆಗಳು, ಹನಮಸಾಗರ ಕೌದಿ, ಕೊಪ್ಪಳ ಮಂಡಾಳು – ಇವುಗಳಲ್ಲಿ ಕಾಲಕ್ಕೆ ತಕ್ಕಂತೆ ಆಧುನಿಕತೆ ಪ್ರವೇಶಪಡೆದಿದೆ. ಇವುಗಳ ಐತಿಹಾಸಿಕ ಬೆಳವಣಿಗೆ, ವಿಕಾಸದ ಹಾದಿ, ರೂಪಾಂತರದ ಸ್ಥಿತಿ–ಗತಿ, ಉತ್ಪಾದನಾ ವಸ್ತುಗಳ ಮಾರಾಟ ವ್ಯವಸ್ಥೆಗಳನ್ನು ವಿಶ್ಲೇಷಿಸಿದಾಗ ಆಧುನೀಕರಣಕ್ಕೆ ಶರಣಾದ ಅಂಶಗಳನ್ನು ಕಾಣಬಹುದಾಗಿದೆ. ಆದರೂ... ಜನರ ಜೀವನ ಮಟ್ಟ, ಶೈಲಿಯಲ್ಲಿ ಬದಲಾವಣೆ ಮತ್ತು ಅಭಿವೃದ್ಧಿ ಹೊಂದಿದೆಯಾದರೂ ಸಾಂಸ್ಕೃತಿಕ ತಳಹದಿ ಇನ್ನೂ ಗಟ್ಟಿಯಾಗಿಯೇ ಉಳಿದುಕೊಂಡಿದೆ!

**ಇಳಕಲ್ಲ ಸೀರೆ ನೇಕಾರಿಕೆ ಮತ್ತು ಆಧುನೀಕರಣ :**

'ಉಟ್ಟರೆ ಇಳಕಲ್ಲ ಸೀರೆ ಉಡಬೇಕು, ತೊಟ್ಟರೆ ಗುಳೇದ ಗುಡ್ಡದ ಖಣ ತೊಡಬೇಕು' ಎಂಬ ಗಾದೆಯ ಸೃಷ್ಟಿಗೆ ಕಾರಣವಾದ ಇಳಕಲ್ಲ ಸೀರೆಯ ನೇಕಾರ ಮೊದಲು ಕುಣಿಮಗ್ಗದಲ್ಲಿ ಕುಳಿತು ನೇಕಾರಿಕೆ ಮಾಡುತ್ತಿದ್ದ. ನಂತರ ಅದರಲ್ಲಿ ಕೊಂಚ ಆಧುನಿಕತೆ ಇಣುಕಿದಂತೆ ಶೆಟಲ್ ಮಗ್ಗ ಬಂದು ನಿಂತುಕೊಂಡೇ ನೆಯ್ಯ ತೊಡಗಿದ. ಈಗೇನಿದ್ದರೂ ವಿದ್ಯುತ್ ಮಗ್ಗಗಳದೇ ಕಾರುಬಾರು. ಅದರಲ್ಲೂ ಹೊಸ ವಿನ್ಯಾಸದ, ನವ ನವೀನ ಬಣ್ಣ ಬಣ್ಣದ ಸೀರೆಗಳನ್ನು ನೆಯ್ಯುವ ಮಗ್ಗಗಳೂ ಇಳಕಲ್ಲಿನಲ್ಲಿವೆ. ಕಂಡಿಕಿ ಸುತ್ತೋದು ಹಾಗೂ ನೂಲು ತೋಡುವುದು(Yarn Winding) ಮುಂತಾದ ಕೈ ಕೆಲಸಗಳಲ್ಲಿ ಯಂತ್ರಗಳು ಲಗ್ಗೆ ಇಟ್ಟಿವೆ. ಇದೂ ಆಧುನೀಕರಣದ ಪ್ರಭಾವವೇ ಸರಿ.

ಮೊದಲಿದ್ದ ಇಳಕಲ್ಲ ಸೀರೆಗೂ ಈಗಿರುವ ಇಳಕಲ್ಲ ಸೀರೆಗೂ ತುಂಬಾ ವ್ಯತ್ಯಾಸವಿದೆ. ಕಾಲಕ್ಕೆ ತಕ್ಕಂತೆ ಇವುಗಳ ವಿನ್ಯಾಸವೂ ಬದಲಾಗಿದೆ. ಪ್ರಯೋಗಶೀಲ ಮನಸ್ಸಿನ ನೇಕಾರರೇ ಹೊಸ ವಿನ್ಯಾಸದ ಆವಿಷ್ಕಾರಕ್ಕೆ ದಿಟ್ಟಹೆಜ್ಜೆ ಇಡುತ್ತಾರೆ. ಅವಶ್ಯಕತೆಯೇ ಸಂಶೋಧನೆಗೆ ದಾರಿ ಮಾಡಿಕೊಟ್ಟರೆ ಮಹತ್ವಾಕಾಂಕ್ಷೆಯು ಹೊಸತನದ ಸೃಷ್ಟಿಗೆ ಕಾರಣವಾಗುತ್ತದೆ. ವಿದ್ಯುತ್ ಮಗ್ಗಗಳಲ್ಲಿ ವಿನ್ಯಾಸ ಬದಲಿಸಲು ಕಷ್ಟವಾಗುವುದಿಲ್ಲ. ಆದರೆ.. ಕೈಮಗ್ಗದಲ್ಲಿ ಇದಕ್ಕೆ ಅವಕಾಶವಿರುವುದಿಲ್ಲ.

ಶತಮಾನಕ್ಕೂ ಮೊದಲಿದ್ದ ಗಚ್ಚಿದಡಿ ಸೀರೆಗಳಿಗೆ ಬೆಚ್ಚಿ ಬೀಳೀಸುವಷ್ಟು ಬೇಡಿಕೆಯಿತ್ತು. ತರುವಾಯ ನವೀಕರಣಗೊಂಡ ಗೋಮಿದಡಿ ಸೀರೆಗಳೇ ಇಳಕಲ್ಲ ಸೀರೆಗಳೆಂದು ಪ್ರಸಿದ್ಧಿ ಪಡೆಯುವಷ್ಟರ ಮಟ್ಟಿಗೆ ಮಹಿಳೆಯರ ಮನಸೂರೆಗೊಂಡವು. ಇದೀಗ ದಡಿಯಲ್ಲಿ ಆಧುನಿಕತೆಯನ್ನು ಮೈಗೂಡಿಸಿಕೊಂಡ ಗಾಯತ್ರಿದಡಿ ಸೀರೆಯಂತೂ ಸ್ತ್ರೀಯರ ಅಚ್ಚು ಮೆಚ್ಚು.

ಮೊದಲಿದ್ದ ಸಾದಾ ಮತ್ತು ನಾಗಮುರಿ ಸೆರಗುಳ್ಳ ಇಳಕಲ್ಲ ಸೀರೆಗಳು ಹೆಂಗೆಳೆಯರ ಮನಸ್ಸಿನಿಂದ ಮಾಸಿಹೋಗಿವೆ. ಆಧುನೀಕರಣಗೊಂಡ ತೋಪುತೆನಿ ಸೆರಗು ಇಳಕಲ್ಲ ಸೀರೆಯ ಸೆರಗೆಂದೇ ಪ್ರಖ್ಯಾತಿ ಪಡೆಯಿತು. ಇದೀಗ ಇನ್ನೂ ಆಧುನೀಕರಣಕ್ಕೆ ಹೊರಳಿದ ಸೆರಗು ಚಂದ್ರಕಾಳಿ ಸೀರೆಯ ಸೆರಗು ಚೆಲುವೆಯರ ಚಿತ್ತಾಕರ್ಷಣೆಗೆ ಒಳಗಾಗಿದೆ.

ಸೀರೆಯ ಒಡ್ಲು(ಗರ್ಭ) ಕೂಡಾ ಆಧುನಿಕತೆಯತ್ತ ಹೊರಳಿದ್ದು ರೂಫಿಲ್, ಚೌಕಾನಿ, ಚಂದ್ರಕಾಳಿ, ರಾಗಾವಳಿ ಮುಂತಾದ ಸೀರೆಗಳು ನವೀನತೆಗೆ ಒಳಗಾಗಿವೆ. ಈಗೀಗ ಇಳಕಲ್ಲ ಸೀರೆಯು ಆಧುನಿಕ ಮಹಿಳೆಯರ ವಿಶೇಷ ಹಾಗೂ ವೈಭವದ ಕಾರ್ಯಕ್ರಮಗಳಲ್ಲಿ ಉಡುವ ಸೀರೆಗಳ ಪಟ್ಟಿಯಲ್ಲಿ ಅಗ್ರಸ್ಥಾನ ಪಡೆಯಲು ಆಧುನೀಕರಣಕ್ಕೆ ಶರಣಾಗಿರುವುದೇ ಕಾರಣ ಎನ್ನಬಹುದು!

ಆಧುನಿಕ ಮಹಿಳೆಯರ ಮನಮೆಚ್ಚಿಸುವಲ್ಲಿ ತೀವ್ರ ಪೈಪೋಟಿಗಿಳಿದಿರುವಂತಿರುವ ಇಳಕಲ್ಲ ಸೀರೆಗಳ ತಯಾರಿಕೆ ಇನ್ನೂ ಒಂದಷ್ಟು ಹೆಜ್ಜೆ ಮುಂದು ಹೋಗಿ ಸೀರೆಯಲ್ಲಿಯೇ ಕುಪ್ಪಸ (With Blouse) ಕೂಡಾ ಇರುವುದರಿಂದ ಮ್ಯಾಚಿಂಗ್ ಬ್ಲೌಜ್ (Matching Blouse) ಹುಡುಕುವ ಪ್ರಮೆಯವೇ ಬರುವುದಿಲ್ಲ! ಇನ್ನಷ್ಟು ಆಧುನಿಕತೆಗೆ ಹೊರಳಿದ ಇಳಕಲ್ಲ ಸೀರೆಯು ಡ್ರೆಸ್ ಮಟೀರಿಯಲ್ ಆಗಿಯೂ ತಯಾರಾಗುತ್ತಿದ್ದು, ಭಾರತೀಯ ಯುವತಿಯರು ಇಷ್ಟಪಡುವ ಚೂಡಿ, ಲೆಹಂಗ ಹಾಗೂ ಲಂಗ ದಾವಣಿ ಪೀಸುಗಳಾಗಿಯೂ ಹೊರಬಂದು ಮಾರುಕಟ್ಟೆಗೆ ಲಗ್ಗೆಯಿಟ್ಟಿವೆ! ಇದೆಲ್ಲವೂ ತರಾವರಿ ಸೀರೆಗಳು ಮಾರುಕಟ್ಟೆಗೆ ನುಗ್ಗಿದ ಪರಿಣಾಮಕ್ಕೆ ಇಳಕಲ್ಲ ಸೀರೆ ನೇಕಾರ ಮಾಡಿದ ಆಧುನೀಕರಣದ ಜಾದೂ!!

**ಗುಳೇದಗುಡ್ಡದ ಖಣ ನೇಕಾರಿಕೆ ಮತ್ತು ಆಧುನೀಕರಣ :**

ಸೀರೆಯನ್ನು ಭಾರತೀಯ ನಾರಿಯರ ಉಡುಗೆ ಎಂದೂ, ಕುಪ್ಪಸವನ್ನು ಭಾರತೀಯ ನಾರಿಯರ ತೊಡುಗೆ ಎಂದೂ, ಇದುವೇ ಭಾರತೀಯ ನಾರಿಯರ ಸಂಸ್ಕೃತಿ ಎಂದೂ ಒ(ಅ)ಪ್ಪಿಕೊಂಡಿದ್ದೇವೆ. ಅದರಲ್ಲೂ ಇಳಕಲ್ಲ ಸೀರೆ ಮಹಿಳೆಯರ ಮಾನವಾದರೆ, ಗುಳೇದಗುಡ್ಡದ ಖಣ ನಾರಿಯರ ಪ್ರಾಣವಾಗಿವೆ. ಹೀಗೆ ಇಳಕಲ್ಲ ಸೀರೆಗೂ ಗುಳೇದಗುಡ್ಡದ ಖಣಕ್ಕೂ ಅವಿನಾಭಾವ ಸಂಬಂಧ! 'ಉಟ್ಟರೆ ಇಳಕಲ್ಲ ಸೀರೆ ಉಡಬೇಕು, ತೊಟ್ಟರೆ ಗುಳೇದ ಗುಡ್ಡದ ಖಣ ತೊಡಬೇಕು' ಎಂಬ ಗಾದೆಯೇ ಸೃಷ್ಟಿಯಾಗುವಂತಹ ಗಟ್ಟಿ ಸಂಬಂಧ!! ಇವುಗಳನ್ನು ಜಾನಪದ ಸೊಗಡಿನ ಸೀರೆ-ಕುಪ್ಪಸವೆಂದೂ, ಮುತ್ತೈದೆಯ ಲಕ್ಷಣವೆಂದೂ, ಭಾರತೀಯ ಸಂಸ್ಕೃತಿ ಎಂದೂ ಕುಷ್ಟಗಿ ಪರಿಸರವೂ ಒಳಗೊಂಡಂತೆ ಉತ್ತರ ಕರ್ನಾಟಕದ ಜನರು ಹಾಗೂ ಮಹಾರಾಷ್ಟ್ರದ ಕೆಲವು ಜನಾಂಗಗಳು ಒ(ಅ)ಪ್ಪಿಕೊಂಡಿದ್ದಾರೆಂದರೆ ಈ ನಾರಿಯರ ಎದೆಗಪ್ಪುವ, ಒಪ್ಪುವ ಚಿತ್ತಾಪಹಾರಿ ಚಿತ್ತಾರದ ಖಣಗಳ ಮಹತ್ವ ಅರಿವಾಗುತ್ತದೆ.

ಗುಳೇದಗುಡ್ಡದ ಖಣ ನೇಕಾರಿಕೆಯಲ್ಲೂ ಆಧುನೀಕರಣ ಇಣುಕಿದೆ ಹಾಗೆಯೇ ಕೊಂಚ ಕೆಣಕಿದೆ! ಇಲ್ಲಿಯ ನೇಕಾರನೂ ಕುಣಿಮಗ್ಗದಿಂದ ವಿದ್ಯುತ್ ಮಗ್ಗಕ್ಕೂ ಜಿಗಿದಿದ್ದಾನೆ. ಕಂಡಿಕಿ ಸುತ್ತೋದು ಹಾಗೂ ನೂಲು ತೋಡುವುದು(Yarn Winding) ಮುಂತಾದ ಕೈ ಕೆಲಸಗಳಲ್ಲಿ ಯಂತ್ರಗಳು ಲಗ್ಗೆ ಇಟ್ಟಿವೆ.

ಇಳಕಲ್ಲ ಸೀರೆ ಉತ್ಪಾದನೆಯಲ್ಲಿ ಆಧುನೀಕರಣವು ಇತರೆ ಸೀರೆಗಳ ಉತ್ಪಾದಕರಿಗೆ ಸವಾಲೊಡ್ಡುವ ಭರದಲ್ಲಿ, ಗುಳೇದಗುಡ್ಡದ ಖಣಕ್ಕೆ ತೊಡರುಗಾಲು ಹಾಕಿದಂತಾಗಿದೆ! ಹೇಗೆಂದರೆ ಆಧುನಿಕ ಮಹಿಳೆಯರ ಮನಮೆಚ್ಚಿಸುವಲ್ಲಿ ತೀವ್ರ ಪೈಪೋಟಿಗಿಳಿದಿರುವಂತಿರುವ ಇಳಕಲ್ಲ ಸೀರೆಗಳ ತಯಾರಿಕೆ ಇನ್ನೂ ಒಂದಷ್ಟು ಹೆಜ್ಜೆ ಮುಂದು ಹೋಗಿ ಸೀರೆಯಲ್ಲಿಯೇ ಕುಪ್ಪಸ (With Blouse) ಕೂಡಾ ತಯಾರಾಗುತ್ತಿರುವುದು ಇಳಕಲ್ಲ ಸೀರೆಯ ಜೊತೆಗಾತಿಯಂತಿದ್ದ ಗುಳೇದಗುಡ್ಡದ ಖಣಕ್ಕೇ ಎರವಾಗಿದೆ! ಸೀರೆಗೆ ತಕ್ಕಂತಹ ಮ್ಯಾಚಿಂಗ್ ಬ್ಲೌಜ್ (Matching Blouse) ಸೀರೆಯಲ್ಲಿಯೇ, ಸೀರೆಯೊಂದಿಗೇ ಕುಪ್ಪಸವೂ ಸಿಕ್ಕುವಾಗ ಈ ಗುಳೇದಗುಡ್ಡದ ಖಣವನ್ನು ಯಾರು ತಾನೆ ಕೊಂಡುಕೊಳ್ಳಲು ಇಷ್ಟಪಡುತ್ತಾರೆ? ಏನೋ ಒಂದಷ್ಟು ಮಂಗಳಕಾರ್ಯದಲ್ಲಿ ಈ ಕುಪ್ಪಸವನ್ನು ತೊಟ್ಟುಕೊಳ್ಳುವ ಸಂಪ್ರದಾಯವಿರುವುದರಿಂದ

ಹಾಗೂ ಹಳೆಯ ಕಾಲದ ಕೆಲವು ಮಹಿಳೆಯರು ಉತ್ತರಕರ್ನಾಟಕ ಹಾಗೂ ಮಹಾರಾಷ್ಟ್ರದಲ್ಲಿ ಇರುವುದರಿಂದ ಗುಳೇದಗುಡ್ಡದಲ್ಲಿ ಮಗ್ಗಗಳು ಇನ್ನೂ ಲಟಕ್ ಪಟಕ್ ಚಟಕ್ ಪಟಕ್ ಎಂದು ಸದ್ದು ಮಾಡುತ್ತಿವೆ! "ಮಹಾರಾಷ್ಟ್ರದಾಗ ಒಂದು ಮುದುಕಿ ಸತ್ರ... ಗುಳೇದಗುಡ್ಡದಾಗ ಒಂದು ಮಗ್ಗ ನಿಂತಾಂಗs" ಎಂದು ಹೇಳುವ ಇಲ್ಲಿಯ ನೇಕಾರ ಈ ಆಧುನೀಕರಣದಿಂದ ಸಂಕಷ್ಟಕ್ಕೆ ಸಿಲುಕಿದ್ದಾನೆ.

**ಕಮತಗಿ ಪಟಗ ಮತ್ತು ರುಮಾಲು ನೇಕಾರಿಕೆ ಹಾಗೂ ಆಧುನೀಕರಣ :**

ಬಹು ಸಂಸ್ಕೃತಿಯ ನಮ್ಮ ನಾಡಿನಲ್ಲಿ ಪುರುಷರಿಗೆ ಅಂಗಿ-ಧೋತಿ-ಕಮತಗಿಯ ರುಮಾಲ(ಪಟಗ)ಗಳನ್ನು 'ಉತ್ತರ ಕರ್ನಾಟಕದವರ ದೇಸಿ ದಿರಿಸು' ಎಂದು ಒ(ಅ)ಪ್ಪಿಕೊಂಡಿದ್ದೇವೆ. ಕಮತಗಿ ರುಮಾಲ ಅಥವಾ ಪಟಗವನ್ನು ಜಾನಪದ ಸೊಗಡಿನ ಪೌರುಷದ ಕಿರೀಟ, ಗಂಡು ಮೆಟ್ಟಿನ ನಾಡಿನ ಗಂಡಸರ ಲಕ್ಷಣವೆಂದು ಕುಷ್ಟಗಿ ಪರಿಸರವೂ ಒಳಗೊಂಡಂತೆ ಉತ್ತರ ಕರ್ನಾಟಕದ ಜನರು ಹಾಗೂ ಮಹಾರಾಷ್ಟ್ರದ ಕೆಲವು ಜನಾಂಗಗಳು ಒ(ಅ)ಪ್ಪಿಕೊಂಡಿದ್ದಾರೆಂದರೆs ಈ ರುಮಾಲದ ಮಹತ್ವ ಅರ್ಥವಾಗುತ್ತದೆ.

ವೈಜ್ಞಾನಿಕವಾಗಿ ತಲೆ ಹಾಗೂ ಕಿವಿಗಳಿಗೆ ಸದಾ ರಕ್ಷಾ ಕವಚದಂತಿರುವ ಪಟಗ ಅಥವಾ ರುಮಾಲು ಆಧುನೀಕರಣಕ್ಕೆ, ಆಧುನಿಕ ಜೀವನ ಶೈಲಿಗೆ ಸಿಲುಕಿ ನರಳುತ್ತಿದೆ. ಕೆಲವು ಜನಾಂಗಗಳಿಗೆ ಇದು ಅನಿವಾರ್ಯವೂ, ಕೆಲವು ಮಂಗಳ ಕಾರ್ಯದಲ್ಲಿ ಇದು ಅವಶ್ಯಕವೂ ಆಗಿರುವುದರಿಂದ ಇನ್ನೂ ಕೊಂಚ ಜೀವಂತವಿದೆ! ಇದೀಗ ದೇಸಿ ಸಂಸ್ಕೃತಿ, ಪರಂಪರೆ ಕ್ಷೀಣಿಸುತ್ತಿರುವಂತೆ ಪಟಗ ಅಥವಾ ರುಮಾಲು ಉದ್ಯಮವೂ ಆತಂಕದ ಕ್ಷಣಗಳನ್ನು ಎದುರಿಸಲು ಸಂಸ್ಕೃತಿಯ ನಿರ್ಲಕ್ಷ್ಯ , ಫ್ಯಾಶನ್ ಮೋಹದಂತಹ ಆಧುನೀಕರಣದ ಜೀವನ ಶೈಲಿಯೇ ಕಾರಣ ಎನ್ನಬಹುದು!

"ಈಗ ಬೊಕ್ಕತಲಿ ಬಿಟಗೊಂಡು ಫ್ಯಾಶನ್ ಮಾಡೋ ಕಾಲ ಬಂದೈತ್ರಿ, ನಮ್ಮ ಕೈಯ್ಯಾಗ ಸತುವು(ಶಕ್ತಿ) ಇರೋ ತನಕ ಲಾಳಿ ಜಗ್ಗತೀವ್ರಿ, ಮುಂದ ಹ್ಯಾಂಗೋ ಏನೋ.." ಎಂದು ನಿಟ್ಟುಸಿರು ಬಿಡುವ ಕಮತಗಿ ಗ್ರಾಮದ ಪಟಗ ನೇಕಾರತಿ ಶಾಂತವ್ವ ಗಂಜಿಹಾಳರ ತನ್ನ ಆತಂಕಕ್ಕೆ ಕಾರಣ, ಇದೇ ಆಧುನೀಕರಣ! ಪಟಗದ ನೇಕಾರ ಮಾತ್ರ ಇನ್ನೂ ಕುಣಿಮಗ್ಗದಲ್ಲಿಯೇ ನೇಯ್ಯುತ್ತಿರುವುದನ್ನು ನೋಡಿದರೆ... ಆಧುನೀಕರಣದ ಗಾಳಿ ಸೋಂಕಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

**ಅಮೀನಗಡದ ಕರದಂಟು ತಯಾರಿಕೆ ಮತ್ತು ಆಧುನೀಕರಣ :**

ನಮ್ಮದು ತಿನಿಸು ರಸಿಕರ ನಾಡು. ವೈವಿಧ್ಯಮಯ ತಿಂಡಿ- ತಿನಿಸುಗಳಿಂದಲೇ ಅನೇಕ ಊರುಗಳು ಸುಪ್ರಸಿದ್ಧಿಯಾಗಿವೆ. ಅದರಲ್ಲೂ ಕರದಂಟಿಗೆ ಪ್ರಸಿದ್ಧಿ ಪಡೆದಿರುವ ಅಮೀನಗಡ ಆಧುನೀಕರಣದ ತಂಗಾಳಿಯಲ್ಲಿಯೂ ತೇಲಾಡುತ್ತಿದೆ! 'ಒಂದು ಸೇಬು ಒಬ್ಬ ವೈದ್ಯನಿಗೆ ಸಮ' ಹೇಗೋ ಹಾಗೆಯೇ ಅಮೀನಗಡ ಕರದಂಟೂ ಕೂಡ! ವೈವಿಧ್ಯಮಯ ಪೌಷ್ಠಿಕಾಂಶಗಳಿಂದ ತಯಾರಾದ ಈ ಕರದಂಟು ದೇಹ ಪುಷ್ಠಿಗೆ ಯೋಗ್ಯವಾದ ಖಾದ್ಯ. ಬಾಯಲ್ಲಿ ನೀರೂರಿಸುವುದಷ್ಟೇ ಅಲ್ಲ, ಪೌಷ್ಠಿಕತೆಯ ಪರಮಾವಧಿಯಿಂದ ಕೂಡಿದೆ.

ಮೊದಲು ಹಲಗೆ ಅಂಟು ಎಂದು ಮರದ ಹಲಗೆಯಲ್ಲಿ ತಯಾರಾಗುತ್ತಿದ್ದ ಅಂಟಿ(ಕರದಂಟಿ)ನಲ್ಲಿ ಸರಳ ಹಾಗೂ ವಿರಳ ಸಾಮಗ್ರಿಗಳಿರುತ್ತಿದ್ದವು. ಪ್ರಾರಂಭದಲ್ಲಿ ಕುಸ್ತಿಪಟುಗಳಿಗಾಗಿಯೇ ತಯಾರಾಗುತ್ತಿದ್ದ ಕರದಂಟು ಎಂಬ ಸಿಹಿ ಆಹಾರ ಖಾದ್ಯವೀಗ ಬಾಣಂತಿಯರ, ಋತುಮತಿಯಾದ ಬಾಲಕಿಯರ, ಗರ್ಭಿಣಿಯರ, ಮುದುಕರ ಹಾಗೂ ಮಕ್ಕಳ ಆರೋಗ್ಯ ವೃದ್ಧಿಗಾಗಿ ಬೇಕಾಗುವ ಎಲ್ಲ ಪೋಷಕಾಂಶಗಳು ಇರುವುದರಿಂದ ತುಂಬಾ ಬೇಡಿಕೆಯಲ್ಲಿರುವ ಖಾದ್ಯ ಇದಾಗಿದೆ.

ಇದೀಗ ಈ ಕ್ಷೇತ್ರಕ್ಕೂ ಆಧುನೀಕರಣದ ಸ್ಪರ್ಶ ಪ್ರಭಾವ ಬೀರತೊಡಗಿದೆ. ಕರದಂಟು ತಯಾರಿಕಯಲ್ಲಿ ಯಂತ್ರಗಳ ಬಳಕೆಯಾಗುತ್ತಿದೆ. ಬೆಲ್ಲ ಅಥವಾ ಸಕ್ಕರೆಯನ್ನು ಕರಗಿಸುವ ಯಂತ್ರ, ಎಲ್ಲ ಒಣ ಹಣ್ಣುಗಳು ಹಾಗೂ ಇನ್ನಿತರೆ ಸಾಮಗ್ರಿಗಳನ್ನು ಹಾಕಿ ಬೆರೆಸಲೂ ಯಂತ್ರ, ಕರದಂಟು ತಯಾರಾದ ಮೇಲೆ ಸೂಕ್ತ ಆಕಾರದಲ್ಲಿ ಕತ್ತರಿಸಲೂ ಯಂತ್ರ ಬಳಕೆಯಾಗುತ್ತಿದೆ! ಆಗ ಕೇವಲ ಬೀದಿ ಬದಿಯ ತಿಂಡಿಯಾಗಿದ್ದ ಕರದಂಟು ಇಂದು ದೊಡ್ಡ ದೊಡ್ಡ ಮಳಿಗೆಗಳಲ್ಲಿ, ಅತ್ಯಾಧುನಿಕ ವಿನ್ಯಾಸದ ಗಾಜಿನ ಪೆಟ್ಟಿಗೆಯಲ್ಲಿ ಸ್ಥಾನ ಗಿಟ್ಟಿಸಿಕೊಂಡಿದೆ! ತಮ್ಮದೇ ಆದ ಪ್ಯಾಕಿಂಗ್ ವ್ಯವಸ್ಥೆ, ತಮ್ಮದೇ ಆದ ಟ್ರೇಡ್ ಮಾರ್ಕ್ ಹಾಗೂ ನೋಂದಣಿ ವ್ಯವಸ್ಥೆ (Trade Marked and Registered)ಯ ಜೊತೆಗೆ ಜಾಗತಿ ನೋಂದಣಿಯಾದ ಐ.ಎಸ್.ಓ.( ISO Certified) ಪ್ರಮಾಣ ಪತ್ರವನ್ನು ಪಡೆಯುವ ಮೂಲಕ ದೇಶ ವಿದೇಶಗಳಿಗೂ ತನ್ನ ಸಿಹಿ ಪಯಣ ಬೆಳೆಸುತ್ತಾ, ಫೇಸ್‌ಬುಕ್ ಮತ್ತು ವಾಟ್ಸಪ್‌ಗಳ ಮೂಲಕ ಬೇಡಿಕೆ ಪಡೆಯುತ್ತಾ, ಕೋರಿಯರ್ ಮೂಲಕ ಗ್ರಾಹಕರ ಮನ- ಮನೆ ತಲುಪುತ್ತಾ ತುಂಬಾ ತುಂಬಾನೇ ಆಧುನೀಕರಣವನ್ನು ಮೈಗೂಡಿಸಿಕೊಂಡಂತಿದೆ!

**ರಾಜೂರ ಸುಣ್ಣ ತಯಾರಿಕೆ ಮತ್ತು ಆಧುನೀಕರಣ :**

ಆಧುನೀಕರಣದ ದಾಳಿಗೆ ತುತ್ತಾಗಿ ನರಳಿದ ಮತ್ತೊಂದು ಗುಡಿಕೈಗಾರಿಕೆ ಸುಣ್ಣಗಾರಿಕೆ. ಆಧುನಿಕ ಜ'ಗತ್ತಿನ' ಜನರು ಬಣ್ಣಕ್ಕೆ ಮರುಳಾದಷ್ಟು ಬೇರ್‍ಯಾವುದಕ್ಕೂ ಮರುಳಾದಂತೆ ಕಾಣಿತ್ತಿಲ್ಲ. ಕೆಲವೊಂದು ಸಂದರ್ಭಗಳಲ್ಲಿ ಪ್ಯಾಕೆಟ್ ಸುಣ್ಣ ಹಾಗೂ ಡಿಸ್ಟೆಂಪರ್‌ಗೂ ಸೆಡ್ಡು ಹೊಡೆದು ನಿಂತಿದ್ದ ರಾಜೂರ ಸುಣ್ಣ ಗ್ರಾಮೀಣ ಜನರ ಜನಮನ ಸೂರೆಗೊಂಡಿತ್ತು. ನಿಜವಾದ ಜನಪದರ ಸುಣ್ಣವೆಂದರೆ ಅದು ರಾಜೂರ ಸುಣ್ಣ ಮಾತ್ರ ಎಂಬ ಹಂತಕ್ಕೆ ತಲುಪಿದ್ದು ಇದೀಗ ಇತಿಹಾಸ!

ಕಲ್ಲಿನ ಸುಣ್ಣಕ್ಕೆ ಪರ್ಯಾಯವಾಗಿ ಯಾವಾಗ ಕಪ್ಪೆಚಿಪ್ಪಿನ ಸುಣ್ಣ ಮಾರುಕಟ್ಟೆಯನ್ನು ಪ್ರವೇಶಿಸಿತೋ ಅಲ್ಲಿಗೆ ರಾಜೂರ ಸುಣ್ಣಕ್ಕೆ ಆತಂಕ ಎದುರಾಯಿತು. ಆಧುನೀಕರಣದ ಫಲವೇ ಈ ಪ್ಯಾಕೆಟ್ ಸುಣ್ಣ. ತುಂಬಾ ಬೆಳ್ಳಗೆ ಕಾಣುವ ಪ್ಯಾಕೆಟ್ ಸುಣ್ಣ ಸಿಕ್ಕುವಾಗ ಅಷ್ಟೊಂದು ಬೆಳ್ಳಗಲ್ಲದ ಈ ರಾಜೂರ ಸುಣ್ಣವನ್ನು ಯಾರು ತಾನೆ ಕೊಂಡು ಕೊಳ್ಳುತ್ತಾರೆ? ಮಳೆಗಾಲದಲ್ಲಿ ತಯಾರಿಸಲಾಗದ ಸುಣ್ಣದ ಬದಲಿಗೆ ಸದಾ ಮಾರುಕಟ್ಟೆಯಲ್ಲಿ ಸಿಕ್ಕುವ ಪ್ಯಾಕೆಟ್ ಸುಣ್ಣವನ್ನೇ ಜನರು ನೆಚ್ಚಿಕೊಂಡರು. ಇದಕ್ಕೆಲ್ಲಾ ಕಪ್ಪೆಚಿಪ್ಪಿನ ಸುಣ್ಣ, ಸಮ್, ಡಿಸ್ಟೆಂಪರ್ ಮುಂತಾದ ತರಾವರಿ ಬಣ್ಣಗಳು ಜನರ ಮನಸ್ಸಿನಲ್ಲಿ ಬಣ್ಣ ಬಣ್ಣದ ಕನಸುಗಳನ್ನು ಬಿತ್ತುವಾಗ ಈ ಕಲ್ಲು ಸುಣ್ಣವನ್ನು ಕೇಳುವವರಿಲ್ಲವಾಯಿತು. ತಾಂಬೂಲದಲ್ಲಿ ಬಳಸಲು ಅತ್ಯಂತ ಯೋಗ್ಯವಾಗಿದ್ದರೂ ಅಲ್ಲಿಯೂ ಸನ್ನದ್ಧಗೊಂಡ ಸುಣ್ಣದ ಚೀಟುಗಳು ಹಾಗೂ ಟ್ಯೂಬ್‌ಗಳೂ ದಾಳಿ ಮಾಡಿವೆ. ದೊಡ್ಡ ಕಾರ್ಖಾನೆಗಳಲ್ಲಿ ಉತ್ಪಾದಿಸಲ್ಪಡುವ ಆಧುನಿಕ ಸುಣ್ಣಕ್ಕೆ ಆಧುನೀಕರಣವಲ್ಲದೇ ಮತ್ತೇನೂ ಕಾರಣವಾಗಲಾರದು.

**ಭಾಗ್ಯನಗರದ ಕೇಶೋದ್ಯಮ ಮತ್ತು ಆಧುನೀಕರಣ :**

'ಕಸದಿಂದ ರಸ' ಎಂಬ ತತ್ವದ ಅಡಿಯಲ್ಲಿ ನಡೆಯುತ್ತಿರುವ ಗೃಹಕೈಗಾರಿಕೆ ಕೇಶೋದ್ಯಮ. ತಲೆಯನ್ನು ಬಾಚಿಕೊಳ್ಳುವ ಸ್ತ್ರೀಯರು ತಮ್ಮ ತಲೆಯಿಂದ ಉದುರಿದ ಕೂದಲನ್ನು ಸಿಂಬೆ ಸುತ್ತಿ ಎಸೆಯುವವರೇ ಹೆಚ್ಚಿದ್ದ ಕಾಲದ ನಂತರ ಅದನ್ನು ನೆರಕಿಯಲ್ಲೋ, ಪ್ಲಾಸ್ಟಿಕ್ ಕೈಚೀಲದಲ್ಲೋ ಸಂಗ್ರಹಿಸತೊಡಗಿದರು. ಇದಕ್ಕೆ ಕಾರಣ ಆಧುನೀಕರಣ! ಆ ಕೂದಲುಗಳಿಂದಲೇ ಗ್ರಾಮೀಣ ಸೊಗಡಿನ ಚೌರಿಕೂದಲನ್ನು ತಯಾರಿಸಲು ಪ್ರಾರಂಭಿಸಿದರು. ಮೋಟು ಜಡೆಯ ಹೆಂಗೆಳೆಯರೆಲ್ಲ ಚೌರಿಕೂದಲನ್ನು

ತಮ್ಮ ಕೂದಲಿನೊಂದಿಗೆ ಸೇರಿಸಿ ದಪ್ಪನೆಯ ಹಾಗೂ ಉದ್ದನೆ ಜಡೆ ಮಾಡಿಕೊಂಡು ತಮ್ಮ ಸೌಂದರ್ಯವನ್ನು ವೃದ್ಧಿಸಿಕೊಂಡರು.

ಇಲ್ಲಿಯವರೆಗೆ ಬರೀ ಚೌರಿಕೂದಲಾಗಿ ರೂಪುಗೊಳ್ಳುತ್ತಿದ್ದ ಕೂದಲು ಆಧುನೀಕರಣದಿಂದಾಗಿ ಜಾಗತೀಕರಣದ ಕಾವು ಪಡೆದು ವಿಗ್ಗು ತಯಾರಿಸಲು ಬಳಕೆಯಾಗುವುದರ ಮೂಲಕ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ತನ್ನದೇ ಆದ ಛಾಪು ಮೂಡಿಸಿತು! ಜನಪದರ ಅಲಂಕಾರಿಕಾ ವಸ್ತುವಾಗಿದ್ದ ಚೌರಿಕೂದಲು ಮೂಲೆ ಸೇರಿದವು. ಮೋಟು ಜಡೆಯ, ಚೋಟುದ್ದ ಕೂದಲಿನಿಂದ ಹೆಂಗೆಳೆಯರಿಗೆ ಬ್ಯೂಟಿಪಾರ್ಲರ್‌ಗಳಲ್ಲಿ ಫ್ಯಾಶನ್ ಟಿಪ್ಸ್ ಸಿಕ್ಕತೊಡಗಿದವು. ಹೀಗಾಗಿ ವಿಗ್ ತಯಾರಿಕೆಗಾಗಿ ಸಂಸ್ಕರಿಸಿದ ಕೂದಲು ವಿದೇಶಕ್ಕೆ ಹಾರತೊಡಗಿತು. ಇದೇ ಕೂದಲು ವಿದೇಶಕ್ಕೆ ಕಳ್ಳ ಸಾಗಾಟವಾಗುವ ಮೂಲಕ ರಫ್ತು ಆದಾಯಕ್ಕೂ ಖೋತಾ ಆಗುವಷ್ಟರ ಮಟ್ಟಿಗೆ ಆಧುನೀಕರಣಕ್ಕೆ ತುತ್ತಾಗಿದೆ!

**ಕಿನ್ನಾಳ ಕಿಟ್ಟದ ಗೊಂಬೆ ತಯಾರಿಕೆ ಮತ್ತು ಆಧುನೀಕರಣ :**

ಶತಮಾನಗಳ ಇತಿಹಾಸವಿರುವ ಕರ್ನಾಟಕದ ಜನಪದರ ಕಲೆಯಾಗಿದ್ದ ಕಿನ್ನಾಳದ ಕಿಟ್ಟದ ಗೊಂಬೆಕಲೆ ತುಂಬಾ ವಿಶಿಷ್ಟವಾದದ್ದು. ಇದಕ್ಕೂ ಆಧುನೀಕರಣದ ಆಹ್ವಾನ ಸಿಕ್ಕದೆ! ಮೂಲತಃ ಹಣ್ಣಿನ ತಟ್ಟೆ, ಗ್ರಾಮದೇವತೆ ಹಾಗೂ ಗೊಂಬೆಗಳನ್ನು ತಯಾರಿಸುತ್ತಿದ್ದ ಕಲಾವಿದರು ಮಾರುಕಟ್ಟೆ ದೃಷ್ಟಿಯಿಂದ ಆಧುನಿಕ ವಸ್ತುಗಳನ್ನೂ ತಯಾರಿಸುತ್ತಿದ್ದಾರೆ! ದಸರೆಯಲ್ಲಿ ದುರ್ಗಾದೇವಿ, ಗೌರಿ ಹುಣ್ಣಿಮೆಗೆ ಗೌರಿ, ದೀಪಾವಳಿಗೆ ಲಕ್ಷ್ಮೀದೇವಿ, ಗಣೇಶ ಚತುರ್ಥಿಗೆ ಗಜಾನನ ಹೀಗೆ ವಿವಿಧ ಹಬ್ಬಗಳಲ್ಲಿ ಮೂರ್ತಿ ತಯಾರಿಸಿಕೊಡುತ್ತಿರುವ ಪಾರಂಪರಿಕ ಕಿನ್ನಾಳ ಕಲೆ ಕಾಲಕ್ಕೆ ತಕ್ಕಂತೆ ಬದಲಾಗುತ್ತಾ ಆಧುನಿಕ ಸ್ಪರ್ಶ ಪಡೆಯುತ್ತಿದೆ.

ಇತ್ತೀಚಿಗಂತೂ ಟೀಪಾಯ್ ಮೇಲೆ ಉಬ್ಬುಚಿತ್ರ (ಎಂಬೋಸಿಂಗ್ ವರ್ಕ್) ತಯಾರಿಕೆಯ ಬಗ್ಗೆ ಯುವಕರು ಹೆಚ್ಚು ಆಸಕ್ತಿ ಹೊಂದಿದ್ದಾರೆ. . "ಸರ್, ಈ ಟೀಪಾಯ್‌ಗಳಿಗೆ ಇದೀಗ ಆನ್ ಲೈನ್ ಮೂಲಕ ಬೇಡಿಕೆ ಹೆಚ್ಚಾಗಿದೆ. ಮೊನ್ನೆ ಮೊನ್ನೆ ಒಂದನ್ನು ಇಂಗ್ಲೆಂಡಿಗೂ, ಮತ್ತೊಂದನ್ನು ಅಮೇರಿಕಾಕ್ಕೂ ಕಳಿಸಿದ್ದೇವೆ. ಗಣ್ಯರ ಮನೆಗಳಿಗೆ ಅಲಂಕಾರಿಕ ವಸ್ತುಗಳ ತಯಾರಿಕೆಗೂ ಬೇಡಿಕೆ ಬರುತ್ತಿದೆ. ಈಗೆಲ್ಲಾ ಇ-ಬ್ಯಾಂಕಿಂಗ್ ವ್ಯವಹಾರ ನಡೆಯುವುದರಿಂದ ಉತ್ತಮ ಕಲೆಗೆ ಖಂಡಿತಾ ಬೆ(ನೆ)ಲೆ ಇದೆ." ಎಂಬ ತೃಪ್ತಿಯ ಭಾವದಿಂದ ಕಿಶೋರ ಚಿತ್ರಗಾರ ಹೇಳಿಕೊಳ್ಳುತ್ತಾರೆ. ಮೊದಲಿನಂತೆ ಗ್ರಾಮೀಣ ಕಲೆಯ ತಯಾರಿಕೆ ಕಡಿಮೆಯಾಗಿದ್ದರೂ ಕೆಲವರು ಆಧುನಿಕತೆಗೆ ತಕ್ಕಂತೆ ಹೊಸ ಹೊಸ

ಕಲಾಕೃತಿಗಳಾದ ಎಲೆ-ಅಡಿಕೆ ತಟ್ಟೆ ನೆನಪಿನ ಕಾಣಿಕೆಗಳು, ತರಕಾರಿ ತಟ್ಟೆ, ಗೋಡೆಫಲಕಗಳು, ಶೋಕೇಸ್ ಫಲಕಗಳು, ಮೊಮೆಂಟಮ್ಸ್ ಇತ್ಯಾದಿಗಳನ್ನು ತಯಾರಿಸುತ್ತಿದ್ದಾರೆ.

ಈ ಕಲೆಗೆ ಇನ್ನಷ್ಟು ಆಧುನಿಕ ಸ್ಪರ್ಶ ನೀಡುವ ವಿಶಿಷ್ಟ ಪ್ರಯೋಗವೀಗ ಕೇಂದ್ರ ಲಲಿತಕಲಾ ಅಕಾಡೆಮಿ ಹಾಗೂ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಸಹಯೋಗದಲ್ಲಿ ನಡೆಯಿತು. ಕಲಾವಿದರ ಅತ್ಯಾಧುನಿಕ ಕಲ್ಪನೆಯ ಮೂಸೆಯಿಂದ ಹತ್ತು ಹಲವಾರು ವಿಭಿನ್ನ ರೀತಿಯಲ್ಲಿ ಕಿನ್ನಾಳ ಕಲೆ ಮೂಡಿಬರುತ್ತಿರುವುದು ಆಧುನೀಕರಣದ ಪ್ರಭಾವವೇ ಸರಿ.

೨೬ನೇ ಜನವರಿ ೨೦೧೩ರಂದು ರಾಷ್ಟ್ರರಾಜಧಾನಿ ನವದೆಹಲಿಯಲ್ಲಿ ಜರುಗಿದ ಭಾರತದ ಹೆಮ್ಮೆಯ ಗಣರಾಜ್ಯೋತ್ಸವ ಪರೇಡ್‌ನಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ ಕಿನ್ನಾಳ ಕಲೆಯ ಸ್ತಬ್ದಚಿತ್ರ ಅನಾವರಣಗೊಂಡಿತ್ತು ಮಾತ್ರವಲ್ಲ ದೇಶ-ವಿದೇಶದ ಗಣ್ಯರಿಂದ ಪ್ರಶಂಸೆಗೆ ಪಾತ್ರವಾಗಿದ್ದು ಇತಿಹಾಸದ ಪುಟದಲ್ಲಿ ಅಚ್ಚೊತ್ತಿದೆ.

**ಹನಮಸಾಗರ ಕೌದಿ ಹೊಲಿಗಾರಿಕೆ ಮತ್ತು ಆಧುನೀಕರಣ :**

ಶತ ಶತಮಾನಗಳಿಂದಲೂ ಕೌದಿ ಉದ್ದಿಮೆಯನ್ನೇ ನಂಬಿಕೊಂಡಿದ್ದ ಹನಮಸಾಗರದ ಕೌದಿ ಹೊಲಿಯುವವರ ಬಾಳಿನಲ್ಲಿ ಆಧುನೀಕರಣ ವಿಧಿಯಾಟವಾಡುತ್ತಿದೆ! 'ಬಡವರ ರತ್ನಗಂಬಳಿ' ಅಂತಲೇ ಪ್ರಸಿದ್ಧಿ ಪಡೆದಿದ್ದ ಕೌದಿಯನ್ನು ಅವಸಾನದ ಅಂಚಿನತ್ತಲೂ ತಳ್ಳುತ್ತಿದೆ! ಕೌದಿಯ ಸ್ಥಾನದಲ್ಲಿ ಬಣ್ಣ ಬಣ್ಣದ ಆಧುನಿಕ ಶೈಲಿ ಹಾಸಿಗೆ ಮತ್ತು ಹೊದಿಕೆಗಳು ಮಾರುಕಟ್ಟೆಯಲ್ಲಿ ಲಗ್ಗೆಯಿಟ್ಟಿವೆ. ಅದೂ ಕೌದಿಯ ಕೂಲಿಗಿಂತಲೂ ಕಡಿಮೆ ದರಕ್ಕೆ ಹೊಸ ರಗ್ಗು, ಚಾದರ, ಜಮಖಾನ ಇತ್ಯಾದಿಗಳು ಮಾರಾಟಕ್ಕೆ ಅಣಿಯಾಗಿವೆ. ಹೀಗಿರುವಾಗ ಆಧುನಿಕ ಜೀವನ ಶೈಲಿಯನ್ನು ಇಷ್ಟಪಡುವ ಈಗಿನ ಯುವ ಪೀಳಿಗೆ ಕೌದಿಯನ್ನು ಹೇಗೆತಾನೆ ಬಳಸಿಯಾರು?

ಹಳೆಯ ಹಾಗೂ ಸಂಪ್ರದಾಯಸ್ಥ ಜನರು ಕೌದಿಯನ್ನು ಇಷ್ಟಪಡುತ್ತಾರೆಂದು ನಿಟ್ಟುಸಿರು ಬಿಡುವ ಕೌದಿ ತಯಾರಕರಿಗೆ ಮತ್ತೊಂದು ಆಘಾತ ಕಾದಿದೆ! ಕೌದಿ ಉದ್ಯಮಕ್ಕೀಗ ಕಾಡುತ್ತಿರುವುದು ರಾಟೆಗಳ ಭರಾಟೆ! ಆಂಧ್ರದ ಕೆಲವೊಂದು ಸಂಚಾರಿ ಜನಾಂಗಗಳು ರಾಟೆಗಳಿಂದ ಕೌದಿಯನ್ನು ತಯಾರಿಸಿಕೊಡಲು ಬೈಕಿನಲ್ಲಿ ಮನೆ ಮನೆಗೆ

ತೆರಳಿ ಹಳೆಯ ಬಟ್ಟೆ ಸಂಗ್ರಹಿಸಿ, ಕೌದಿಯನ್ನು ಹೊಲಿದು ಪುನಃ ಮನೆ ಬಾಗಿಲಿಗೇ ತಂದೊಪ್ಪಿಸುತ್ತಿದ್ದಾರೆ. ಅದೂ ಕಡಿಮೆ ದರದಲ್ಲಿ!

ಆಧುನಿಕ ಹೊದಿಕೆ ಹಾಗೂ ಹಾಸಿಗೆಗಳು ಒಂದೆಡೆಯಾದರೆ ಕೌತುಕದ ಕೌದಿಗಳ ಸಾಮ್ರಾಜ್ಯದಲ್ಲಿ ಯಂತ್ರ ರಕ್ಕಸನ ಅಟ್ಟಹಾಸಕ್ಕೆ ಕೌದಿ ಹೊಲಿಯುವವರು ನಲುಗಿ ಹೋಗಿದ್ದಾರೆ. ಇದೆಲ್ಲಕ್ಕೂ ಕಾರಣ ಆಧುನೀಕರಣ!

ಯಾವ ಆಧುನೀಕರಣ ಕೌದಿ ತಯಾರಿಕೆಗೆ ಮುಳುವಾಗಿದೆಯೋ, ಯಾವ ಯುವ ಹಾಗೂ ಆಧುನಿಕ ಜೀವನ ಶೈಲಿಯ ಜನರು ಕೌದಿಯ ಬಗ್ಗೆ ಅಸಡ್ಡೆ ತೋರಿದ್ದಾರೋ ಅದೇ ಆಧುನಿಕ ಜೀವನ ಶೈಲಿಯ ಜನರೇ ಇದೀಗ ಕೌತುಕದ ಕೌದಿಯತ್ತ ವಾಲುತ್ತಿದ್ದಾರೆ! ಹೌದು ಧಾರವಾಡದ ಸಿರಿವಿಲೇಜ್ ಆರ್ಟ್ಸ್, ಕ್ರಾಸ್‌ಸ್ಟಿಚ್ ಡಿಸೈನರ್ ಮತ್ತು ಕೌದೀಸ್ ಸಂಸ್ಥೆಯ ಮಮತಾ ಸತ್ತೂರರವರು ಇದೀಗ 'ಮೇಕ್ ಇನ್ ಇಂಡಿಯಾ'ದಿಂದ ಪ್ರೇರಿತಗೊಂಡು ಈ ಕೆಲಸಕ್ಕೆ ಕೈ ಹಾಕಿದ್ದಾರೆ. ಸದ್ದಿಲ್ಲದೇ ಸಾಮಾಜಿಕ ಜಾಲತಾಣಗಳ ಮೂಲಕ ಸುದ್ದಿಯಾಗಿದೆ! ಜನಪದರ ರತ್ನಗಂಬಳಿಯಾಗಿದ್ದ ಕೌದಿಗೆ ಮಾಡರ್ನ್ ಟಚ್ ನೀಡಿ, ಆಧುನಿಕ ಜನರ ಮನಸ್ಸಿನಿಂದ ಮರೆಯಾಗಿರುವ ಕೌದಿಯನ್ನು ಪುನಃ ಜನಪ್ರಿಯಗೊಳಿಸಲು ಪಣ ತೊಟ್ಟಿದ್ದಾರೆ! ರೀ ಕನೆಕ್ಟ್, ವಾಲ್ ಮಾರ್ಟ್ ಮತ್ತು ರಿಯಾಜ್ ಕಂಪನಿಗಳು ಕೌದಿಗಳ ಸ್ಯಾಂಪಲ್ ಪಡೆದಿದ್ದು ಉತ್ತಮ ಮಾರುಕಟ್ಟೆಯನ್ನು ಸೃಷ್ಟಿಸಿಕೊಂಡಿದೆ! ಇದೂ ಆಧುನೀಕರಣದ ಪ್ರಭಾವವೇ.

**ಕೊಪ್ಪಳದ ಮಂಡಾಳು ತಯಾರಿಕೆ ಮತ್ತು ಆಧುನೀಕರಣ :**

ಲಘು ಉಪಹಾರಕ್ಕೆಂದೇ ಸೃಷ್ಟಿಯಾದ 'ಉಬ್ಬಿಸಿದ ಖಾದ್ಯ ಧಾನ್ಯ'; ಮಂಡಾಳು ಉದ್ದಿಮೆ ಕೊಪ್ಪಳದಲ್ಲಿ ಹಲವಾರು ವರ್ಷಗಳಿಂದಲೂ ಏರುಮುಖವಾಗಿತ್ತು. ವಗ್ಗರಣಿ ಸ್ಪೆಶಲ್ ಎಂದೇ ಕುಷ್ಟಗಿ ಪರಿಸರದಲ್ಲಿ ಖ್ಯಾತಿಯಾಗಿರುವ ಕೊಪ್ಪಳ ಮಂಡಾಳು ಉದ್ದಿಮೆ ಇಂದು ಆಧುನೀಕರಣ ದಿಕ್ಕನ್ನೇ ಬದಲಿಸಿ ಇಳಿಮುಖಗೊಳಿಸಿದೆ. ಆಧುನಿಕ ಜೀವನ ಶೈಲಿಯ ಜನರು ತಮ್ಮ ಉಪಹಾರದಲ್ಲಿ ವಿದೇಶಿ ಖಾದ್ಯಕ್ಕೂ ಮಾರುಹೋಗಿದ್ದಾರೆ. ಗಿರ್‌ಮಿಟ್ಟ, ಭೇಲ್‌ಪುರಿ, ಚುಡುವಾ (ಚೋಡಾ) ಮುಂತಾದ ಫಾಸ್ಟ್ ಫುಡ್ ಸಂಸ್ಕೃತಿಯಲ್ಲಿ ಮಂಡಾಳಿಗೂ ಕೊಂಚ ಸ್ಥಾನವಿದೆಯಾದರೂ ಬಹುತೇಕ ಸ್ಥಾನ ವಿದೇಶಿ ಖಾದ್ಯಕ್ಕೆ ದಕ್ಕಿದೆ. ಗುಡಿಕೈಗಾರಿಕೆಯಾಗಿದ್ದ ಮಂಡಾಳು ತಯಾರಿಕಾ ಕ್ಷೇತ್ರಕ್ಕೂ ಆಧುನಿಕ ಯಂತ್ರ ಕಾಲಿಟ್ಟಿದೆ. ಗುಡಿಕೈಗಾರಿಕೆ ಇದೀಗ ಬೃಹತ್ ಕೈಗಾರಿಕೆಯಾಗಿದೆ. ಕುಟುಂಬದ ಸದಸ್ಯರೇ ಕೂಡಿಕೊಂಡು

ಮಾಡುತ್ತಿದ್ದ ಪಾರಂಪರಿಕ ಕಸಬಿನಲ್ಲಿ ಯಂತ್ರಗಳು ದಾಪುಗಾಲ್ಹಾಕುತ್ತಿವೆ. ನೂರಾರು ಕುಟುಂಬಗಳ ಕೆಲಸವನ್ನು ಒಂದು ಯಂತ್ರ ಕಿತ್ತುಕೊಳ್ಳುತ್ತದೆ ಎನ್ನುವುದಕ್ಕೆ ಈ ಉದ್ದಿಮೆಯೇ ಸಾಕ್ಷಿಯಾಗುತ್ತಿದೆ.

ಗುಡಿಕೈಗಾರಿಕೆಯಾಗಿರುವ ಮಂಡಾಳು ತಯಾರಿಕೆಯ ಮೂರು ಹಂತದಲ್ಲಿ ಯಂತ್ರ ಬಳಕೆಯಾಗುತ್ತಿದೆ. ಹುರಿಯುವಾಗ ಅರಳುವ ಮಂಡಾಳು ತಿರುವಲು ಗುರುಮಾ ಬಳಸುವವರು ಇದೀಗ ಕಡಿಮೆಯಾಗಿದ್ದು, ಅವುಗಳ ಜಾಗವನ್ನು ತಿರುಗುವ ಯಂತ್ರಗಳು ತುಂಬುತ್ತಿವೆ. ಕುದಿಸಿದ ಭತ್ತವನ್ನು ಹುರಿಯಲು ರೋಸ್ಟರ್ ಯಂತ್ರ ಬಂದಿದೆ. ಆ ಭತ್ತದ ಸಿಪ್ಪೆ(ಹೊಟ್ಟು ಅಥವಾ ತೌಡು)ಯನ್ನು ಬೇರ್ಪಡಿಸಲು ಗಿರಣಿ ಬಂದಿದೆ. ಗೋಣಿ ಚೀಲದಲ್ಲಿ ತಲೆಯ ಮೇಲೆ ಹೊತ್ತು ಬರುತ್ತಿದ್ದ ಮಂಡಾಳು ಇಂದು ವಿವಿಧ ಗಾತ್ರದ ಪ್ಯಾಕೆಟ್‌ಗಳಲ್ಲಿ ಲಾರಿಯಲ್ಲಿ ಮಾರುಕಟ್ಟೆಗೆ ಲಗ್ಗೆಯಿಡುತ್ತಿರುವುದೂ ಕೂಡಾ ಆಧುನೀಕರಣದ ಪ್ರಭಾವಕ್ಕೊಳಗಾಗಿಯೇ ಎಂಬುದು ನಿರ್ವಿವಾದ.

ಹೀಗೆ ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳಲ್ಲಿ ಅನೇಕ ಹಂತದಲ್ಲಿ ಆಧುನೀಕರಣ ಹಾಸುಹೊಕ್ಕಾಗಿದೆ. ಆಧುನೀಕರಣ ಪ್ರಕ್ರಿಯೆಯು ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳಲ್ಲಿನ ಇಣುಕು ನೋಟವನ್ನು ನೋಡಿದಾಗ 'ಯುಗಾದಿಯ ಬೇವು-ಬೆಲ್ಲ'ವನ್ನು ನೆನಪಿಸುವಂತಿದೆ! ಕೆಲವು ಕಸಬುಗಳ ಒಳಿತಿಗೆ ದಾರಿಯಾದರೆ ಇನ್ನೂ ಹಲವು ಕಸಬುಗಳ ಅವನತಿಗೆ ಕಾರಣವಾಗುತ್ತಿದೆ! ಜನಪದರ ಪಾರಂಪರಿಕ ಕಸಬುಗಳು ಸಾಯಲು ನಿರಾಕರಿಸಿದ ಜೀವಂತ ಪಳಿಯುಳಿಕೆಗಳಿದ್ದಂತೆ. ಇವು ಬದುಕುತ್ತವೆ ಆದರೆ... ಮೂಲ ನೆ(ಸೆ)ಲೆಯಲ್ಲಿ ಬದುಕಲಿ ಎಂಬುದು ಕಸಬುದಾರರ ಆಸೆ.

**ಸಮಸ್ಯೆಯಾಗಿ ಆಧುನೀಕರಣ :**

ಭಾರತದಂತಹ ಮುಂದುವರಿಯುತ್ತಿರುವ ದೇಶದ ಸಾಂಪ್ರದಾಯಿಕ, ಗ್ರಾಮೀಣ ಮತ್ತು ಅನಕ್ಷರಸ್ಥರನ್ನೊಳಗೊಂಡ ಸಮಾಜದಲ್ಲಿ ಆಧುನೀಕರಣ ಸುಲಭದ ಮಾತಲ್ಲ. ಹಿಂದೆ ಈಸ್ಟ್ ಇಂಡಿಯಾ ಕಂಪನಿಯ ಏಕಪಕ್ಷೀಯ ಬೆಲೆ ನಿಗಧಿಗೆ ಬೇ'ಸತ್ತು' ತಮ್ಮ ಬರಳನ್ನೇ ಕತ್ತರಿಸಿದ್ದರು ಬಾಂಗ್ಲಾದ ಮಸ್ಲೀನ್ ಬಟ್ಟೆ ನೇಕಾರರು! ಕೇವಲ ಎರಡು ದಶಕಗಳ ಹಿಂದಷ್ಟೇ ಕಾರ್ಮಿಕ ವರ್ಗವು ಕಂಪ್ಯೂಟರೀಕರಣವನ್ನು ವಿರೋಧಿಸಿದ್ದು ಇದಕ್ಕೆ ತಾಜಾ ಉದಾಹರಣೆ ಎನ್ನಬಹುದು. ಇದಕ್ಕೆ ಕಾರಣ ಬರೀ ತಂತ್ರಜ್ಞಾನವಲ್ಲ; ಬದಲಿಗೆ ಅದನ್ನು ಬಳಸಿಕೊಂಡು ಹುಟ್ಟಿದ ಉದ್ಯಮ ಅಥವಾ ಶ್ರಮಕ್ಕಿಂತ ಬಂಡವಾಳವನ್ನೇ ಪ್ರಧಾನವಾಗಿ ಪರಿಗಣಿಸಿದ

ಧಣಿಗಳ ಧೋರಣೆ! ಶ್ರಮ ಜೀವಿಗಳಿಗಷ್ಟೇ ಭಯ ಹುಟ್ಟಸುತ್ತಿರುವ ಆಧುನಿಕ ತಂತ್ರಜ್ಞಾನ ಶ್ರಮವನ್ನು ಬಳಸಿಕೊಂಡು ಉಳಿತಾಯ ಮೌಲ್ಯವನ್ನು ಸೃಷ್ಟಿಸುತ್ತಿದ್ದ ಉದ್ಯಮಪತಿಗಳಲ್ಲೂ ಇಂದು ಆತಂಕ ಮನೆಮಾಡಿದೆ! ಅದರಲ್ಲೂ ಪಾರಂಪರಿಕ ಕಸಬುಗಳಲ್ಲಿ ಇದರ ಪ್ರಭಾವ ತುಂಬಾ ಪರಿಣಾಮಕಾರಿಯಾಗಿರುತ್ತದೆ. ಆರ್ಥಿಕವಾಗಿ ಔದ್ಯೋಗಿಕರಣ ಹೆಚ್ಚಿದೆಯಾದರೂ ಆಧುನಿಕತೆ ಹಾಗೂ ಸಾಂಪ್ರದಾಯಿಕತೆಗಳ ನಡುವೆ ತಿಕ್ಕಾಟಕ್ಕೂ ಕಾರಣವಾಗಿದೆ. ಆಧುನಿಕತೆ ಬದಲಾವಣೆಗೆ ಬಯಸಿದರೆ, ಸಂಪ್ರದಾಯ ಅದಕ್ಕೆ ಪ್ರತಿರೋಧ ಒಡ್ಡುತ್ತದೆ. ಹೀಗೆ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಆಧುನೀಕರಣದಿಂದ ಯಾವಾಗಲೂ ವಿರೋಧ, ಪ್ರತಿರೋಧ ಇದ್ದೇ ಇರುತ್ತದೆ. ಉದಾಹರಣೆಗೆ ಭಾರತೀಯ ಸಂಪ್ರದಾಯ ಮಹಿಳೆ ಸೀರೆಯನ್ನು ಉಡುವುದೇ ಚೆನ್ನ ಎಂದಾದರೆ, ಆಧುನಿಕ ಪಾಶ್ಚಾತ್ಯ ಸಂಸ್ಕೃತಿ ಅದನ್ನು ಒಪ್ಪುವುದಿಲ್ಲ. ಭಾರತೀಯ ಆಹಾರ ಸಂಪ್ರದಾಯಸ್ಥರು ಅಮೀನಗಡದ ಕರದಂಟು ಆರೋಗ್ಯಕರ ಎಂದರೆ ಆಧುನಿಕ ಜೀವನ ಶೈಲಿಯ ಜನರಿಗೆ ಎಂದರೆ ಫಿಜ್ಜಾ, ಬರ್ಗರ್‌ಗಳೇ ಪಂಚಪ್ರಾಣ.

ನಾವು ಎಷ್ಟೇ ಬದಲಾದರೂ ಶುಭ ಸಮಾರಂಭಗಳು, ಮಂಗಲ ಕಾರ್ಯಗಳು, ಸಾಂಪ್ರದಾಯಿಕ ಕಾರ್ಯಗಳು ಸಾಂಪ್ರದಾಯಿಕ ಮುಹೂರ್ತದಂತೆಯೇ ನಡೆಯಬೇಕೆಂದು ಬಯಸುತ್ತೇವೆ. ಭಾರತೀಯರ ಮದುವೆಗಳಲ್ಲಿ ವಧು-ವರರು ಎಷ್ಟೇ ಸಿರಿವಂತ, ವಿದ್ಯಾವಂತ, ಬುದ್ಧಿವಂತರಾಗಿದ್ದರೂ, ಆಧುನಿಕ ಶೈಲಿಯ ಜೀವನವನ್ನೇ ನಡೆಸುತ್ತಿದ್ದರೂ, ವಿದೇಶದಲ್ಲಿಯೇ ವಾಸವಾಗಿದ್ದರೂ ನಮ್ಮ ಸಂಪ್ರದಾಯದಂತೆಯೇ ಸಾಗಲಿ ಎಂಬುದನ್ನೇ ಬಯಸುವ ಮನಸ್ಥಿತಿಯಲ್ಲಿ ನಾವರುತ್ತೇವೆ. ಈ ಮನಸ್ಥಿತಿಯೇ ನಮ್ಮ ಪರಂಪರೆ. ಈ ಪರಂಪರೆಯೇ ನಮ್ಮ ಪಾರಂಪರಿಕ ಕಸಬುಗಳ ಉಸಿರಾಟಕ್ಕೆ ಆಮ್ಲಜನಕವಿದ್ದಂತೆ! ಇದರಿಂದಾಗಿಯೇ ಪಾರಂಪರಿಕ ಕಸಬುಗಳು ಆಧುನಿಕತೆಯನ್ನು ಬಯಸುವುದಿಲ್ಲ. ಈಗಾಗಲೇ ಭಾರತೀಯ ಸಮಾಜದಲ್ಲಿ ಆಧುನೀಕರಣದ ನಿಯೋಗಿಗಳು ಹಾಗೂ ಆಧುನೀಕರಣಗೊಂಡ ಕಸಬುಗಳ ಸಂಸ್ಥೆಗಳ ನಡುವೆ ದೊಡ್ಡ ದೊಡ್ಡ ಕಂದಕಗಳೇ ನಿರ್ಮಾಣವಾಗಿವೆ. ಇದು ಆಧುನೀಕರಣ ಪ್ರಕ್ರಿಯೆಗೆ ಪೂರಕವಲ್ಲ.

"ಇಂದಿನ ಆಧುನಿಕತೆ ಎಂಬುದು ಸಾಮಾಜಿಕ ಚಲನೆಯನ್ನು, ಸೃಷ್ಟಿಯನ್ನು ಮತ್ತು ದೇಸಿ ತಿಳುವಳಿಕೆಯ ಮೇಲೆ ನಿಂತಿರುವ ಕಸಬುಗಳನ್ನು ಇನ್ನೆಂದೂ ಮರಳಿ ಜೀವಂತಗೊಳಿಸಲಾಗದ ರೀತಿಯಲ್ಲಿ ವಿವೇಚನಾ ರಹಿತವಾಗಿ ಬುಡಮೇಲು ಮಾಡಿ ಸ್ಥಳಾಂತರಿಸಿಬಿಡುತ್ತವೆ. ಈಗಿನ ಯಂತ್ರ ಯುಗವು ಬರುತ್ತಿದ್ದಂತೆಯೇ ದುಡಿಯುವ ವರ್ಗಗಳ ಒಂದು ಜೈವಿಕ ಸಮುದಾಯವು ನಿರ್ನಾಮವಾಗುವುದರ ಜೊತೆಗೆ ಆ

ದುಡಿಯುವ ವರ್ಗದ ಸಮಸ್ತ ಸಂಸ್ಕೃತಿಯನ್ನು ಮತ್ತು ಅದು ಪ್ರತಿಪಾದಿಸುವ ಇಡೀ ಜೀವನ ಕ್ರಮವೇ ನಶಿಸುತ್ತದೆ. ಆ ಮುಖಾಂತರ ಆ ಜೈವಿಕ ವರ್ಗಗಳ ಸಾಂಸ್ಕೃತಿಕ ಅನನ್ಯತೆಯಾಗಿ ನಾಶಗೊಳ್ಳುತ್ತದೆ."[೬]

ಅಭಿವೃದ್ಧಿ ಹೊಂದುತ್ತಿರುವ ಸಮಾಜದಲ್ಲಿನ ಮೂಲ ಜಿಜ್ಞಾಸೆಗಳು ಬದಲಾವಣೆ ಬಯಸುವ ಜೊತೆಗೆ ಸಂಪೂರ್ಣ ಒಳಗೊಳ್ಳುವಿಕೆಯಾದರೆ ಅದನ್ನು ಆಧುನೀಕರಣ ಎನ್ನಬಹುದು. ನಗರೀಕರಣ, ಕೈಗಾರಿಕೀಕರಣ, ಸಾಮಾಜಿಕ ಚಲನೆ, ವಿಭಿನ್ನತೆ, ಜಾತ್ಯಾತೀತತೆ, ಮಾಧ್ಯಮ ವಿಸ್ತರಣೆ, ಶಿಕ್ಷಣ, ಸಾಕ್ಷರತೆ, ರಾಜಕೀಯ ಸಹಭಾಗಿತ್ವಗಳನ್ನು ಈ ಆಧುನೀಕರಣ ಉತ್ತೇಜಿಸುತ್ತದೆ. ಇದರಿಂದಾಗಿ ಆರ್ಥಿಕ ಅಭಿವೃದ್ಧಿ, ಸಾಂಸ್ಕೃತಿಕ ಬದಲಾವಣೆ ಮತ್ತು ರಾಜಕೀಯ ಬದಲಾವಣೆಗಳ ಒಂದು ಸಮತೋಲಿತ ಪ್ರಕ್ರಿಯೆಯಾಗಿದೆ. ಇದು ಕೇವಲ ಒಂದೆರಡು ದಿನಗಳಲ್ಲೇ ನಡೆದು ಹೋಗುವ ಪವಾಡವಲ್ಲ! ತುಂಬಾ ಸಮಯದ ನಂತರ, ಬಹಳಷ್ಟು ಹಂತಗಳನ್ನು ದಾಟಿದ ನಂತರ ಏಕರೂಪತೆಯನ್ನು ಪಡೆಯುತ್ತದೆ!

ಸಾಂಪ್ರದಾಯಿಕ ತಳಹದಿ ಹೊಂದಿರುವ ಗ್ರಾಮೀಣ ಸಮಾಜವೊಂದು ಆಧುನೀಕರಣಗೊಳ್ಳಲು ಬಯಸಿದರೆ, ಸಮಸ್ಯೆಗಳನ್ನು ಎದುರಿಸುವುದು ತೀರಾ ಸಾಮಾನ್ಯ. ತೃತೀಯ ಜಗತ್ತಿನ ದೇಶಗಳಲ್ಲಿ ಬಂಡವಾಳ ಹರಿಯುವಿಕೆ ಆರ್ಥಿಕವಾಗಿ ವರ್ಗಪ್ರಭೇಧಗಳನ್ನು ರೂಪಿಸಿದರೆ ಕೆಲವೆಡೆ ರಾಜಕೀಯವಾಗಿ ಕುಲೀನ ವರ್ಗಗಳು ಪ್ರವರ್ಧಮಾನಕ್ಕೆ ಬಂದು ಅಧಿಕಾರದ ಏಕಸ್ವಾಮ್ಯತೆಯನ್ನು ಪಡೆದವು! ಅಂದರೆ ಇಲ್ಲಿ ಜನರ ನಿರೀಕ್ಷೆಯಂತೆ ಬಂಡವಾಳ ಹೂಡಿಕೆ ನಿರ್ದಿಷ್ಟ ಕಾಲಘಟ್ಟದಲ್ಲಿ ಅದರ ಫಲಗಳನ್ನು ಪಸರಿಸುವ ಅಥವಾ ವಿತರಣೆ ಮಾಡುವ ರೀತಿಯಲ್ಲಿ ಅಭಿವೃದ್ಧಿ ನಡೆಯಲಿಲ್ಲ! ಹೀಗಾಗಿ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಅಸಮಾನತೆ, ಬಡತನ ನಿರೀಕ್ಷಿತ ಹಂತ ತಲುಪಲಿಲ್ಲ! ಹಾಗಾದರೆ ಆಧುನೀಕರಣ ಸಿದ್ಧಾಂತದಲ್ಲಿ ದೋಷವಿದೆಯೋ, ಅನುಸರಿಸಿದ ಕ್ರಮದಲ್ಲಿ ದೋಷವಿದೆಯೋ ಎಂಬ ಚಿಂತನೆ ದಟ್ಟವಾಗಿ ಕಾಡುತ್ತಿದೆ! ಎಲ್ಲದಕ್ಕೂ ಮುಂದುವರಿದ ದೇಶಗಳನ್ನೇ ಅವಲಂಬಿಸಬೇಕಾದ ಸ್ಥಿತಿ ತಲುಪಿದ್ದೇವೆ! ಇದೇ ಅವಲಂಬನಾ ಸಿದ್ಧಾಂತವು ಆಧುನೀಕರಣ ಸಿದ್ಧಾಂತದ ಪ್ರಮುಖ ಪ್ರಬಲ ಟೀಕಾಕಾರನಾಯಿತು! ಉದಾರವಾದಿ ಪರ್ವದಲ್ಲಿಯೂ ಆಧುನೀಕರಣ ಸಿದ್ಧಾಂತವು ಚರ್ಚೆಗೆ ಒಳಗಾಗುತ್ತಿರುವುದನ್ನು ನೋಡಿದಾಗ ಆಧುನೀಕರಣವು ಅನುಮಾನಾಸ್ಪದವಾಗಿ ಕಾಣುತ್ತಿದೆ!

ಬದಲಾವಣೆ, ಪ್ರಗತಿಗಳೊಂದಿಗೆ ಆಧುನಿಕತೆಯನ್ನು ನಿರೀಕ್ಷಿಸಿ ಮುಂದುವರೆಯುವ ಯಾವುದೇ ಸಮಾಜ ತನ್ನ ಆಧುನೀಕರಣಗೊಳ್ಳುವ ಆಸೆಯನ್ನು ಕೈಬಿಡದೇ ಮುಂದುವರೆಯುವುದು ಅದರ ಯಶಸ್ಸಿಗೆ ದಾರಿಯಾಗುತ್ತದೆ ಎಂದು ಆಧುನೀಕರಣದ ಆಪೋಶನಕ್ಕೆ ಒಳಗಾದವರು ಪಾರಂಪರಿಕ ಕಸಬುಗಳತ್ತ ಇಣುಕು ನೋಟ ಬೀರಬೇಕಿದೆ! ಅವರ ಸಂಕಷ್ಟಗಳಿಗೆ ಸ್ಪಂದಿಸಬೇಕಿದೆ. ಈ ನಿಟ್ಟಿನ ವಿಚಾರವಾದಿಗಳ ಸಮಾಜದ ಒಂದು ಭಾಗವೇ ಆಗಿರುವ ಜನಪದರ ಪಾರಂಪರಿಕ ಕಸಬುಗಳು ಆಧುನೀಕರಣಗೊಳ್ಳುವ ಆಸೆಯನ್ನು ಕೈಬಿಟ್ಟರೆ ಮಾತ್ರ ಉಳಿದಾವು! ಅಂತೆಯೇ ಆಧುನೀಕರಣ ಪ್ರಕ್ರಿಯೆಯು ಕುಷ್ಟಗಿ ಪರಿಸರದ ಪಾರಂಪರಿಕ ಕಸಬುಗಳಲ್ಲಿ ಇಣುಕು ನೋಡದಿರುವುದೇ ಚೆನ್ನ! ಈ ಸವಾಲನ್ನು 'ವಿನಾಶದ ಮುನ್ಸೂಚನೆ' ಎಂದು ಕಾಣುವ ಬದಲಿಗೆ ಹೊಸ ಸಾಧ್ಯತೆಯನ್ನಾಗಿ ಕಾಣುವುದು ಒಳಿತು.

*

